ನೆಮ್ಮದಿಯ ನಾಳೆ ನಮ್ಮದು

# ಹೊಸತು

ISSN 2319-7307




ಏಪ್ರಿಲ್ ೨೦೧೯

ಬೆಲೆ : ₹ ೨೫

ಭಾರತ ಸಂವಿಧಾನ

ಪ್ರಸ್ತಾವನೆ

ಭಾರತದ ಜನತೆಯಾದ ನಾವು ಭಾರತವನ್ನು
ಸಾರ್ವಭೌಮ ಸಮಾಜವಾದಿ ಜಾತ್ಯತೀತ
ಜನತಂತ್ರಾತ್ಮಕ ಗಣರಾಜ್ಯವನ್ನಾಗಿ
ರೂಪಿಸುವುದಕ್ಕಾಗಿ
ಭಾರತದ ಎಲ್ಲ ನಾಗರಿಕರಿಗೆ
ಸಾಮಾಜಿಕ, ಆರ್ಥಿಕ, ರಾಜಕೀಯ ನ್ಯಾಯ
ವಿಚಾರ, ಅಭಿವ್ಯಕ್ತಿ, ನಂಬಿಕೆ, ಧರ್ಮ ಮತ್ತು
ಉಪಾಸನೆಯ ಸ್ವಾತಂತ್ರ್ಯ



ಸ್ಥಾನಮಾನ, ಅವಕಾಶಗಳ ಸಮತೆ
ದೊರೆಯುವಂತೆ ಮಾಡುವ,
ವ್ಯಕ್ತಿಗೌರವ, ದೇಶದ ಏಕತೆ ಮತ್ತು ಸಮಗ್ರತೆಗಾಗಿ
ಎಲ್ಲರಲ್ಲಿ ಭ್ರಾತೃತ್ವ ಭಾವನೆ ಮೂಡಿಸುವ
ದೃಢ ಸಂಕಲ್ಪ ಮಾಡಿ
ನಮ್ಮ ಸಂವಿಧಾನ ಸಭೆಯಲ್ಲಿ
1949ರ ನವೆಂಬರ್ 26ನೇ ದಿನದಂದು
ಈ ಸಂವಿಧಾನವನ್ನು, ನಮಗೆ ನಾವೇ
ಅರ್ಪಿಸಿಕೊಂಡು ಅಂಗೀಕರಿಸಿ, ಶಾಸನವಾಗಿ
ವಿಧಿಸಿಕೊಂಡಿದ್ದೇವೆ

ಅಂಬೇಡ್ಕರ್ ವಿಶೇಷ ಸಂಚಿಕೆ

# ನವಕರ್ನಾಟಕ : ಪುಸ್ತಕ ಲೋಕಾರ್ಪಣೆಯ ಎರಡು ಕಾರ್ಯಕ್ರಮಗಳು








ಕ್ರಿಯಾ–ನವಕರ್ನಾಟಕ ಜಂಟಿ ಯೋಜನೆಯಾದ "ಮಾರ್ಕ್ಸ್ ೨೦೦–ಕ್ಯಾಪಿಟಲ್ ೧೫೦" ಮಾಲಿಕೆಯ 'ಮತಧರ್ಮದ ಕುರಿತು,' 'ಲೂಯಿ ಬೋನಪಾರ್ಟೆಯ ಹದಿನೆಂಟನೇ ಬ್ರೂಮೇರ್ ಮತ್ತು ಕೂಲಿಗೆಲಸ ಹಾಗೂ ಬಂಡವಾಳ', 'ಕಾರ್ಲ್‌ಮಾರ್ಕ್ಸ್ ಬದುಕು ಬರಹ' ಎಂಬ ಮೂರು ಪುಸ್ತಕಗಳ ಲೋಕಾರ್ಪಣೆ ಹಾಗೂ 'ಮಾರ್ಕ್ಸ್‌ವಾದ ಮತ್ತು ವಿಜ್ಞಾನ' ವಿಷಯದ ಬಗ್ಗೆ ಉಪನ್ಯಾಸ ಕಾರ್ಯಕ್ರಮವನ್ನು ಮೈಸೂರಿನ ಜೆ.ಎಲ್.ಬಿ. ರಸ್ತೆಯ ರೋಟರಿ ಸಭಾಂಗಣದಲ್ಲಿ ೧೭–೦೩–೨೦೧೯ರಂದು ಆಯೋಜಿಸಲಾಗಿತ್ತು. ಸಮಾರಂಭದ ಅಧ್ಯಕ್ಷತೆ ಶ್ರೀ ಜಿ. ವಿ. ಶ್ರೀರಾಮರೆಡ್ಡಿ ಅವರದ್ದು. ಮಾಲಿಕೆಯ ಪ್ರಸ್ತಾವನೆ ಡಾ॥ ಸಿದ್ದನಗೌಡ ಪಾಟೀಲರಿಂದ ಆರಂಭಗೊಂಡು, ಪುಸ್ತಕ ಲೋಕಾರ್ಪಣೆ ಮತ್ತು "ಮಾರ್ಕ್ಸ್‌ವಾದ ಮತ್ತು ವಿಜ್ಞಾನ" ಕುರಿತ ಉಪನ್ಯಾಸವನ್ನು ಪ್ರೊ॥ ಸವ್ಯಸಾಚಿ ಚಟರ್ಜಿ (ಅಧ್ಯಕ್ಷರು, ಅಖಿಲ ಭಾರತ ಜನ ವಿಜ್ಞಾನ ಜಾಲ) ನಡೆಸಿಕೊಟ್ಟರು. ಪುಸ್ತಕಗಳ ಪರಿಚಯವನ್ನು ಪ್ರೊ॥ ವಿ. ಎನ್. ಲಕ್ಷ್ಮೀನಾರಾಯಣ ಹಾಗೂ ಡಾ॥ ಜಿ. ರಾಮಕೃಷ್ಣ ಮಾಡಿಕೊಟ್ಟರು.






ಬೆಂಗಳೂರಿನ ಜವಾಹರಲಾಲ್ ನೆಹರೂ ತಾರಾಲಯದಲ್ಲಿ ೧೬–೦೩–೨೦೧೯ರಂದು ನವಕರ್ನಾಟಕ–ಬೇಸ್ ಜಂಟಿ ಪ್ರಕಾಶನದ "ಆಕಾಶದಲ್ಲಿ ಏನಿದೆ? ಏಕಿದೆ?" (ಲೇಖಕಿ ಡಾ॥ ಬಿ. ಎಸ್. ಶೈಲಜಾ) ಕೃತಿ ಲೋಕಾರ್ಪಣೆಗೊಂಡಿತು. ಶ್ರೀ ಎ. ಎಸ್. ಕಿರಣ್‌ಕುಮಾರ್ (ಬೇಸ್ ಆಡಳಿತ ಮಂಡಲಿ ಅಧ್ಯಕ್ಷರು) ಸಮಾರಂಭದ ಅಧ್ಯಕ್ಷತೆ ವಹಿಸಿ ಕೃತಿ ಲೋಕಾರ್ಪಣೆ ಮಾಡಿದರು. ಖಗೋಳ ವಿಜ್ಞಾನಿ ಹಾಗೂ ವಿಜ್ಞಾನ ಲೇಖಕ ಡಾ॥ ಪಾಲಹಳ್ಳಿ ವಿಶ್ವನಾಥ್ ಕೃತಿಯನ್ನು ಸಭಿಕರಿಗೆ ಪರಿಚಯಿಸಿದರು. ಸಮಾರಂಭದ ವೇದಿಕೆಯಲ್ಲಿ ಬೇಸ್ (ಬೆಂಗಳೂರು ಅಸೋಸಿಯೇಷನ್ ಫಾರ್ ಸೈನ್ಸ್ ಎಜುಕೇಶನ್) ನಿರ್ದೇಶಕರಾದ ಶ್ರೀ ಪ್ರಮೋದ್ ಜಿ. ಗಲಗಲಿ, ಡಾ॥ ಪಾಲಹಳ್ಳಿ ವಿಶ್ವನಾಥ್, ಶ್ರೀ ಎ. ಎಸ್. ಕಿರಣ್ ಕುಮಾರ್, ಲೇಖಕಿ ಡಾ॥ ಬಿ. ಎಸ್. ಶೈಲಜಾ ಮತ್ತು ನವಕರ್ನಾಟಕ ಕಾರ್ಯನಿರ್ವಾಹಕ ನಿರ್ದೇಶಕ ಶ್ರೀ ರಮೇಶ ಉಡುಪ ಉಪಸ್ಥಿತರಿದ್ದರು.

# ಹೊಸತು

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು


**ಮನುಸ್ಮೃತಿಯ ಪರಿಚಯ–೪** *ಜಿ. ರಾಮಕೃಷ್ಣ* ... ೧೦

**ಅಂಬೇಡ್ಕರ್ ಮತ್ತು ಮಾರ್ಕ್ಸ್** *ಮೂಲ : ಎಂ. ಸತ್ಯಾನಂದ*
*ಅನು : ಎಂ. ಸಿ. ಡೋಂಗ್ರೆ* ... ೨೯

**ಭಾರತ ಸಂವಿಧಾನದ ಪಿತಾಮಹ – ಡಾ॥ ಅಂಬೇಡ್ಕರ್**
*ವಿಲಾಸ್ ಆರ್. ದಾತಾರ್, ಮುರಳಿಧರ ಚಿಕ್ಕಮಗಳೂರು* ... ೨೩

**ಸಂದರ್ಶನ : ಅಧಿಕಾರವೇ ಅಂತಿಮವಲ್ಲ... – ಮಾವಳ್ಳಿ ಶಂಕರ**
*ಡಾ॥ ಸಿದ್ದನಗೌಡ ಪಾಟೀಲ ಮತ್ತಿತರರು* ... ೧೫

**ವೆಜಿಟೇರಿಯನ್ಸ್ ಓನ್ಲಿ** *ತೆಲುಗು ಮೂಲ : ಸ್ಕೈಬಾಬ*
*ಕನ್ನಡಕ್ಕೆ : ಕಾ. ಹು. ಚಾನ್‌ಪಾಷ* ... ೩೩

**ಕಂಗಳೊಳಗಣ ಕತ್ತಲೆ...** *ಪ್ರೊ॥ ಎಚ್. ಟಿ. ಪೋತೆ* ... ೩೭

**ವೈಯಕ್ತಿಕ ಘನತೆಯೇ ಸಂವಿಧಾನದ ಆಶಯ – ಡಾ॥ ಅಂಬೇಡ್ಕರ ವಿಚಾರಗಳು**
*ಡಾ॥ ಸದಾಶಿವ ಮರ್ಜಿ* ... ೪೭

**ಕೃಷಿ, ನೀರು, ವಿದ್ಯುತ್ ಮತ್ತು ಬಾಬಾಸಾಹೇಬ**
*ಮೂಲ : ಉತ್ತಮ ಕಾಂಬಳೆ. ಕನ್ನಡಕ್ಕೆ : ಗಿರೀಶ ಚಂದ್ರಕಾಂತ ಚಕಾಪುರೆ* ... ೪೬

**ಕಾವ್ಯಲೋಕ** *೨೪, ೩೬, ೩೯, ೪೨, ೫೫, ೬೧*

**ಜಾಗತೀಕರಣ ಸಂದರ್ಭದ ಸಣ್ಣಕಥೆಗಳ ಆಶಯ** *ಗಂಗಾಧರ ಈ. ಮಾಸನಕಟ್ಟೆ* ... ೪೯

**ದಲಿತ ಕಥೆಗಳಲ್ಲಿ ಅಧ್ಯಾತ್ಮದ ಸ್ವರೂಪ** *ಪ್ರೊ॥ ಪ್ರಮೀಳ* ... ೫೧

**ಬಹುತ್ವ ಭಾರತದ ಉಳಿವಿಗಾಗಿ ಜನಪರ ಚಳವಳಿಗಳ ಮರುಧ್ರುವೀಕರಣ**
*ಡಾ॥ ಅಪ್ಪಗೆರೆ ಸೋಮಶೇಖರ್* ... ೫೯

**ನೊಂದವರ ನೋವಿಗೊಂದು ಭಾಷೆ ಕಲಿಸಿದ ಅಂಬೇಡ್ಕರ್**
*ಡಾ॥ ಕಿರಣ್ ಎಂ. ಗಾಜನೂರು* ... ೧೯

**ನಿಷ್ಠುರ ಮಾನವತಾವಾದಿ – ಕೋ. ಚೆನ್ನಬಸಪ್ಪ** *ಲಕ್ಷ್ಮಣ ಕೊಡಸೆ* ... ೨೫

**'ಹಿಂದೂ ಜೀವನ ದರ್ಶನ'ದಲ್ಲಿ ರಾಧಾಕೃಷ್ಣನ್ ಅವರ ಹಿಂದೂ ಧರ್ಮದ ಮಂಡನೆ**
*ಮೂಲ : ಡಾ॥ ಎಸ್. ಕೆ. ಅರುಣ್‌ಮೂರ್ತಿ. ಅನು : ಡಾ॥ ಮಾಧವಿ ಎಂ. ಕೆ.* ... ೫೩

**ನಾನು ಓದಿದ ಪುಸ್ತಕ : ಪರಿಶಿಷ್ಟ ಜಾತಿ / ವರ್ಗ – ಅಲೆಮಾರಿ, ಅರೆ ಅಲೆಮಾರಿ, ಸೂಕ್ಷ್ಮ ಮತ್ತು ಅತಿ ಸೂಕ್ಷ್ಮ ಸಮುದಾಯಗಳ ಅಧ್ಯಯನ**
*ಡಾ॥ ಎಂ. ವೆಂಕಟಸ್ವಾಮಿ* ... ೫೬

**ವಿಶ್ವವೀಕ್ಷಣೆ : ಮತ್ತೆ ಶೀತಯುದ್ಧದ ಕಾಲ ಮರುಕಳಿಸುತ್ತಿದೆಯೆ?** *ಸೀಯಾರ್ಕೆ* ... ೪೦

**ನಭಾವಲೋಕನ : ಶನಿ ಮತ್ತು ಚಂದ್ರರ ಸಮಾಗಮಗಳು**
*ಡಾ॥ ಬಿ. ಎಸ್. ಶೈಲಜಾ* ... ೪೧

**ಹೊಸ ಓದು** *ಸಿ. ಆರ್. ಕೃಷ್ಣರಾವ್, ಇಂದಿರಾಕುಮಾರಿ* ... ೨೮

**ಸಾದರ ಸ್ವೀಕಾರ** ... ೫೮



**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ, ವಿ. ಗೋಪಾಲ್, ಗೋಪಿ ಹಿರೇಬೆಟ್ಟು, ಪಿ. ಜಿ. ನಾರಾಯಣ

**ಮುಖಪುಟ :** ಸಂವಿಧಾನ ಮತ್ತು ಅಂಬೇಡ್ಕರ್ ಹೋರಾಟ

**ವಿನ್ಯಾಸ :** ನವಕರ್ನಾಟಕ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಲೋಕಸಭಾ ಚುನಾವಣೆಗಳಿಗೆ ಮುಹೂರ್ತ ನಿಗದಿಯಾಗಿದೆ. ಚುನಾವಣಾ ಆಯೋಗ ಹೊರಡಿಸಿರುವ ಪ್ರಕಟಣೆಯ ಪ್ರಕಾರ ಏಳು ಹಂತಗಳಲ್ಲಿ ಚುನಾವಣಾ ಪ್ರಕ್ರಿಯೆ ಮುಗಿಯಲಿದೆ. ಏಪ್ರಿಲ್, ಮೇ ತಿಂಗಳುಗಳಲ್ಲಿ ಜರುಗುವ ಮತದಾನದ ಫಲಿತಾಂಶಗಳು ಮೇ ೨೩ರಂದು ಹೊರಬೀಳುತ್ತದೆ. ದೇಶದ ಎಲ್ಲ ರಾಜಕೀಯ ಪಕ್ಷಗಳಿಗೂ ಈಗ ಚುನಾವಣೆಯದೇ ಚಿಂತೆ. ೨೦೧೯ರ ಈ ಚುನಾವಣೆಗೆ ಸಿದ್ಧತೆ ಹಲವು ತಿಂಗಳ ಹಿಂದೆಯೇ ಪ್ರಾರಂಭವಾಗಿತ್ತು. ಚುನಾವಣೆಯಲ್ಲಿ ಯಾರೊಂದಿಗೆ ಹೊಂದಾಣಿಕೆ ಮಾಡಿಕೊಳ್ಳಬೇಕೆನ್ನುವುದು ಇನ್ನೂ ನಡೆಯುತ್ತಿದೆ. ಕಾಂಗ್ರೆಸ್ ಪಕ್ಷ ಈಗ ಹೊಸ ಹುಮ್ಮಸ್ಸಿನಿಂದ ಯಾರ ಜೊತೆಗೂ ಸೇರದೆ ಒಂಟಿಯಾಗಿ ಸ್ಪರ್ಧಿಸುವ ಸೂಚನೆಗಳು ಕಂಡುಬಂದಿದೆ. ಹತ್ತು ವರ್ಷ ಯುಪಿಎ ಅಧ್ಯಕ್ಷೆಯಾಗಿ ಪ್ರಧಾನಿ ಮನಮೋಹನ್ ಸಿಂಗ್ ಅಧಿಕಾರ ಮುಗಿದ ಮೇಲೆ ಸೋತು ಸುಣ್ಣವಾಗಿ ಪ್ರತಿಪಕ್ಷದ ಸ್ಥಾನವನ್ನೂ ಪಡೆಯದೆ ಐದು ವರ್ಷ ಕಳೆದಿರುವ ಕಾಂಗ್ರೆಸ್‌ನಲ್ಲಿ ಸೋನಿಯಾ ಗಾಂಧಿ, ಪುತ್ರ ರಾಹುಲ್ ಹಾಗೂ ಪುತ್ರಿ ಪ್ರಿಯಾಂಕ ಇವರದ್ದೇ ಪಾರುಪತ್ಯ. ರಾಹುಲ್ ಕಾಂಗ್ರೆಸ್ ಅಧ್ಯಕ್ಷ, ಪ್ರಿಯಾಂಕ ಪ್ರಧಾನ ಕಾರ್ಯದರ್ಶಿಗಳಲ್ಲಿ ಒಬ್ಬರು. ಸೋಲಿನಿಂದ ಇನ್ನೂ ಪಾಠ ಕಲಿಯದ ಕಾಂಗ್ರೆಸ್ ದುರಹಂಕಾರವನ್ನು ಮಾತ್ರ ತೊರೆದಿಲ್ಲ.

ಭಾಜಪದ ಮಟ್ಟಿಗೆ ಈ ಸಲವೂ ಮೋದಿ, ಷಾ ಜೋಡಿಯದೇ ದರ್ಬಾರು. ಬಿಹಾರ, ಮಹಾರಾಷ್ಟ್ರ, ತಮಿಳುನಾಡು ಮೊದಲಾದ ಕಡೆಗಳಲ್ಲಿ ಹೊಂದಾಣಿಕೆ ಮಾಡಿಕೊಂಡಾಗಿದೆ. ದಕ್ಷಿಣ ಭಾರತದಲ್ಲಿ ಭಾಜಪ ಎಷ್ಟು ಸ್ಥಾನಗಳನ್ನು ಪಡೆದೀತು? ಕೇರಳ, ತಮಿಳುನಾಡುಗಳಲ್ಲಿ ಖಾತೆ ತೆರೆದೀತೆ? ಮೋದಿ ಮತ್ತೆ ಅಧಿಕಾರದ ಚುಕ್ಕಾಣಿ ಹಿಡಿಯುವರೆ? ಇಂಥ ಹಲವಾರು ಪ್ರಶ್ನೆಗಳಿಗೆ ಉತ್ತರ ಪಡೆಯಲು ಇನ್ನೂ ಎಂಟು–ಒಂಬತ್ತು ವಾರಗಳು ಕಾಯಬೇಕು. ಈ ಸಲದ ಚುನಾವಣೆಗಳು ಪುಲ್ವಾಮಾ ದುರ್ಘಟನೆ, ಸರ್ಜಿಕಲ್ ಸ್ಟ್ರೈಕ್, ಭಾರತ–ಪಾಕಿಸ್ತಾನಗಳ ಮಧ್ಯೆ ಬಿಗಡಾಯಿಸಿದ ವಾತಾವರಣದ ಹಿನ್ನೆಲೆಯಲ್ಲಿ ಜರುಗುತ್ತದೆ. ಮಾಧ್ಯಮಗಳಿಗೆ ಈಗ ಬಿಡುವಿಲ್ಲದ ಕೆಲಸ, ಎಲ್ಲ ಕಾರ್ಯಕ್ರಮಗಳೂ ಚುನಾವಣೆಮಯ. ಈಗಾಗಲೇ ಅಂದಾಜು ಲೆಕ್ಕಾಚಾರ ನಡೆದಿದೆ. ಚುನಾವಣಾ ಸಮೀಕ್ಷೆಗಳು ನಡೆಯತೊಡಗಿವೆ. ಒಂದು ಅಂದಾಜಿನ ಪ್ರಕಾರ ಯಾವ ಪಕ್ಷಕ್ಕೂ ಬಹುಮತ ದೊರಕುವ ಸಂಭವವಿಲ್ಲ. ಭಾಜಪ ಪ್ರಮುಖ ರಾಜಕೀಯ ಪಕ್ಷವಾಗಿ ಹೊಮ್ಮಲಿದೆ. ಅದು ಮೋದಿಯವರೇ ಪ್ರಧಾನಿಯಾಗಿ ಮುಂದುವರಿಯುತ್ತಾರೆ ಎಂದು ಬಿಂಬಿಸುತ್ತಿದೆ. ಮತ್ತೊಮ್ಮೆ ಸಮ್ಮಿಶ್ರ ಸರಕಾರ ತಪ್ಪಿದ್ದಲ್ಲ; ಭಾರತದಲ್ಲಿನ ಸಮೀಕ್ಷೆಗಳು ನಿಜವಾದಲ್ಲಿ. ಈಗಿರುವುದೂ ಹಾಗೆಯೇ ಅನ್ನಿ. ದೇಶದಲ್ಲಿ ಸಮ್ಮಿಶ್ರ ಸರಕಾರ ಬಂದು ಎರಡು ದಶಕಗಳ ಮೇಲಾಯಿತು ಎನ್ನಬಹುದು. ಫಲಿತಾಂಶ ಹೊರಬೀಳುವವರೆಗೆ ಅಂದಾಜುಗಳೇ ಗತಿ.

* * *

ರಾಜ್ಯ ರಾಜಕಾರಣದ ಮೇಲೆ ಪಾರ್ಲಿಮೆಂಟರಿ ಚುನಾವಣೆ ಭಾರೀ ಪರಿಣಾಮ ಬೀರಲಿದೆ. ಸಮ್ಮಿಶ್ರ ಸರಕಾರದ ಭವಿಷ್ಯವನ್ನೇ ನಿರ್ಧರಿಸಲಿದೆ. ಒಟ್ಟು ೨೮ ಕ್ಷೇತ್ರಗಳ ಪೈಕಿ ಜೆಡಿಎಸ್‌ಗೆ ೮ ಮತ್ತು ಕಾಂಗ್ರೆಸ್‌ಗೆ ೨೦ ಎಂದು ಸಾಕಷ್ಟು ಜುಗ್ಗಾಟ ನಡೆದು ನಿಶ್ಚಯವಾಗಿದೆ. ಭಾಜಪ ೨೨ ಸ್ಥಾನಗಳಲ್ಲಿ ಜಯ ಗಳಿಸುವುದೆಂದು ಯಡಿಯೂರಪ್ಪ ಲೆಕ್ಕ ಹಾಕಿದ್ದಾರೆ. ಏನಾಗುವುದೋ ಮೇ ಮೂರನೇ ವಾರದಲ್ಲಿ ಗೊತ್ತಾಗುವುದು. ಜೆಡಿಎಸ್–ಕಾಂಗ್ರೆಸ್‌ಗಳಲ್ಲಿ ಬಿರುಸಿನ ಚಟುವಟಿಕೆ ಪ್ರಾರಂಭವಾಗಿದೆ. ಗೌಡರ ಕುಟುಂಬ ರಾಜಕಾರಣ ಜೋರಾಗಿ ನಡೆದಿದೆ. ಮಕ್ಕಳು ಮುಖ್ಯಮಂತ್ರಿ, ಸಚಿವರಾದರೆ, ಸೊಸೆ ಶಾಸಕಿಯಾದರೆ, ಮೊಮ್ಮಕ್ಕಳು ಏಕೆ ಎಂಪಿಗಳಾಗಬಾರದು? ಮುಖ್ಯಮಂತ್ರಿ ಕುಮಾರಸ್ವಾಮಿ ಪುತ್ರ ಮಂಡ್ಯದಲ್ಲಿ ಸ್ಪರ್ಧಿಸಿದರೆ, ಸಚಿವ ರೇವಣ್ಣ ಪುತ್ರ ಹಾಸನ ಕ್ಷೇತ್ರದಲ್ಲಿ ಸ್ಪರ್ಧಿಸುತ್ತಿದ್ದಾರೆ.

ಮಂಡ್ಯ, ತುಮಕೂರು ಬಿಟ್ಟುಕೊಟ್ಟದ್ದು ಕಾಂಗ್ರೆಸ್ಸಿನಲ್ಲಿ ತೀವ್ರವಾದ ಅತೃಪ್ತಿ ತಂದಿದೆ. ಮಂಡ್ಯದಲ್ಲಿ ನಟ ಅಂಬರೀಷ ಪತ್ನಿ ಸುಮಲತಾ ಸ್ಪರ್ಧೆಗೆ ಇಳಿದಿರುವುದು ದೋಸ್ತಿಗಳಿಗೆ ನುಂಗಲಾರದ ತುತ್ತು. ಆಕೆ ಯಾವ ಕಡೆಗೆ

**(೬ನೇ ಪುಟಕ್ಕೆ)**





ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೨೦ ಸಂಚಿಕೆ-೯ ಏಪ್ರಿಲ್ ೨೦೧೯



■ **ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು - ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೧೬೯೧೧೧, ೨೨೧೬೯೧೦೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**

# ಸಂಪಾದಕೀಯ

## ಪ್ರಜೆಗಳೇ ಪ್ರಜಾಸತ್ತೆಯನ್ನು ರಕ್ಷಿಸಬೇಕು

**ಭಾ**ರತದ ಲೋಕಸಭೆಗೆ ಚುನಾವಣೆ ಘೋಷಣೆ ಆಗಿದೆ. ಈ ಚುನಾವಣೆ ದೇಶದ ಸಮಾಜೋ-ಆರ್ಥಿಕ ನೀತಿಗಳ ದೃಷ್ಟಿಯಿಂದ ಮಹತ್ವದ ಚುನಾವಣೆ. ಪ್ರಮುಖ ರಾಜಕೀಯ ಪಕ್ಷಗಳ, ಮೈತ್ರಿಕೂಟಗಳ ಘೋಷಣೆ, ಆರೋಪ, ಪ್ರತ್ಯಾರೋಪಗಳಾಚೆ ದೇಶದ ಪ್ರಜಾಸತ್ತೆಯ ಹಿತಾಸಕ್ತಿಯ ಹಿನ್ನೆಲೆಯಲ್ಲಿ ಈ ಚುನಾವಣೆಯನ್ನು ನೋಡಬೇಕಿದೆ. ಚುನಾವಣಾಪೂರ್ವ ಘಟನಾವಳಿಗಳು, ಆಡಳಿತ ಮತ್ತು ವಿರೋಧ ಪಕ್ಷಗಳ ನಡೆಗಳೇನೇ ಇದ್ದರೂ ಸ್ವಾತಂತ್ರ್ಯಾನಂತರದ ಪ್ರಜಾಸತ್ತೆಯ ಪಯಣವನ್ನು ಸೂಕ್ಷ್ಮವಾಗಿ ಗಮನಿಸಿದರೆ ಭಾರತದ ಪ್ರಭುತ್ವ ಪ್ರಜೆಗಳ ಕೈತಪ್ಪಿ, ಪ್ರಜಾಪಾಲನೆಯ ತನ್ನ ಆದ್ಯ ಕರ್ತವ್ಯದಿಂದ ವಿಮುಖವಾಗುತ್ತಿರುವುದು ಸ್ಪಷ್ಟವಾಗಿದೆ. ಪ್ರಜೆ ಕೇವಲ ಮತದಾನದ ತನ್ನ ಕರ್ತವ್ಯಕ್ಕೆ ಸೀಮಿತವಾಗಿದ್ದಾನೆಯೇ ಹೊರತು ಪ್ರಜಾಸತ್ತೆಯಲ್ಲಿ ತನ್ನ ಹಕ್ಕುಗಳನ್ನು ಕೇಳುವ ಅವಕಾಶದಿಂದ ವಂಚಿತನಾಗಿದ್ದಾನೆ. ನಮ್ಮ ಪ್ರಭುತ್ವ ಇಂದು ಪ್ರಜೆಗಳ ಸತ್ತೆಯಾಗಿ ಉಳಿದಿಲ್ಲ. ಅದು ಬಹುಕೋಟಿ ಸಂಪತ್ತಿನ ಬಹುರಾಷ್ಟ್ರೀಯ ಕಂಪನಿಗಳ ನಿಯಂತ್ರಣದಲ್ಲಿದೆ. ಪ್ರಜಾಸತ್ತೆ ಎನ್ನುವುದು ಒಂದು ಅಣಕವಾಗಿ ಪರಿವರ್ತನೆಯಾಗಿದೆ. ಈ ಪರಿವರ್ತನೆಯ ಪ್ರಕ್ರಿಯೆಯನ್ನು ಆರಂಭಿಸಿದ್ದು ಇಂದಿನ ವಿರೋಧ ಪಕ್ಷವಾದ ಕಾಂಗ್ರೆಸ್. ಕಳೆದ ಶತಮಾನದ ಕೊನೆಯ ದಶಕದಲ್ಲಿ ನವಉದಾರೀಕರಣದ ನೀತಿಗಳ ಹೆಸರಿನಲ್ಲಿ ಆರಂಭವಾದ ಈ ಪ್ರಕ್ರಿಯೆ ಕಾಂಗ್ರೆಸ್ ಪಕ್ಷದ ಪರಂಪರಾಗತ ರಾಜಕೀಯ ನೀತಿಗೆ ವಿರುದ್ಧವಾಗಿತ್ತು. ಸ್ವಾತಂತ್ರ್ಯ ಹೋರಾಟದಲ್ಲಿ ಸಾಮ್ರಾಜ್ಯಶಾಹಿಗೆದುರಾಗಿ ಹೋರಾಡಿದ ಹಿನ್ನೆಲೆ, ಕಲ್ಯಾಣ ರಾಜ್ಯದ ಯೋಜನೆಗಳನ್ನು ಜಾರಿಗೆ ತಂದಿದ್ದ ಕಾಂಗ್ರೆಸ್ ತನ್ನ ಹೊಸ ಆರ್ಥಿಕ ನೀತಿಗಳಿಂದ ಭಾರತದ ಪ್ರಭುತ್ವವನ್ನು ಕಾರ್ಪೊರೇಟ್ ವಲಯದತ್ತ ಮುಖಮಾಡಿ ನಿಲ್ಲಿಸಿತ್ತು. ಪರಿಣಾಮವಾಗಿ ತನ್ನ ನೆಲದ ಬೇರುಗಳನ್ನು ತಾನೇ ಕಳೆದುಕೊಂಡಿತ್ತು. ಕಾಂಗ್ರೆಸ್ ಹಾಗೂ ಅದರ ಮೈತ್ರಿಕೂಟದ ವೈಫಲ್ಯವನ್ನು ಟೀಕಿಸುತ್ತಲೇ ಅಧಿಕಾರಕ್ಕೆ ಬಂದ ಮೋದಿಯವರ ಬಿ.ಜೆ.ಪಿ. ನಾಯಕತ್ವದ ಎನ್.ಡಿ.ಎ. ಮೈತ್ರಿಕೂಟ, ಕಾರ್ಪೊರೇಟ್ ವಲಯದತ್ತ ಮುಖ ಮಾಡಿನಿಂತ ನಮ್ಮ ಪ್ರಭುತ್ವವನ್ನು ಸಂಪೂರ್ಣವಾಗಿ ಕಾರ್ಪೊರೇಟ್ ವಲಯದ ಕರಾಳ ಕೈಗಳಲ್ಲಿ ಇರಿಸಿದೆ. ನಮ್ಮ ಪ್ರಭುತ್ವ ಕಾರ್ಪೊರೇಟ್ ಕೈಗಳಲ್ಲಿಯೇ ಉಳಿಯುವಂತಾಗಲು ಮೋದಿಯವರು ಮತ್ತವರ ಪಕ್ಷ ಯುದ್ಧೋನ್ಮಾದದ ರೀತಿಯಲ್ಲಿ ಈ ಚುನಾವಣೆಯನ್ನು ನಡೆಸುತ್ತಿದೆ. ಈಗ ಆಳುವ ಕೂಟವನ್ನು ಎದುರಿಸುತ್ತಿರುವ ಕಾಂಗ್ರೆಸ್‌ನ ರಾಹುಲ ಗಾಂಧಿಯವರು ಬಿ.ಜೆ.ಪಿ. ಮತ್ತು ಆರ್.ಎಸ್.ಎಸ್. ಕಾರ್ಪೊರೇಟ್ ಕಂಪನಿಗಳ ಗುಲಾಮ ಸಂಸ್ಥೆಗಳು ಎಂದು ಆರೋಪಿಸುತ್ತಿದ್ದಾರೆ. ರಾಹುಲ ಗಾಂಧಿಯವರ ಆರೋಪ ನಿಜವಾದರೂ ಕಾಂಗ್ರೆಸ್ ಪಕ್ಷ ಸಹಿತ ಆ ಆರೋಪದಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ. ಹಿಂದೆ ಚುನಾವಣಾ ಸುಧಾರಣೆ ಕುರಿತ ಸಮಿತಿಯೊಂದರ ಅಧ್ಯಕ್ಷರಾಗಿದ್ದ, ಪ್ರಖ್ಯಾತ ಹೋರಾಟಗಾರ, ಮಾಜಿ ಗೃಹಮಂತ್ರಿ, ಕಮ್ಯುನಿಸ್ಟ್ ಪಕ್ಷದ ನಾಯಕ ಇಂದ್ರಜಿತ್ ಗುಪ್ತಾ ತಮ್ಮ ವರದಿಯ ಕೊನೆಯಲ್ಲಿ 'ರಾಜಕೀಯ ಪಕ್ಷಗಳಿಗೆ ಕಾರ್ಪೊರೇಟ್ ಕಂಪನಿಗಳ ದೇಣಿಗೆಯನ್ನು ನಿಲ್ಲಿಸಬೇಕು' ಎಂಬ ಸೂಚನೆ ಕೊಟ್ಟಿದ್ದರು. ಆ ಸೂಚನೆಯನ್ನು ಕಾಂಗ್ರೆಸ್, ಬಿ.ಜೆ.ಪಿ.ಯಾದಿಯಾಗಿ ಬಹುತೇಕ ಪಕ್ಷಗಳು ವಿರೋಧಿಸಿದವು. ಅಂದು ತಮ್ಮ ವರದಿಯಲ್ಲಿ ಇಂದ್ರಜಿತ್ ಗುಪ್ತಾ ಅವರು ಹೇಳಿದಂತೆ ಇಂದು ಕಾರ್ಪೊರೇಟ್ ಕಂಪನಿಗಳು ಭಾರತದ ಪ್ರಭುತ್ವವನ್ನು ತಮ್ಮ ನಿಯಂತ್ರಣದಲ್ಲಿರಿಸಿಕೊಂಡಿವೆ. ಕೋಮುವಾದವನ್ನು ಹೊರತುಪಡಿಸಿದರೆ ಆರ್ಥಿಕ, ಆಡಳಿತಾತ್ಮಕ ನೀತಿಗಳಲ್ಲಿ ಈ ಎರಡೂ ಪಕ್ಷಗಳಿಗೆ ಭಿನ್ನತೆ ಏನೂ ಇಲ್ಲ. ಆದರೆ ಬಿ.ಜೆ.ಪಿ. ತನ್ನ ಕಾರ್ಪೊರೇಟ್ ಪರ ರಾಜಕಾರಣವನ್ನು ಮರೆಮಾಚಲು ಕೋಮುವಾದ, ಹುಸಿ ದೇಶಪ್ರೇಮವನ್ನು ಬಳಸುತ್ತಿರುವುದು ಅಪಾಯಕಾರಿ. ಬಿ.ಜೆ.ಪಿ.ಯಾಗಲಿ, ಆರ್.ಎಸ್.ಎಸ್. ಆಗಲಿ ತಮ್ಮ ಗುಪ್ತ ಕಾರ್ಯಸೂಚಿಯನ್ನು ಅವು ಸ್ಥಾಪನೆಯಾದ ದಿನದಿಂದಲೇ ಜಾರಿಯಲ್ಲಿಟ್ಟಿವೆ. ಕಾರ್ಪೊರೇಟ್ ಕಂಪನಿಗಳು ಬಿ.ಜೆ.ಪಿ.ಯನ್ನು ನಂಬಿದಷ್ಟು ಕಾಂಗ್ರೆಸ್‌ಅನ್ನು ನಂಬುವುದಿಲ್ಲ. ಹಾಗೆ ನೋಡಿದರೆ ಕಾರ್ಪೊರೇಟ್ ವಲಯಕ್ಕೆ ಬಿ.ಜೆ.ಪಿ. ಎನ್ನುವುದು ಒಂದು ರಾಜಕೀಯ ವಿಭಾಗ (ಪೊಲಿಟಿಕಲ್ ಡಿಪಾರ್ಟ್‌ಮೆಂಟ್). ಇದರ ಹಿಂದಿನ ಜನಸಂಘವಾಗಲಿ, ೧೯೫೯ರಲ್ಲಿ ಸ್ಥಾಪನೆಯಾದ ರಾಜಾಜಿಯವರ ಸ್ವತಂತ್ರ ಪಕ್ಷವಾಗಲಿ, ೧೯೬೯ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನಿಂದ ಒಡೆದುಹೋದ ಕಾಂಗ್ರೆಸ್ (ವಿರೋಧಿ ಬಣ) ಆಗಲಿ ತಮ್ಮ ಗೊತ್ತು ಗುರಿಗಳಲ್ಲಿ ಬಂಡವಾಳಶಾಹಿ ಪರ ನೀತಿಯನ್ನು ಅಧಿಕೃತವಾಗಿಯೇ ಘೋಷಿಸಿಕೊಂಡಿವೆ. 'ಪ್ರಭುತ್ವ ಬಂಡವಾಳ (ಸಾರ್ವಜನಿಕ ವಲಯ)'ವನ್ನು ವಿರೋಧಿಸಿವೆ. ಆ ರಾಜಕೀಯ ಶಕ್ತಿಗಳು ಇಂದು ಕಾರ್ಪೊರೇಟ್ ಕಂಪನಿಗಳ ಪರವಾಗಿರುವುದು ಸಹಜವೇ. ಆ ಕಾರಣಕ್ಕಾಗಿಯೇ ಅವು ಸಂವಿಧಾನದ ಬದಲಾವಣೆಗೆ ಮುಂದಾಗಿವೆ. ಬಲಪಂಥೀಯ, ಫ್ಯಾಸಿಸ್ಟ್ ರಾಜಕಾರಣವನ್ನು ಎದುರಿಸಬೇಕಾದರೆ ಕಾಂಗ್ರೆಸ್ ತನ್ನ ನೀತಿಗಳಲ್ಲಿ ಬದಲಾವಣೆ ತಂದುಕೊಳ್ಳಬೇಕು.

ಕಳೆದ ಶತಮಾನದ ಕೊನೆಯ ದಶಕದಲ್ಲಿ ಕಾಂಗ್ರೆಸ್ ತನ್ನ ಜನಪರ ರಾಜಕೀಯ ಪರಂಪರೆಗೆ ಕೊನೆಯ ಮೊಳೆ ಜಡಿಯಿತು. ಇಂದು ಕಾಂಗ್ರೆಸ್ ಒಂದು ರಾಜಕೀಯ ಪಕ್ಷವಾಗಿ ಉಳಿಯಬೇಕಾದರೆ ಇತಿಹಾಸದಲ್ಲಿ ನಿರ್ದಿಷ್ಟ ಸಂದರ್ಭದಲ್ಲಿ ತಾನೇ ಅನುಸರಿಸಿದ ನೀತಿಗಳತ್ತ ಗಮನ ಹರಿಸಬೇಕು. ಸ್ವಾತಂತ್ರ್ಯಾನಂತರ ನೆಹರು ಅವರ ಕೈಗಾರಿಕಾ ನೀತಿ, ಆರ್ಥಿಕ ನೀತಿಗಳಿಗೆ ಬಲಪಂಥೀಯ ಶಕ್ತಿಗಳ ತೀವ್ರ ವಿರೋಧವಿರಲಿಲ್ಲ. ೧೯೫೨ರ ಮೊದಲ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ - ೩೬೪ ಸ್ಥಾನಗಳಲ್ಲಿ ಗೆದ್ದಿದ್ದರೆ ವಿರೋಧಪಕ್ಷವಾಗಿ ಭಾರತ ಕಮ್ಯುನಿಸ್ಟ್ ಪಕ್ಷ - ೨೬

ಸ್ಥಾನ ಪಡೆದಿತ್ತು. ಜನಸಂಘ –೩, ರಾಮರಾಜ್ಯ ಪರಿಷತ್ – ೩, ಹಿಂದೂ ಮಹಾಸಭಾ – ೪ ಸ್ಥಾನ ಪಡೆದಿದ್ದವು. ಹೀಗಾಗಿ ಪ್ರಧಾನಿ ನೆಹರು ಅವರ ಪ್ರಭುತ್ವ ಬಂಡವಾಳ (ಸರಕಾರಿ ವಲಯದ ಬಂಡವಾಳ) ಯೋಜನೆಗಳು ನಿರಾತಂಕವಾಗಿದ್ದವು. ಆದರೆ ಪ್ರಧಾನಿ ಲಾಲ್ ಬಹದ್ದೂರ್ ಶಾಸ್ತ್ರಿಯವರ ನಿಧನಾನಂತರ ೧೯೬೬ರಲ್ಲಿ ಪ್ರಧಾನಿಯಾದ ಇಂದಿರಾ ಗಾಂಧಿಯವರ ಕಾಲಕ್ಕೆ ಪರಿಸ್ಥಿತಿ ಭಿನ್ನವಾಗಿತ್ತು. ಕಾಂಗ್ರೆಸ್‌ನಲ್ಲಿ ಇಂದಿರಾ ಗಾಂಧಿಯವರ ವಿರೋಧಿ ಬಣ ರಾಜಕೀಯ ಕಾರಣಕ್ಕೆ ಹುಟ್ಟಿಕೊಂಡಿತ್ತಾದರೂ ಅಲ್ಲಿ ಬಲಪಂಥೀಯ ಛಾಯೆ ಇತ್ತು. ೧೯೬೭ರ ನಾಲ್ಕನೇ ಲೋಕಸಭೆಗೆ ನಡೆದ ಚುನಾವಣೆಯಲ್ಲಿ ಕಾಂಗ್ರೆಸ್ ಸಂಖ್ಯೆ ೨೮೩ಕ್ಕೆ ಇಳಿದಿತ್ತು. ಇದರೊಳಗೇ ಇಂದಿರಾ ವಿರೋಧಿ ಬಣವೂ ಇತ್ತು. ಈ ಚುನಾವಣೆಯಲ್ಲಿ ಜನಸಂಘ ೩೫ ಮತ್ತು ಸ್ವತಂತ್ರ ಪಕ್ಷ ೪೨ ಸ್ಥಾನ ಪಡೆದು ಬಲಪಂಥೀಯರ ಶಕ್ತಿ ಮೊದಲಿಗಿಂತಲೂ ಹೆಚ್ಚಿತ್ತು. ೧೯೬೯ರಲ್ಲಿ ಕಾಂಗ್ರೆಸ್‌ನೊಳಗಿನ ಭಿನ್ನಾಭಿಪ್ರಾಯ ತೀವ್ರವಾಗಿ ಇಂದಿರಾ ಬಣ, ನಿಜಲಿಂಗಪ್ಪ ಬಣ ಬೇರೆಯಾದವು. ಮೊದಲ ಬಾರಿಗೆ ಕಾಂಗ್ರೆಸ್ ಪಕ್ಷ ಒಡೆಯಿತು. ಆಡಳಿತ ಕಾಂಗ್ರೆಸ್, ವಿರೋಧಿ ಕಾಂಗ್ರೆಸ್ ಬೇರೆಯಾದವು. ನಿಜಲಿಂಗಪ್ಪನವರ ಜೊತೆ ೬೫ ಸಂಸದರು ಹೋದರೆ ಆಡಳಿತ (ಇಂದಿರಾ) ಕಾಂಗ್ರೆಸ್ ೨೨೧ ಸಂಸದರೊಂದಿಗೆ ಅಲ್ಪಮತಕ್ಕೆ ಕುಸಿಯಿತು. ಆಗ ಇಂದಿರಾ ಕಾಂಗ್ರೆಸ್ ವಿಶ್ವಾಸ ಮತಗಳನ್ನು ಪಡೆದು ಗೆದ್ದದ್ದು ಭಾರತ ಕಮ್ಯುನಿಸ್ಟ್ ಪಕ್ಷ, ಡಿ.ಎಂ.ಕೆ. ಮತ್ತು ಇತರ ಪಕ್ಷೇತರ ಬೆಂಬಲದಿಂದ. ಅಂತಿಮವಾಗಿ ಲೋಕಸಭೆ ಬರಖಾಸ್ತು ಆಗಿ ೧೯೭೧ರಲ್ಲಿ ಮಧ್ಯಂತರ ಚುನಾವಣೆ ಘೋಷಣೆಯಾಯಿತು. ಸ್ವತಂತ್ರ ಭಾರತದಲ್ಲಿ ಮೊಟ್ಟ ಮೊದಲ ಬಾರಿಗೆ ದೊಡ್ಡ ಪ್ರಮಾಣದಲ್ಲಿ ರಾಜಕೀಯ ಪಕ್ಷಗಳ ಹೊಂದಾಣಿಕೆ ರಾಜಕಾರಣ (ಮಹಾ ಘಟ್‌ಬಂಧನ್) ಆರಂಭವಾಯಿತು. ಕಾಂಗ್ರೆಸ್ (ಓ–ನಿಜಲಿಂಗಪ್ಪ ಬಣ), ಸ್ವತಂತ್ರ ಪಕ್ಷ, ಜನಸಂಘ, ಎಸ್.ಎಸ್.ಪಿ. ಇತರರು ಸೇರಿ ಒಂದು ಒಕ್ಕೂಟವಾದರೆ, ಆಡಳಿತ ಕಾಂಗ್ರೆಸ್ (ಇಂದಿರಾ ಬಣ) ಭಾರತ ಕಮ್ಯುನಿಸ್ಟ್ ಪಕ್ಷ (ಸಿ.ಪಿ.ಐ.), ಡಿ.ಎಂ.ಕೆ., ಮುಸ್ಲಿಂ ಲೀಗ್ ಇತರರು ಸೇರಿ ಒಂದು ಒಕ್ಕೂಟವಾಯಿತು. ಈ ಚುನಾವಣೆಯ ಫಲಿತಾಂಶ ಅಚ್ಚರಿಯನ್ನು ತಂದಿತ್ತು. ಅಂದಿನ ಒಟ್ಟು ೫೧೮ ಪಾರ್ಲಿಮೆಂಟ್ ಸ್ಥಾನಗಳಲ್ಲಿ ಇಂದಿರಾ ಕಾಂಗ್ರೆಸ್ – ೩೫೦, ಸಿಪಿಐ – ೨೩, ಡಿಎಂಕೆ – ೨೩ ಇತರರೆಲ್ಲ ಸೇರಿ ಈ ಮೈತ್ರಿಕೂಟ ೪೦೦ಕ್ಕಿಂತ ಹೆಚ್ಚಿನ ಸ್ಥಾನ ಪಡೆದಿತ್ತು. ಕಾಂಗ್ರೆಸ್ (ಓ) ನಿಜಲಿಂಗಪ್ಪನವರ ಬಣ–೧೬, ಜನಸಂಘ–೨೨, ಸ್ವತಂತ್ರ ಪಕ್ಷ–೮, ಎಸ್.ಎಸ್.ಪಿ.–೩ ಹೀಗೆ ಈ ಬಲಪಂಥೀಯರ ಬಣ ಎರಡಂಕಿಯನ್ನೂ ದಾಟಲಿಲ್ಲ. ಇಂದಿರಾ ಕಾಂಗ್ರೆಸ್ ಪಕ್ಷಕ್ಕೆ, ಅವರ ಮೈತ್ರಿಕೂಟಕ್ಕೆ ಇಂಥ ಗೆಲುವಿಗೆ ಪ್ರಮುಖ ಕಾರಣ ಈ ಬಣ ಘೋಷಣೆ ಮಾಡಿದ ಸಮಾಜವಾದಿ ಮಾದರಿಯ ನೀತಿಗಳು. ೧೯೬೯ರಿಂದಲೇ ಆರಂಭಿಸಿದ ಆರ್ಥಿಕ ವಲಯದ ರಾಷ್ಟ್ರೀಕರಣ, ಸಾಮಾಜಿಕ ನ್ಯಾಯ, ನಗರ ಆಸ್ತಿಗಳ ನಿಯಂತ್ರಣ, ಭೂಸುಧಾರಣೆ, ಮಾಜಿ ರಾಜ ಮನೆತನದವರ (ಪ್ರಿವಿ ಪರ್ಸ್) ಪಿಂಚಣಿ ರದ್ದತಿ ಹೀಗೆ ಸಂವಿಧಾನದ ರಾಜ್ಯ ನಿರ್ದೇಶನ ತತ್ವಗಳಡಿಯಲ್ಲಿ ಬರುವ ಜನಮುಖಿ ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಗಿತ್ತು. ಮುಂದೆ ತುರ್ತು ಪರಿಸ್ಥಿತಿಯ ಅತಿರೇಕಗಳಿಂದ ಕಾಂಗ್ರೆಸ್ ಜನಪ್ರಿಯತೆ ಕಳೆದುಕೊಂಡಿತು. ಆದರೆ ಒಂದು ನಿರ್ದಿಷ್ಟ ಸಂದರ್ಭದಲ್ಲಿ ಕಾಂಗ್ರೆಸ್ ಬಲಪಂಥೀಯ ಶಕ್ತಿಗಳಿಗೆದುರಾಗಿ ಸಮಾಜವಾದಿ ಮಾದರಿಯ, ಜನಪರ ನೀತಿಗಳನ್ನನುಸರಿಸಿದ್ದರಿಂದಾಗಿ ಪ್ರಜೆಗಳ ಪಕ್ಷವಾಗಿ ಬಲಪಂಥವನ್ನು ಎದುರಿಸಿತ್ತು. ಆದರೆ ರಾಜೀವ್ ಗಾಂಧಿಯವರ ಕಾಲದಿಂದ ಆರಂಭವಾದ ಹೊಸ ಆರ್ಥಿಕ ನೀತಿ, ಪಿ. ವಿ. ನರಸಿಂಹರಾವ್ ಅವರ ಕಾಲದಲ್ಲಿ ಒಪ್ಪಿಕೊಂಡ ಜಾಗತೀಕರಣ, ಉದಾರೀಕರಣ ನೀತಿಗಳು, ಆ ನೀತಿಗಳನ್ನು ಕೋಮುವಾದ, ಹುಸಿ ದೇಶಪ್ರೇಮದ ಮುಸುಕಿನಲ್ಲಿ ಇನ್ನೂ ವೇಗದಲ್ಲಿ ವಿಭಿನ್ನ ಹೆಸರಿನಲ್ಲಿ ಕಾರ್ಪೊರೇಟ್ ಕಂಪನಿಗಳ ಪರವಾಗಿ ಉತ್ಸಾಹದಿಂದ ಜಾರಿ ಮಾಡುತ್ತಿರುವ ಬಿ.ಜೆ.ಪಿ., ಪ್ರಧಾನಿ ಮೋದಿಯವರ ನೀತಿಗಳು ನಮ್ಮ ದೇಶದ ಪ್ರಭುತ್ವವನ್ನು ಹರಾಜು ಹಾಕಿವೆ. ಪ್ರಜಾಸತ್ತೆಯನ್ನು ಸಂಪತ್ತಿನವರ ಸತ್ತೆಯನ್ನಾಗಿಸಿದ್ದಾರೆ.

ಕಾಂಗ್ರೆಸ್, ಇತರ ಎಡ, ಜಾತ್ಯತೀತ, ಪ್ರಜಾಸತ್ತಾತ್ಮಕ ಪಕ್ಷಗಳು ಚಳುವಳಿಗಳು ಬರೀ ಬಿಜೆಪಿ, ಮೋದಿ, ಅದಾನಿ, ಅಂಬಾನಿಗಳನ್ನು ಟೀಕಿಸುತ್ತ ಕುಳಿತರೆ ಸಾಲದು. ಪ್ರಜೆಗಳ ಕೈಯಿಂದ ಕೈ ತಪ್ಪಿದ ಪ್ರಜಾಸತ್ತೆಯನ್ನು ಮತ್ತೆ ಪ್ರಜೆಗಳ ಕೈಗೆ ಕೊಡಿಸುವ ಯತ್ನ ಮಾಡಬೇಕು. ನೊಂದ, ಶೋಷಿತ ಜನತೆಗೆ ಭರವಸೆ ಬರುವಂಥ ವಿಶ್ವಾಸಾರ್ಹ ಬದಲಿಯನ್ನು ರೂಪಿಸಬೇಕು. ಅಂತಿಮವಾಗಿ ಪ್ರಜಾಸತ್ತೆಯನ್ನು ಪ್ರಜೆಗಳೇ ರಕ್ಷಿಸಬೇಕು. ವಿಶ್ವದ ಇತಿಹಾಸದಲ್ಲಿ ಸರ್ವಾಧಿಕಾರಿಗಳನ್ನು, ನರಭಕ್ಷಕರನ್ನು, ಪ್ರಜಾಪೀಡಕರನ್ನು ನೆಲಸಮಾಧಿ ಮಾಡಿದ್ದು ಜನಶಕ್ತಿಯೇ. ೧೯೭೧ರಿಂದ ಜನಬೆಂಬಲದಿಂದ ಪ್ರಚಂಡ ಬಹುಮತದಿಂದ ಅಧಿಕಾರಕ್ಕೆ ಬಂದ ಇಂದಿರಾ ಗಾಂಧಿ ತಮ್ಮ ಸರ್ವಾಧಿಕಾರಿ ಧೋರಣೆಯಿಂದ ಮುಂದಿನ ಚುನಾವಣೆಯಲ್ಲಿ ಸೋತುಹೋದರು, ಇಂದಿರಾ ಕಾಂಗ್ರೆಸ್‌ಅನ್ನು ಸೋಲಿಸಿ ಜನಸಂಘವನ್ನು ಒಳಗೊಂಡಿದ್ದ ಜನತಾಪಕ್ಷ ಅಧಿಕಾರಕ್ಕೆ ಬಂದು ಅಲ್ಪಾವಧಿಯಲ್ಲಿ ನೆಲಕ್ಕುರುಳಿತು. ಜಾಗತೀಕರಣ ನೀತಿ ಜಾರಿಗೆ ತಂದ ನರಸಿಂಹರಾವ್‌ರನ್ನು ಜನ ಮರೆತೇ ಹೋಗಿದ್ದಾರೆ. ಯು.ಪಿ.ಎ. ಒಂದನೇ ಅವಧಿಯಲ್ಲಿ ಜನಪರ ನೀತಿ ಜಾರಿಗೆ ತಂದು ಎರಡನೇ ಬಾರಿಗೆ ಪ್ರಧಾನಿಯಾದ ಮನಮೋಹನ ಸಿಂಗ್ ಅವರ ಸರಕಾರ ಭ್ರಷ್ಟಾಚಾರದ ಕೊಳಚೆಯಲ್ಲಿ ಮುಳುಗಿಹೋಯಿತು. ಈಗ ಕಾಂಗ್ರೆಸ್‌ನ ವೈಫಲ್ಯದಿಂದ ಅಧಿಕಾರಕ್ಕೆ ಬಂದ ಬಿ.ಜೆ.ಪಿ.ಯ ಮೋದಿ ಸರಕಾರ ಕೋಮುವಾದ, ರಫೇಲ್ ಹಗರಣ, ನೋಟುರದ್ದತಿ, ಸುಳ್ಳು ಘೋಷಣೆ, ಕಾರ್ಪೊರೇಟ್ ಪರ ನೀತಿಗಳಿಂದ ಜನವಿರೋಧಿಯಾಗಿದೆ. ಅದನ್ನು ಮುಚ್ಚಿಕೊಳ್ಳಲು ಧರ್ಮ, ಹುಸಿ ದೇಶಪ್ರೇಮ ಮುಂತಾದ ಭಾವನಾತ್ಮಕ ಘೋಷಣೆಗಳನ್ನು ಕೊಡುತ್ತಿದೆ. ಜನ ಬದಲಿಸುತ್ತಾರೆ, ಹಿಂದೆ ಬದಲಿಸಿದ್ದಾರೆ, ಮುಂದೆಯೂ ಬದಲಿಸುತ್ತಾರೆ, ಯಾಕೆಂದರೆ ಅವರು ಪ್ರಜಾಸತ್ತೆಯ, ಸಂವಿಧಾನದ ರಕ್ಷಕರು.


ತಿಂಗಳ ಪತ್ರಿಕೆ



**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





**■ ಚಂದಾ ವಿವರಗಳು**

| | |
|---|---|
| **ಬಿಡಿ ಸಂಚಿಕೆ** | ₹ ೨೫/- |
| **ವಾರ್ಷಿಕ ಚಂದಾ** | ₹ ೩೦೦/- |
| **ಮೂರು ವರ್ಷಕ್ಕೆ** | ₹ ೬೦೦/- |

**■ ನವಕರ್ನಾಟಕ ಶಾಖೆಗಳು**

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

*(೩ನೇ ಪುಟದಿಂದ ಈ ತಿಂಗಳು)*

ವಾಲುತ್ತಾರೆಂಬುದೇ ಯಕ್ಷ ಪ್ರಶ್ನೆ. ಭಾಜಪ ಕಾಯುವ ತಂತ್ರ ಅನುಸರಿಸುತ್ತಿದ್ದು ಸುಮಲತಾಗೆ ಬೆಂಬಲ ನೀಡಲು ತುದಿಗಾಲಲ್ಲಿ ನಿಂತಿದೆ. ಟಿಕೇಟು ಆಕಾಂಕ್ಷಿಗಳ ಪಡೆಯೇ ನಿರ್ಮಾಣವಾಗಿದೆ. ಕಾಂಗ್ರೆಸ್–ಭಾಜಪಗಳು ಹೈಕಮಾಂಡ ಮೊರೆಹೋಗಿವೆ. ಹಿರಿಯ ರಾಜಕಾರಣಿ ದೇವೇಗೌಡರು ಚುನಾವಣೆಯಲ್ಲಿ ಸ್ಪರ್ಧಿಸುವುದು ಬಹುತೇಕ ಖಚಿತವಾಗಿದೆ. ಗೆದ್ದರೆ ಅಜ್ಜ–ಮೊಮ್ಮಕ್ಕಳು ಮೊದಲಬಾರಿಗೆ ಲೋಕಸಭೆಯಲ್ಲಿ ಕಂಗೊಳಿಸುತ್ತಾರೆ. ಟಿಕೆಟ್ ಸಿಗದವರು ಪಕ್ಷಾಂತರ ಮಾಡುವುದಂತೂ ಗ್ಯಾರಂಟಿ. ಈಗಾಗಲೇ ಪ್ರಚಾರ ಕಾರ್ಯ ಬಿರುಸಿನಿಂದ ಪ್ರಾರಂಭವಾಗಿದೆ. ಮಾಧ್ಯಮಗಳಲ್ಲಿ ಚುನಾವಣೆಯ ಅಬ್ಬರ ಜೋರಾಗಿದೆ. ಸಮೀಕ್ಷೆಗಳೂ ಸಹ ಪ್ರಕಟಗೊಳ್ಳುತ್ತಿವೆ. ಯಾರಿಗೆ ಎಷ್ಟು ಎಂಬ ಊಹಾಪೋಹಗಳಿಗೆ ಇದು ಕಾಲ. ಪತ್ರಿಕೆಗಳಲ್ಲಿ ಪುಟಗಟ್ಟಲೆ ಜಾಹೀರಾತುಗಳು ಬರುತ್ತಿವೆ. ಹಣದ ಹೊಳೆ ಹರಿಯುತ್ತಿದೆ. ಫಲಿತಾಂಶ ಮತದಾರರ ಮರ್ಜಿಗೆ ಬಿಟ್ಟದ್ದು.

ಲೋಕಸಭೆಗೆ ನಡೆಲಿರುವ ಈ ಚುನಾವಣೆಗಳಲ್ಲಿ ಎಡಪಕ್ಷಗಳು ಕಳೆದ ಲೋಕಸಭೆಯಷ್ಟು ಸ್ಥಾನ ಗಳಿಸುತ್ತವೆಯೇ ಎಂಬುದು ನಡೆದಿರುವ ಚರ್ಚೆಯಲ್ಲಿ ಒಂದು ಭಾಗ. ಕಳೆದ ಚುನಾವಣೆಗಳಲ್ಲಿ ಬಲಪಂಥೀಯರದೇ ಮೇಲುಗೈ ಆಗಿತ್ತು. ಕರ್ನಾಟಕದಮಟ್ಟಿಗೆ ಎಡಪಕ್ಷಗಳ, ಅಂದರೆ ಕಮ್ಯುನಿಸ್ಟ್ ಪಕ್ಷಗಳ ಸ್ಥಿತಿ ಆಟಕ್ಕುಂಟು ಲೆಕ್ಕಕ್ಕಿಲ್ಲ ಎನ್ನುವ ಹಾಗಿದೆ. ದೇಶದಲ್ಲಿ ಜರುಗಿದ ಮೊದಲ ಚುನಾವಣೆಗಳಲ್ಲಿ ಕಾಂಗ್ರೆಸ್ಸಿಗೆ ಇದಿರಾಗಿ ಪ್ರಮುಖ ಪ್ರತಿಪಕ್ಷವಾಗಿ ಹೊಮ್ಮಿತ್ತು ಕಮ್ಯುನಿಸ್ಟ್ ಪಕ್ಷ – ಪುರೋಗಾಮಿ ಸುಧಾರಣೆಗಳ ಮೇಲೆ ಸಾಕಷ್ಟು ಪ್ರಭಾವ ಬೀರಿತ್ತು. ರೈತ, ಕಾರ್ಮಿಕರ ಹಿತಕ್ಕಾಗಿ ಶ್ರಮಿಸುತ್ತಿತ್ತು. ಆಗ ಕಮ್ಯುನಿಸ್ಟ್ ಪಕ್ಷದ ನೇತಾರರಾದ ಎ. ಕೆ. ಗೋಪಾಲನ್, ಹಿರೇನ್ ಮುಖರ್ಜಿ, ರೇಣು ಚಕ್ರವರ್ತಿ, ಭೂಪೇಶ ಗುಪ್ತ ಮೊದಲಾದ ಘಟಾನುಘಟಿಗಳು ಇದ್ದರು. ಇಬ್ಭಾಗವಾಗಿರುವ ಸಿಪಿಐ, ಸಿಪಿಎಂಗಳು ಈಗಂತೂ ದೇಶದ ನೀತಿಗಳ ಮೇಲೆ ಪ್ರಭಾವ ಬೀರುವುದಂತೂ ಬಿಡಿ, ಸ್ಥಾನಗಳನ್ನು ಉಳಿಸಿಕೊಳ್ಳುವುದೇ ಕಷ್ಟವಾಗಿದೆ.

✶ ✶ ✶

ನಂಬಿಕೆ ಮತ್ತು ಸಂವಿಧಾನ ಇವುಗಳ ಪೈಕಿ ಯಾವುದು ಶ್ರೇಷ್ಠ? ಸಂವಿಧಾನವೇ ಶ್ರೇಷ್ಠ ಎನ್ನುವುದು ವಿಚಾರವಾದಿಗಳ ಅಭಿಮತ, ಸಂಪ್ರದಾಯಿಗಳದ್ದು ನಂಬಿಕೆ ಶ್ರೇಷ್ಠ ಎಂದು. ದೇಶದ ಸರ್ವೋಚ್ಚ ನ್ಯಾಯಾಲಯ ಈ ವಿಷಯದಲ್ಲಿ ಸ್ವಲ್ಪ ಡೋಲಾಯ ಮಾನಸ್ಥಿತಿಯಲ್ಲಿ ಇರುವಂತೆ ತೋರುತ್ತದೆ. ಶಬರಿಮಲೆ ದೇವಾಲಯಕ್ಕೆ ಮಹಿಳೆಯರ ಪ್ರವೇಶದ ಕುರಿತು ಸುಪ್ರೀಂ ಕೋರ್ಟು ಸಂವಿಧಾನವನ್ನು ಎತ್ತಿಹಿಡಿದು ಐತಿಹಾಸಿಕ ತೀರ್ಪನ್ನು ನೀಡಿತು. ಆದರೆ ಸಂಪ್ರದಾಯವಾದಿಗಳು, ಮುಖ್ಯವಾಗಿ ಹಿಂದುತ್ವ ಸಂಘಟನೆಗಳಾದ ಭಾಜಪ, ಅದರ ಮಾತೃಸಂಸ್ಥೆ ಆರೆಸ್ಸೆಸ್ ಕಾರ್ಯರೂಪಕ್ಕೆ ಬಾರದಂತೆ ನೋಡಿಕೊಂಡಿದೆ. ಪುನರ್‌ಪರಿಶೀಲನ ಅರ್ಜಿಯನ್ನು ದೇವಾಲಯದ ಆಡಳಿತ ಸಲ್ಲಿಸಿದೆ. ಇದು ಈ ದೇಶದಲ್ಲಿ ಇಂದು ಪ್ರಮುಖ ಪ್ರಶ್ನೆ.

ಇದೇ ಜಿಜ್ಞಾಸೆ ಸುಪ್ರೀಂಕೋರ್ಟು ಕೆಲಸಮಯದ ಹಿಂದೆ ಉತ್ತರ ಪ್ರದೇಶದ ರಾಮಮಂದಿರದ ಪ್ರಕರಣ ದಲ್ಲಿ ಎದುರಿಸಿತ್ತು. ಆದರೆ ಆಗ ಸ್ಪಷ್ಟವಾದ ನಿಲುವನ್ನು ತಳೆಯದೆ ಜಾರಿಕೊಂಡಿತು. ಈಗ ಪ್ರಶ್ನೆ ಪ್ರಧಾನ ವಾಗಿ ಮುಂದೆ ಬಂದಿದೆ. ರಾಮಮಂದಿರದ ಪ್ರಶ್ನೆ ನಂಬಿಕೆಯ ಪ್ರಶ್ನೆ ಹಿಂದುಗಳಿಗೆ. ಮುಸಲ್ಮಾನರಿಗೂ ಕೂಡ ಹಾಗೆಯೇ. ಮತ ಬ್ಯಾಂಕ್ ರಾಜಕಾರಣಕ್ಕೆ ಸಿಲುಕಿರುವ ಈ ವಿವಾದ ಇಂದು ನಿನ್ನೆಯದಲ್ಲ. ದಶಕಗಳಿಂದ ಇದೆ. ಸುಪ್ರೀಂ ಕೋರ್ಟು ಇದು ಸ್ಥಿರಾಸ್ತಿಗೆ ಸಂಬಂಧಪಟ್ಟ ವಿವಾದ ಎಂದು ಹೇಳುತ್ತ ಬಂದಿದ್ದರೂ, ತೀರ್ಪು ಹೊರಬಿದ್ದಾಗ ಎರಡೂ ಧರ್ಮೀಯರ ಪ್ರತಿರೋಧ ಎದುರಿಸಬೇಕಾಗುತ್ತದೆ.

ಈ ಪರಿಸ್ಥಿತಿಯಿಂದ ಹೊರಬರಲು ಸುಪ್ರೀಂ ಕೋರ್ಟು ಈಗ ಮಧ್ಯಸ್ಥಿಕೆಯ ಮಾರ್ಗ ಹಿಡಿದಿದೆ. ವಿವಾದವನ್ನು ಮಧ್ಯಸ್ಥಿಕೆಗೆ ವಹಿಸಿದೆ. ಸುಪ್ರೀಂ ಕೋರ್ಟಿನ ನಿವೃತ್ತ ನ್ಯಾಯಮೂರ್ತಿ ಎಫ್ ಎಂ ಇಬ್ರಾಹಿಂ ಕಲೀಫುಲ್ಲಾ, ಬೆಂಗಳೂರಿನ ಸಮೀಪ ಇರುವ ಆರ್ಟ್ ಆಫ್ ಲಿವಿಂಗ್‌ನ ಶ್ರೀ ಶ್ರೀ ರವಿಶಂಕರ ಮತ್ತು ಹಿರಿಯ ವಕೀಲ ಶ್ರೀ ರಾಮ ಪಂಚು, ಈ ಮೂವರನ್ನೊಳಗೊಂಡ ಸಮಿತಿಯನ್ನು ರಚಿಸಿದೆ. ಕಾಲವನ್ನು ನಿಗದಿಮಾಡಿ ಎಂಟು ವಾರಗಳಲ್ಲಿ ವರದಿ ಸಲ್ಲಿಸಬೇಕೆಂದು ತಾಕೀತು ಮಾಡಿದೆ. ಸಂಧಾನ ಪ್ರಕ್ರಿಯೆ ಮುಗಿದು ಅದರ ಶಿಫಾರಸ್ಸು ಕಾರ್ಯಗತವಾದೀತೆಂಬುದಕ್ಕೆ ಖಾತರಿ ಏನು? ಈ ಪ್ರಶ್ನೆಗೆ ಉತ್ತರ ಇಲ್ಲ. ಇನ್ನಷ್ಟು ಗೊಂದಲ ಸೃಷ್ಟಿಯಾದೀತು ಎಂಬ ಸಂಶಯ ಹೆಚ್ಚಾಗಿದೆ. ಇದರ ಬಗ್ಗೆ ಮಾಧ್ಯಮಗಳಲ್ಲಿ, ಪತ್ರಿಕೆಗಳಲ್ಲಿ ವಿಪುಲವಾದ ಚರ್ಚೆ ನಡೆದಿದೆ. ಸುಪ್ರೀಂ ಕೋರ್ಟಿನ ತೀರ್ಪಿಗಾಗುವ ಪ್ರತಿಕ್ರಿಯೆಯೇ, ಸಂಧಾನಕ್ಕೂ ಆಗಬಹುದಲ್ಲವೇ? ಈಗಾಗಲೇ ಗುರು ರವಿಶಂಕರ್ ಬಗ್ಗೆ ಹಿಂದು ಸಂಘಟನೆಗಳು ಆಕ್ಷೇಪ ವ್ಯಕ್ತಗೊಳಿಸಿವೆ. ಕೆಲಸಮಯದ ಹಿಂದೆ ಈತ ಸಂಧಾನಕ್ಕೆ ಪ್ರಯತ್ನಿಸಿ ವಿಫಲವಾಗಿದ್ದರು. ಹಿಂದುತ್ವವಾದಿಗಳು ವಿವಾದಿತ ಪ್ರದೇಶದಲ್ಲಿ ರಾಮಮಂದಿರ ನಿರ್ಮಿಸಿಯೇ ತೀರುತ್ತೇವೆ ಎಂದು ಹೇಳುತ್ತ ಬಂದಿದ್ದಾರೆ. ಏನಾಗುತ್ತದೋ ನೋಡಬೇಕು.

✶ ✶ ✶

ಉಗ್ರರ ಉಪಟಳ ಭಾರತಕ್ಕೆ ಮಾತ್ರ ಸೀಮಿತ ವಾಗಿಲ್ಲ. ಅದು ಪ್ರಪಂಚದಾದ್ಯಂತ ವ್ಯಾಪಿಸಿದೆ. ಅಮೆರಿಕದ ಟ್ರೇಡ್ ಸೆಂಟರ್ ಮೇಲೆ ದಾಳಿ ನಡೆದು ವರ್ಷಗಳು ಉರುಳಿದರೂ ಉಗ್ರರ ಮೇಲೆ ಸಮರ ಸಾರಿದರೂ ಉಗ್ರರ ಚಟುವಟಿಕೆ, ಕಾರ್ಯಾಚರಣೆ ಗಳನ್ನು ನಿಯಂತ್ರಿಸಲಾಗಿಲ್ಲ. ಯುರೋಪಿನ ದೇಶಗಳಲ್ಲಿ ಉಗ್ರರ ದಾಳಿ ಆಗಾಗ ನಡೆಯುತ್ತಲೇ ಇದೆ. ಪ್ಯಾರಿಸ್, ಬ್ರಸೆಲ್ಸ್, ಲಂಡನ್ ಮೊದಲಾದ ಐರೋಪ್ಯ ನಗರಗಳು ಉಗ್ರರ ದಾಳಿಗೀಡಾಗಿವೆ. ಕೆಲ ದಿನಗಳ ಹಿಂದೆ ನ್ಯೂಜಿಲೆಂಡ್‌ನ ಕ್ರೈಸ್ಟ್ ಚರ್ಚ್ ಮಸೀದಿಯಲ್ಲಿ ಉಗ್ರನೊಬ್ಬನ ಬಂದೂಕು ದಾಳಿಯಲ್ಲಿ ಸುಮಾರು ೩೯ ಮಂದಿ ಮೃತರಾದರು. ಶುಕ್ರವಾರದ ಪ್ರಾರ್ಥನೆ ಸಮಯದಲ್ಲಿ ನಡೆದ ಪ್ರಕರಣ ಇದು. ಇವರ ಪೈಕಿ ಏಳು ಮಂದಿ ಭಾರತೀಯರೂ ಇದ್ದಾರೆ. ಮೃತರ ಕುಟುಂಬಗಳಿಗೆ 'ಹೊಸತು' ಸಾಂತ್ವನ ವ್ಯಕ್ತಪಡಿಸುತ್ತದೆ. ಇಂಥ ಪ್ರಕರಣಗಳು ಅಧಿಕವಾಗಿ ಒಂದು ಕೋಮಿಗೆ ಸೀಮಿತವಾಗಿರುವುದೀಗ ಆತಂಕಕಾರಿ. ಇದನ್ನು ತಡೆಯುವುದು ಹೇಗೆ ಎಂದು ಪರಿಶೀಲಿಸುವ ಅನಿವಾರ್ಯತೆ ಇದೆ. ದಾಳಿಕೋರರು ನಡೆಸುವ ಹಠಾತ್ ಕಾರ್ಯಾಚರಣೆಯಲ್ಲಿ ಸಾವಿಗೀಡಾಗುವವರು ಅಮಾಯಕರೇ ಹೆಚ್ಚು.

✶ ✶ ✶

ಸರ್ವೋಚ್ಚ ನ್ಯಾಯಾಲಯದಲ್ಲಿ ನಮ್ಮ ದೇಶದ ಅಟಾರ್ನಿ ಜನರಲ್ ಶ್ರೀ. ಕೆ. ಕೆ. ವೇಣುಗೋಪಾಲ ಅವರು ದಿನಕ್ಕೊಂದು ಮಾಹಿತಿ ನೀಡಿ, ವಾದ ಮಂಡಿಸಿ, ಮಹಾ 'ಗೊಂದಲಿಗ' ಮತ್ತು ಸರ್ಕಾರ ಹಾಗೂ ಪ್ರಧಾನ ಮಂತ್ರಿಗಳ ಖಾಸಾ ರಕ್ಷಕನೆಂದು ಫಜೀತಿ ಮಾಡಿಕೊಂಡಿದ್ದಾರೆ. ಆದರೆ ಉನ್ನತ ಸ್ಥಾನದಲ್ಲಿರುವುದರಿಂದ ಯಾರೂ ಅವರನ್ನು ನೇರವಾಗಿ ಮತ್ತು ಖಾರವಾಗಿ ಟೀಕಿಸಿಲ್ಲ. ಬಹಳ ಹಿಂದೆ ಅವರ ವಿರುದ್ಧ ಗಂಭೀರ ಆರೋಪಗಳಿದ್ದು, ಹೇಗೋ ಪಾರಾಗಿ ಬಂದಿರುವ ಪ್ರಭೃತಿ ಅವರು. ಹಿಂದೆ ಅವರು ಆಗಾಗ್ಗೆ ಕಾನೂನು ವಿಷಯಗಳನ್ನು ಕುರಿತು ಲೇಖನ ಗಳನ್ನು ಪ್ರಕಟಿಸುತ್ತಿದ್ದರು. ಅವನ್ನು ನೋಡಿದಾಗ ಈತ ಸಮುದಾಯದ ಪರವಾಗಿರುವ ತಜ್ಞ ಎನಿಸುತ್ತಿದ್ದುದು ಉಂಟು. ಉನ್ನತ ಹುದ್ದೆಯನ್ನು ಸ್ವೀಕರಿಸಿದ ನಂತರ ಅವರ ಬಣ್ಣ ಬದಲಾಗಿದೆ ಮತ್ತು ಸರ್ಕಾರದ ವಜ್ರ ಕವಚವೆಂದರೆ ತಾನೇ ಎಂಬ ಭ್ರಾಂತಿಯಿಂದಾಗಿ ಅನಿರೀಕ್ಷಿತ ಹೆಜ್ಜೆಗಳನ್ನು ಹಾಕುತ್ತಿದ್ದಾರೆ. ಅದು ಅವರ ಹಕ್ಕು. ಅದನ್ನಾರೂ ಪ್ರಶ್ನಿಸಬೇಕಾಗಿಲ್ಲ. ಆದರೆ ಅವರ ನಿಲುವುಗಳು ತೀರಾ ಹಾಸ್ಯಾಸ್ಪದವಾಗಿ ಕಾಣುತ್ತವೆ. ರಫಾಲ್ ಯುದ್ಧವಿಮಾನಗಳ ಖರೀದಿ ಬಾಬ್ತು ನ್ಯಾಯಾಲಯದಲ್ಲಿ ಒಂದು ಮೊಕದ್ದಮೆ ದಾಖಲು ಆಗಿದೆ : ಕೇಂದ್ರ ಸರ್ಕಾರವು ಅತಿಮುಖ್ಯ ವಿವರಗಳನ್ನು ಮುಚ್ಚಿಟ್ಟು ನಮ್ಮ ದೇಶದ ಖಜಾನೆಗೆ ಸಾವಿರಾರು ರೂಪಾಯಿಗಳ ನಷ್ಟವನ್ನುಂಟುಮಾಡಿದೆ ಎಂಬುದು ವಿಚಾರಣೆಗೆ ಬಂದಿರುವ ವಿಷಯ. ಮೊಕದ್ದಮೆ ಜಾರಿಯಲ್ಲಿರುವಾಗಲೇ 'ದಿ ಹಿಂದು' ಪತ್ರಿಕೆಯಲ್ಲಿ ಎನ್. ರಾಮ್ ಅವರು ಸರ್ಕಾರವು ಮುಚ್ಚಿಟ್ಟಿದ್ದ ಹಲವಾರು ಅಂಶಗಳನ್ನು ದಾಖಲೆಗಳ ಆಧಾರದ ಮೇಲೆ ದೇಶದ ಮುಂದೆ ಇರಿಸಿದ್ದಾರೆ. ಅವರು ಪ್ರಕಟಿಸಿರುವ ಪುರಾವೆಗಳು ಸಂಪೂರ್ಣವಾಗಿ ಅಧಿಕೃತ ಪುರಾವೆಗಳೆಂಬುದರಲ್ಲಿ ಸಂಶಯವಿಲ್ಲ. ಅದನ್ನು ಮಾನ್ಯ ವೇಣುಗೋಪಾಲ ಸಹ ಒಪ್ಪಿದ್ದಾರೆ ಎಂಬುದು ಖಚಿತ. ಮೊದಲಿಗೆ ಅವರು ಮುಚ್ಚಿದ ಲಕೋಟೆಯಲ್ಲಿ ನ್ಯಾಯಾಲಯಕ್ಕೆ ದಾಖಲೆಗಳನ್ನು ಸಲ್ಲಿಸಿ ಅವೆಲ್ಲಾ ತೀರಾ ರಹಸ್ಯ ದಾಖಲೆಗಳೆಂದು ಹೇಳಿದರು. ರಾಮ್ ರಹಸ್ಯವನ್ನು ಬಯಲು ಮಾಡಿ ಅಗಾಧ ಮೋಸ ನಡೆದಿದೆ, ಪ್ರಧಾನಿಯವರ

ಕಚೇರಿಯು ರಫಾಲ್ ಖರೀದಿ ವ್ಯವಹಾರದಲ್ಲಿ ಮೂಗುತೂರಿಸಿದೆ, ಅದರಿಂದ ಅಪಾರ ಹಾನಿಯಾಗಿದೆ ಎಂಬುದನ್ನು ಸಾಬೀತುಪಡಿಸಿದರು. 'ಸ್ಕ್ಯಾಮ್'ಗಳೇ ಇಲ್ಲವೆನ್ನಲಾದ ಸರ್ಕಾರದ ದೊಡ್ಡ ಸ್ಕ್ಯಾಮ್ ಇದೆಂದು ದೇಶದಲ್ಲಿ ನೂರಾರು ಗಣ್ಯರು ಮನಗಂಡರು. ಆಗ ಮಾನ್ಯ ವೇಣುಗೋಪಾಲ್ ಹೇಳಿದರು, 'ಸರ್ಕಾರಿ ರಹಸ್ಯ ದಾಖಲೆಗಳನ್ನು ಯಾರೋ ಕಳವು ಮಾಡಿರುವುದರಿಂದ ಅಧಿಕೃತ ದಾಖಲೆಗಳನ್ನು ನ್ಯಾಯಾಲಯಕ್ಕೆ ಸಲ್ಲಿಸಲು ಸಾಧ್ಯವಾಗುತ್ತಿಲ್ಲ' ಎಂದು. ಕಳ್ಳರನ್ನು ಶಿಕ್ಷಿಸಲು ತನಿಖೆ ನಡೆಸಲಾಗುವುದೆಂದೂ ಅಪ್ಪಣೆ ಕೊಡಿಸಿದರು. ಹಾಗೆಲ್ಲಾ ನಾಟಕೀಯವಾಗಿ ದೇಶದ ಮುಂದೆ 'ಆಗಬಾರದ್ದು ಆಗಿಹೋಗಿದೆ' ಎಂದು ಕಳವಳ ವ್ಯಕ್ತಪಡಿಸಿದ ಮಾನ್ಯರು ಮಾರನೆಯ ದಿನ ನ್ಯಾಯಾಲಯಕ್ಕೆ ತಿಳಿಸಿದರು, "ದಾಖಲೆಗಳು ಕಳವಾಗಿಲ್ಲ, ಆದರೆ ಅದನ್ನು ಯಾರೋ ಬಹಿರಂಗ ಪಡಿಸಿ ಶತ್ರುದೇಶಕ್ಕೆ ನಮ್ಮ ಗುಟ್ಟೆಲ್ಲಾ ತಿಳಿಯುವಂತೆ ಮಾಡಿಬಿಟ್ಟಿದ್ದಾರೆ, ಅದರಿಂದ ದೇಶದ ರಕ್ಷಣೆಗೆ ಧಕ್ಕೆಯುಂಟಾಗಬಹುದು, ಗುಟ್ಟು ರಟ್ಟುಮಾಡಿದವರು ದೇಶ ವಿರೋಧಿ ಕೆಲಸ ಮಾಡಿದ್ದಾರೆ, ಅವರನ್ನು ತನಿಖೆಗೆ ಗುರಿಮಾಡಿ ಶಿಕ್ಷೆ ನೀಡುವ ಯೋಚನೆ ಇದೆ," ಎಂದು. ನ್ಯಾಯಾಲಯದಲ್ಲಿ ತಮಾಷೆಗೆ ಸಾಕಷ್ಟು ಆಸ್ಪದವಿದೆಯೆಂದು ಇದರಿಂದ ತಿಳಿದಂತಾಯಿತು. ಯಾವ ಗುಟ್ಟು ರಟ್ಟಾಯಿತು? ಭಾರತವು ರಫಾಲ್ ಯುದ್ಧವಿಮಾನಗಳನ್ನು ಕೊಳ್ಳಲಿದೆ ಎಂದೆ? ಅದು ಎಷ್ಟೋ ವರ್ಷಗಳಿಂದ ಜಗಜ್ಜಾಹೀರಾಗಿದೆ. ಮೊದಲು ನೂರಕ್ಕೂ ಹೆಚ್ಚು ವಿಮಾನಗಳನ್ನು ಪಡೆಯಲಿದ್ದೆವು, ಆದರೆ ಶ್ರೀ. ಮೋದಿಯವರ ಸರ್ಕಾರವು ಅದನ್ನು ಮೂವತ್ತೈದಕ್ಕೆ ಇಳಿಸಿತು : ಈ ವಿಚಾರ ಸಹ ಎಲ್ಲ ದೇಶಗಳಿಗೂ ಗೊತ್ತಿದ್ದ ವಿಷಯವೇ. ಈವರೆಗೆ ಗೊತ್ತಿರದಿದ್ದ ಎರಡು ವಿಚಾರಗಳು ಈಗ ಹೊರಬಂದಿವೆ : (ಅ) ಪ್ರಧಾನಿಯವರ ಕಚೇರಿಯು ವ್ಯಾಪಾರದ ವ್ಯವಹಾರವನ್ನು ತಾನೇ ಮುನ್ನಡೆಸಲು ಮಧ್ಯ ಪ್ರವೇಶಿಸಿತು ಮತ್ತು ಅದರಿಂದಾಗಿ ವಿಮಾನಗಳ ಬೆಲೆ ವಿಪರೀತವಾಗಿ ಹೆಚ್ಚಿ ನಮ್ಮ ಬೊಕ್ಕಸಕ್ಕೆ ಸಾವಿರಾರು ಕೋಟಿಗಳ ನಷ್ಟ ಉಂಟಾಯಿತು; (ಆ) ಪ್ರಧಾನಿಯವರ ಕಚೇರಿಯ ಮಧ್ಯಪ್ರವೇಶದ ಸಂದರ್ಭದಲ್ಲೇ ಅಧಿಕೃತ ವ್ಯವಹಾರ ಸಮಿತಿಯಲ್ಲಿ ಮೂವರು ಸದಸ್ಯರು ತಮ್ಮ ಕೆಲವು ವಿರೋಧ ಅಭಿಪ್ರಾಯಗಳನ್ನು ಅಧಿಕೃತವಾಗಿ ಸಮಿತಿಯ ದಾಖಲೆಗಳಲ್ಲಿ ಸೇರ್ಪಡೆಗೊಳಿಸಿದ್ದರು. ಈ "ಗುಟ್ಟು" ರಟ್ಟಾದರೆ "ಶತ್ರು" ದೇಶಗಳಿಗೇನೂ ಲಾಭವಿಲ್ಲ, ಆದರೆ ಮುಜುಗರಕ್ಕೆ ಸಿಲುಕುವವರು ನಮ್ಮ ದೇಶದ ಅತಿ ಹಿರಿಯ ಮುತ್ಸದ್ದಿಗಳು. ಮುಜುಗರವು ಸಾವಿರಾರು ಕೋಟಿ ರೂಪಾಯಿಗಳನ್ನು ಅನಗತ್ಯವಾಗಿ ಹೆಚ್ಚಾಗಿ ಕೊಡಬೇಕಾಗಿ ಬಂದಿದೆ, ಎಂಬುದು. ಈ ವಿಷಯವು ಸಾರ್ವಜನಿಕ ವಲಯದಲ್ಲಿ ಚರ್ಚೆಗೆ ಬರುವುದು ದೇಶದ ಆರೋಗ್ಯಕ್ಕೆ ಹಿತವಾದ್ದೇ ಹೊರತು ಅದರಲ್ಲಿ "ದೇಶದ ಭದ್ರತೆಗೆ ಧಕ್ಕೆ" ಉಂಟಾಗುವಂಥದೇನೂ ಇಲ್ಲ. ಒಟ್ಟಿನಲ್ಲಿ ಸುಮಾರು ಮೂವತ್ತು ಸಾವಿರ ಕೋಟಿ ರೂಪಾಯಿಗಳ ನಷ್ಟವಾಗಿದೆ ಇಲ್ಲವೇ ಆಗಲಿದೆ ಮತ್ತು ನೂರರ ಬದಲು ಮೂವತ್ತೈದು ಯುದ್ಧವಿಮಾನಗಳು ಮಾತ್ರ ನಮ್ಮ ವಾಯುದಳಕ್ಕೆ ಸೇರ್ಪಡೆಯಾಗಲಿವೆ. ಸರ್ವೋಚ್ಚ ನ್ಯಾಯಾಲಯವು ಕೇಂದ್ರ ಸರ್ಕಾರದ ಭ್ರಷ್ಟಾಚಾರವನ್ನು ಮತ್ತು ಮಾಹಿತಿಯನ್ನು, ಸಾರ್ವಜನಿಕರೆದುರು ಮಂಡಿಸಲಾದ ವಿಚಾರವನ್ನು ಹೇಗೆ ಪರಿಗಣಿಸುತ್ತದೆಂಬುದು ಕುತೂಹಲದ ಪ್ರಶ್ನೆಯಾಗಿದೆ. ಬ್ರಿಟಿಷ್ ವಸಾಹತು ಸರ್ಕಾರವು ಬರೆದಿಟ್ಟುಕೊಂಡು ದುರುಪಯೋಗಪಡಿಸಿಕೊಳ್ಳುತ್ತಿದ್ದ ಹೊಲಸು ಕಾನೂನನ್ನು ನಾವಿಂದು ಎತ್ತಿಹಿಡಿಯುವ ದುರ್ಗತಿ ಬಂದಿದೆಯೆ? ಆ ಹೊಲಸು ಕಾನೂನಿನಡಿ ಎನ್. ರಾಮ್ ಅವರನ್ನು ಶಿಕ್ಷಿಸಲಾಗುತ್ತದೆಯೆ? ಅಥವಾ ಕೋಟಿಗಟ್ಟಲೆ ರೂಪಾಯಿಗಳ ಹಗರಣಕ್ಕೆ ಕಾರಣರಾಗಿರುವವರನ್ನು ಸಾರ್ವಜನಿಕವಾಗಿ ಶಿಕ್ಷಿಸಲಾಗುತ್ತದೆಯೆ? ಬೆಂಗಳೂರಿನ ಎಚ್.ಎ.ಎಲ್. ಬಗ್ಗೆ ಸಲ್ಲದ ಆರೋಪ ಹೊರಿಸಿ ಖಾಸಗಿಯ ಒಬ್ಬ 'ಮಹಾತ್ಮ'ನಿಗೆ ಹೊಸ ಕಾರ್ಖಾನೆ ಸ್ಥಾಪಿಸಲು ಸಹಾಯವೆಸಗುತ್ತಿರುವುದು ದೇಶದ ಪರವಾದ ತೀರ್ಮಾನವೆ? ಕಾಲಕ್ರಮೇಣ ಈ ಪ್ರಶ್ನೆಗಳಿಗೆ ಉತ್ತರ ಪಡೆಯುವುದು ನಮ್ಮ ದೇಶದ ನಾಗರಿಕರ ಹಕ್ಕೆಂಬುದನ್ನು ಮರೆಯದಿರೋಣ.

✶ ✶ ✶

ಪುಲ್ವಾಮಾದ ಭೀಕರ ಘಟನೆ ಜರುಗಿ ತಿಂಗಳ ಮೇಲಾಗಿದೆ. ನಮ್ಮ ದೇಶದ ಸೈನಿಕರು ಭಯೋತ್ಪಾದಕರ ಹೀನಕೃತ್ಯಗಳಿಗೆ ಗುರಿಯಾಗುವುದು ಅತ್ಯಂತ ದುಃಖದ ಸಂಗತಿ. ರಣರಂಗದಲ್ಲಿ ಕಾದಾಡಿ ಮಡಿದಾಗ ಅವರಿಗೆ ಅಶ್ರುತರ್ಪಣ ಮಾಡಿ ಅವರ ತ್ಯಾಗವನ್ನು ಶ್ಲಾಘಿಸಿ ವಿನಮ್ರ ಗೌರವವನ್ನು ಸಲ್ಲಿಸುತ್ತೇವೆ. ಹಾಗಾಗದೆ ಆಕಸ್ಮಿಕಗಳಲ್ಲಿ ಅವರು ಅಸುನೀಗಿದರೂ ಅದೇ ಗೌರವ ಸಲ್ಲುತ್ತದೆ. ಧಾಳಿಗಳಿಗೆ ತುತ್ತಾದಾಗ ಅವರಿಗೆ ನಾವು ಸೂಕ್ತ ಸಂರಕ್ಷಣೆ ನೀಡದೆ ಅವರನ್ನು ಮೃತ್ಯುಕೂಪಕ್ಕೆ ತಳ್ಳಿದೆವೋ ಎಂಬ ಆಳವಾದ ಅಪರಾಧ ಭಾವವು ಕಾಡುವುದು ಸಹಜ. ಕಾಶ್ಮೀರದ ಹೆದ್ದಾರಿಗಳಲ್ಲಿ ಅವರು ತೆರಳುವಾಗ ಅವರಿಗೆ ಭದ್ರವಾದ ರಕ್ಷಣಾ ವ್ಯವಸ್ಥೆ ಮಾಡಬೇಕಾದ್ದು ನಾವು, ಏಕೆಂದರೆ ಮಿಲಿಟರಿ ವಾಹನಗಳಲ್ಲಿ ಸಂಚರಿಸುವಾಗ ತಮ್ಮನ್ನು ತಾವು ಸ್ವಯಂ ರಕ್ಷಿಸಿಕೊಳ್ಳಲು ಸಾಧ್ಯವಾಗದಿದ್ದರೆ ಜವಾಬ್ದಾರಿ ಇರುವುದು ನಮ್ಮ ಮೇಲೆ. ಹೆದ್ದಾರಿಗಳಲ್ಲಿ ಭದ್ರತಾ ವ್ಯವಸ್ಥೆ ಕಲ್ಪಿಸದಿರುವುದು ನಮ್ಮ ಅಕ್ಷಮ್ಯ ಲೋಪ. ಭಯೋತ್ಪಾದಕರು ನಮ್ಮ ಆಲಸ್ಯ, ಬೇಜವಾಬ್ದಾರಿತನ, ಕಟ್ಟೆಚ್ಚರ ಇರಿಸುವುದರಲ್ಲಿ ಲೋಪ, ಇಂಥವುಗಳಿಗೆ ಕಾಯುತ್ತಿರುತ್ತಾರೆ. ಅದನ್ನು ತಿಳಿದೂ ಪ್ರಾಥಮಿಕ ಮಟ್ಟದ ರಕ್ಷಣಾ ವ್ಯವಸ್ಥೆ ಕಲ್ಪಿಸದಿರುವುದು ನಮ್ಮ ಮಹಾನ್ ದಳಗಳನ್ನು ವಿನಾಕಾರಣ ತ್ಯಾಗಕೂಪಕ್ಕೆ ದೂಡಿದಂತಾಗುತ್ತದೆ. ಅದಕ್ಕೆ ಎಷ್ಟು ಪಶ್ಚಾತ್ತಾಪಪಟ್ಟರೂ ಸಾಲದು. ಪ್ರಸ್ತುತ ಸಂದರ್ಭದಲ್ಲಿ ಸರ್ಕಾರಿ ವ್ಯವಸ್ಥೆಯ ಸೋಲು ಕಣ್ಣಿಗೆ ರಾಚುವಂತಿದೆ. ಮಡಿದ ಸೈನಿಕರನ್ನು ನಾವೆಷ್ಟು ಶ್ಲಾಘಿಸಿದರೂ ನಮ್ಮ ಬೇಜವಾಬ್ದಾರಿತನವನ್ನು ಮುಚ್ಚಿಹಾಕಲು ಸಾಧ್ಯವಿಲ್ಲ. ಇದು ವಾಸ್ತವ. ನಮ್ಮ ರಕ್ಷಣಾ ವ್ಯವಸ್ಥೆಯ ಸೋಲು ಖಂಡನೀಯವೆನಿಸುತ್ತದೆ. ರಣಾಂಗಣದಲ್ಲಿ ತಮ್ಮನ್ನು ತಾವು ಅರ್ಪಿಸಿಕೊಳ್ಳಲು ಸಿದ್ಧವಿರುವವರಿಗೆ ಈ ರೀತಿಯ ದುಃಖಾಂತವು ತೀರಾ ವಿಪರ್ಯಾಸದ್ದು. ಈಗಲೂ ಸಂರಕ್ಷಣಾ ವ್ಯವಸ್ಥೆಯನ್ನು ಹೆದ್ದಾರಿಯಲ್ಲಿ ಭದ್ರಗೊಳಿಸದಿರಲು ಕಾರಣರಾರೆಂಬುದನ್ನು ತನಿಖೆ ಮಾಡಿ ಅಂತಹ ಅಜಾಗರೂಕತೆ ಮುಂದೆಂದೂ ಜರುಗದಂತೆ ಎಚ್ಚರ ವಹಿಸಬೇಕು.

ನಮ್ಮ ಅಜಾಗರೂಕತೆಯಿಂದ ಮಡಿದವರನ್ನು ಶತ್ರುಪಾಳೆಯದ ಮೇಲಿನ ಧಾಳಿಗಳಿಂದ ಹಿಂದಕ್ಕೆ ಪಡೆಯಲಾರೆವು, ನಿಜ; ಆದರೆ ಪ್ರತಿಧಾಳಿಯು ಸಮರ್ಥನೀಯ ಎನ್ನುವುದು ವಿವಾದದ ವಿಷಯವಾಗಬಾರದು; ಅಂತೆಯೇ ಪ್ರತಿಧಾಳಿಯನ್ನು ಯಾರೂ ವೈಯಕ್ತಿಕ ಸಾಧನೆಯೆಂದು ಬೀಗುವುದು ಅಸಹ್ಯ. ಅದು ದೇಶದ ಕ್ರಿಯೆ ಮತ್ತು ಅದನ್ನು ಯಶಸ್ವಿಗೊಳಿಸುವುದು ದೇಶದ ಸೇನಾಪಡೆ. ದೇಶದ ಪ್ರಧಾನಿಯಾಗಲಿ, ಅವರ ಪಕ್ಷವಾಗಲಿ ತಲೆಗೆ ಪುಕ್ಕ ಸಿಕ್ಕಿಸಿಕೊಳ್ಳಲು ತವಕಿಸುವುದು ಒಂದು ರಾಜಕೀಯ ಪ್ರಹಸನವಾಗಿಬಿಡುತ್ತದೆ, ಸೇನಾಪಡೆಯನ್ನು ಸ್ವಾರ್ಥಕ್ಕೆ ಬಳಸಿಕೊಂಡಂತೆ ಆಗುತ್ತದೆ. ನಮ್ಮ ದೇಶದಲ್ಲಿ ಇಂತಹ ಪ್ರಸಂಗ ಇದುವರೆಗೆ ಜರುಗಿರಲಿಲ್ಲ ಮತ್ತು ಈಗ ಅದು ಜರುಗಿರುವುದು ಆತಂಕಕಾರಿ ಅಂಶವಾಗಿದೆ. ಪ್ರತಿಧಾಳಿಯು ಹಿಂದೆಂದೂ ನಡೆದಿಲ್ಲದ ಅಪೂರ್ವ ಘಟನೆಯಲ್ಲ. ಆಗಲೂ ಅದು ದೇಶದ ಸೇನಾಪಡೆಯು ನಡೆಸಿದ್ದೇ ವಿನಾ ಯಾರೋ ಒಬ್ಬ ವ್ಯಕ್ತಿಯು ಧೀರನಂತೆ ಮೆರೆಯುವ ಪ್ರಸಂಗವಿರಲಿಲ್ಲ. ೧೯೬೨ರಲ್ಲಿ ನಾವು ಸೋತಿದ್ದೆವು, ೧೯೬೫ ಮತ್ತು ೧೯೭೦-೭೧ರಲ್ಲಿ ಗೆದ್ದಿದ್ದೆವು. ಅದಕ್ಕೆ ಕೇವಲ ಒಬ್ಬ ವ್ಯಕ್ತಿಯನ್ನು ಹೀನಾಯವಾಗಿ ದೂಷಿಸಲೂ ಇಲ್ಲ, ಇಲ್ಲವೆ ಮೆರವಣಿಗೆ ಮಾಡಿ ಪೂಜಿಸಲೂ ಇಲ್ಲ. ಅದಕ್ಕೆ ವ್ಯತಿರಿಕ್ತವಾದ ದುರ್ನಡತೆ ಈ ಬಾರಿ ಪ್ರದರ್ಶಿತಗೊಂಡಿದೆ. ಸೇನಾಪಡೆಯ ಕೀರ್ತಿಯನ್ನು ವೈಯಕ್ತಿಕ ವರ್ಚಸ್ಸೆಂದು ಬಿಂಬಿಸುವುದು ಖಂಡಿತಕ್ಕೂ ಸೇನಾಪಡೆಗೆ ಸಲ್ಲಿಸಬೇಕಾದ ಗೌರವದ ಸಂಕೇತವಾಗುವುದಿಲ್ಲ. ಆ ಕೀರ್ತಿಯು ಯಾವುದಾದರೂ ವ್ಯಕ್ತಿಯ ಪಾಲಿಗೆ ಸೇರುವುದಾದರೆ ಅದಕ್ಕೆ ಮುಂಚಿನ ಪುಲ್ವಾಮಾ ದುರಂತದ ಅಪಕೀರ್ತಿಯನ್ನೂ ಅದೇ ವ್ಯಕ್ತಿ ಹೊರಬೇಕಾಗುತ್ತದೆ.

ಚುನಾವಣೆಗೆ ಸೇನಾಪಡೆಯ ಕೀರ್ತಿಯನ್ನು ತಮ್ಮ ವೈಯಕ್ತಿಕ ಹೆಗ್ಗಳಿಕೆ ಎಂಬಂತೆ ದೇಶದ ಪ್ರಧಾನಿ ಪ್ರಚಾರ ಮಾಡಿಕೊಂಡಿರುವುದು ಅನಪೇಕ್ಷಣೀಯ. ಚುನಾವಣೆಗೆ ಅದನ್ನು ಬಳಸಿಕೊಳ್ಳುವುದಂತೂ ಸರ್ವಾಧಿಕಾರಿಯ ಧೋರಣೆಯಾಗುತ್ತದೆಯೇ ಹೊರತು ಪ್ರಜಾಪ್ರಭುತ್ವದ ಲಕ್ಷಣವಾಗುವುದಿಲ್ಲ. ಸೇನಾಪಡೆಗಳ ವರಿಷ್ಠರು ರಾಜಕೀಯ ಮುತ್ಸದ್ದಿಗಳಿಗೆ ಇದನ್ನು ತಿಳಿಸಿಕೊಡಬೇಕಾದ್ದು ಅಗತ್ಯ. ಪ್ರತಿಧಾಳಿಯು ತೀಟೆಗೆ ತಕ್ಕ ಶಾಸ್ತಿ ಎಂಬುದಷ್ಟೇ ಮುಖ್ಯ. ಅದರಲ್ಲಿ

ಎಷ್ಟು ಮಂದಿಯನ್ನು ಕೊಲ್ಲಲಾಯಿತೆಂದು ಹೇಳುವುದು ಅಪ್ರಕೃತ. ಭಯೋತ್ಪಾದಕರು ಎಷ್ಟು ಮಂದಿಯನ್ನು ಕೊಂದರೆಂದು ನಾವು ಲೆಕ್ಕ ಕೊಡಬಹುದು. ಆದರೆ ಪ್ರತಿಧಾಳಿಯಲ್ಲಿ ಹತರಾದವರ ಸಂಖ್ಯೆಯ ಬಗ್ಗೆ ನಮ್ಮಲ್ಲಿ ಕೆಲಸಕ್ಕೆ ಬಾರದ ಹೇಳಿಕೆಗಳೂ ತೀರಾ ಬಾಲಿಶ; ಧಾಳಿಗೆ ಗುರಿಯಾದವರು ಬೇಕಾದರೆ ಲೆಕ್ಕ ಕೊಡಲಿ, ಹಲವು ದೇಶಗಳವರು ಅದನ್ನು ಸಮಂಜಸವೋ ಅಲ್ಲವೋ ಎಂಬುದನ್ನು ಖಚಿತಪಡಿಸುತ್ತಾರೆ. ನಮ್ಮ ಇಸ್ರೋ ಸಹ ಅದನ್ನು ಪರಿಶೀಲಿಸಿ ಹೇಳಲು ಸಾಧ್ಯ. ಕಡೆಗೆ ಉಳಿಯುವ ಪ್ರಶ್ನೆ ಮೂಲಭೂತವಾದ್ದು : ಹೆದ್ದಾರಿಯಲ್ಲಿ ಸೂಕ್ತ ರಕ್ಷಣೆ ಕೊಡಲು ಅಸಮರ್ಥರಾಗಿ ನಮ್ಮ ಸೈನಿಕರನ್ನು 'ಹುತಾತ್ಮ' ರಾಗಿಸಿದ್ದೇವಲ್ಲ, ಅದಕ್ಕೆ ಕಾರಣರಾದವರು ಯಾರು, ಅವರಿಗೆ ಶಿಕ್ಷೆ ಏನು ಮತ್ತು ಅಂತಹ ಪ್ರಸಂಗ ಇನ್ನೊಮ್ಮೆ ಘಟಿಸದಂತೆ ನೋಡಿಕೊಳ್ಳಲು ಏನು ವ್ಯವಸ್ಥೆ ಮಾಡಿಕೊಳ್ಳುತ್ತೇವೆ?

* * *

ಲೋಕಸಭೆ ಚುನಾವಣೆಗೆ ಮುನ್ನ ಆಳುತ್ತಿರುವ ಪಕ್ಷದ ವಿರುದ್ಧ ಮಹಾಘಟಬಂಧನದ ಪೊಳ್ಳು ಮಾತುಗಳನ್ನಾಡಿದ ತಿಳಿಗೇಡಿ ನಾಯಕರು ಈಗ ಸೊಲ್ಲೆತ್ತುತ್ತಿಲ್ಲ. ಕೊಲ್ಕತ್ತಾಗೆ ಹೋಗಿ ಕೈ ಜೋಡಿಸಿ ಛಾಯಾಚಿತ್ರ ತೆಗೆಸಿಕೊಂಡವರು ಸದ್ಯದಲ್ಲಿ 'ಮಹಾಚಟ್ಟಬಂಧನ'ದ ತಯಾರಿ ನಡೆಸುತ್ತಿದ್ದಾರೆ. ದೆಹಲಿಯಲ್ಲಿ ಆಮ್ ಆದ್ಮಿ ಪಕ್ಷದ ಜೊತೆ ಹೋಗುವುದಿಲ್ಲವೆಂದ ಕಾಂಗ್ರೆಸ್ಸಿನ ಶೀಲಾ ದೀಕ್ಷಿತ್ ಚುನಾವಣೆಗೆ ಮುಂಚೆಯೇ ಭಾಜಪಕ್ಕೆ ಏಳು ಸ್ಥಾನಗಳ ದುರ್ದಾನ ಮಾಡಿ ಮಹತ್ಸಾಧನೆ ಮಾಡಿದವರಂತೆ ಏನೇನೋ ಬಡಬಡಿಸುತ್ತಿದ್ದಾರೆ. ಬೇರೆ ರಾಜ್ಯಗಳಲ್ಲಿಯೂ ಇಂಥದೇ ಚಿತ್ರವಿದೆ. ಕಾಂಗ್ರೆಸ್ಸಿನ ಸ್ವಪ್ರತಿಷ್ಠೆ ಮತ್ತು ದುರಹಂಕಾರ ಭಾಜಪಕ್ಕೆ ವರದಾನವಾಗಿದೆ. ಕಾಂಗ್ರೆಸ್ ಅಧ್ಯಕ್ಷ ಮಹಾಶಯರು ಬೇರೆ ರಾಜ್ಯಗಳಿಗೆ ಓಡಿ ಅಲ್ಲಿಂದ ಲೋಕಸಭೆಗೆ ಚುನಾಯಿತರಾಗುವ ತರಾತುರಿಯಲ್ಲಿದ್ದಾರೆ. ಮುಂದಿನ ಐದು ವರ್ಷಗಳಲ್ಲಿ ನಡೆಯಬಹುದಾದ ಪಾತಕಗಳಿಗೆ ಕಾಂಗ್ರೆಸ್ ಜವಾಬ್ದಾರಿ ಹೊರಬೇಕಾಗುತ್ತದೆ. ಏಕಾಂಗಿಯಾಗಿ ಭಾಜಪವನ್ನೆದುರಿಸಲು ತಮ್ಮ ಪಕ್ಷ ಸಮರ್ಥವಾಗಿದೆಯೆಂದು ಡಂಗೂರ ಹೊಡೆಯುತ್ತಿದೆ. ಭಾಜಪ ನಾಯಕರು ಇಂತಹ ನಾಯಕರನ್ನು ಸಹಜ ವಾಗಿಯೇ ಕೊಂಡಾಡುತ್ತಾರೆ, ಅವರ ದುರಹಂಕಾರದ ಪ್ರಯೋಜನ ಪಡೆದುಕೊಳ್ಳುತ್ತಾರೆ. ಕಾಂಗ್ರೆಸ್ ತನ್ನ ದುರಹಂಕಾರದ ಕೊಳಚೆಯಿಂದ ಎದ್ದುಬರುವುದು ಎಂದು? ಆ ಪಕ್ಷದ ನಾಯಕರು ಎಂತಹ ಗೋಸುಂಬೆ ಗಳಿದ್ದಾರೆ ಎಂದರೆ ವಿಸರ್ಜಿತ ಪಾರ್ಲಿಮೆಂಟಿನಲ್ಲಿ ಕಾಂಗ್ರೆಸ್ ಪ್ರತಿನಿಧಿಗಳಾಗಿದ್ದು ಇಂದು ಭಾಜಪದ ಪ್ರತಿನಿಧಿಗಳಾಗಿ ಚುನಾವಣೆಗೆ ಕಳಂಕ ತರುವಂತಹ ಮಹಾಮಹಿಮರು ! ಪಕ್ಷವು ಅವರಿಗೆ ತಿಳಿಸಿಕೊಟ್ಟಿರುವ ರಾಜಕೀಯ ಸಿದ್ಧಾಂತದ ತಿರುಳು ಅದರಿಂದಲೇ ತಿಳಿಯುತ್ತದೆ. ಲೋಕಸಭೆಯ ಕೆಲವು ಹಿರಿಯ ಕಾಂಗ್ರೆಸ್ ನಾಯಕರು ಅಧಿವೇಶನಗಳ ಸಮಯದಲ್ಲಿ ಹಾಜರಿದ್ದು ಚರ್ಚೆಗಳಲ್ಲಿ ಭಾಗವಹಿಸುವ ಸಂಪ್ರದಾಯ ವನ್ನಿರಿಸಿಕೊಂಡಿಲ್ಲ. ಇಲ್ಲಿ ಲೋಕಸಭೆ ಅಧಿವೇಶನ ನಡೆಯುತ್ತಿದ್ದರೆ, ಅಲ್ಲಿ ಅವರು ಸರ್ವೋಚ್ಚ ನ್ಯಾಯಾಲಯದಲ್ಲಿ ಕಕ್ಷಿದಾರರ ಪರವಾಗಿ ವಾದ ಹೂಡಲು ಹೋಗಿ ದಿನಕ್ಕೆ ಐದಾರು ಲಕ್ಷ ರೂಪಾಯಿ ಗಳನ್ನು ಜೇಬಿಗೆ ತುಂಬಿಕೊಳ್ಳುತ್ತಿರುತ್ತಾರೆ! ನಾಳೆ ಕಾಂಗ್ರೆಸ್ ಗೆದ್ದರೆ ಅವರೇ ಪ್ರಮುಖ ಸಚಿವ ರಾಗುತ್ತಾರೆ. ಇಷ್ಟೇ ಅವರ "ರಾಜಕೀಯ ಸಿದ್ಧಾಂತ." ಈಗಲೂ ವೇಳೆ ಮೀರಿಲ್ಲ. ಹಲವು ರಾಜ್ಯಗಳಲ್ಲಿ ಹೊಂದಾಣಿಕೆ ಮಾಡಿಕೊಂಡು ಚುನಾವಣೆಯನ್ನು ಎದುರಿಸುವುದು ಸೂಕ್ತವೆನಿಸುತ್ತದೆ.

* * *

ಈ ಬಾರಿಯ ಚುನಾವಣೆ ಏಳು ಸುತ್ತಿನದು. ಇಪ್ಪತ್ತು ಸುತ್ತಿನದನ್ನಾಗಿ ಏಕೆ ಮಾಡಲಿಲ್ಲವೋ ತಿಳಿಯದು! ರಕ್ಷಣಾ ದಳಗಳು ಅಷ್ಟೊಂದಿರುವಾಗ ಎರಡು ಸುತ್ತಿನಲ್ಲಿ ಮಾಡಿ ಮುಗಿಸಬಹುದಿತ್ತು. ಆಳುವ ಪಕ್ಷಕ್ಕೆ ಮರುಲೆಕ್ಕಾಚಾರ ಮಾಡಿಕೊಳ್ಳಲು ಅವಕಾಶ ಬೇಕಾದಷ್ಟಿದೆ. ಜಮ್ಮು-ಕಾಶ್ಮೀರ ರಾಜ್ಯದಲ್ಲಿ ಕಾಶ್ಮೀರ ವಿಭಾಗದ ಒಂದು ಕ್ಷೇತ್ರದಲ್ಲಿ ಎರಡು ಸುತ್ತಿನ ಚುನಾವಣೆ ನಡೆಯುತ್ತದೆಂಬುದು ಈ ಬಾರಿಯ ವಿಶೇಷ ಪ್ರಹಸನ. ಕಾಶ್ಮೀರದಲ್ಲಿ ರಕ್ಷಣಾ ದಳಗಳಿಗೆ ಕೊರತೆಯೆ? ಒಂದೇ ಸುತ್ತಿನಲ್ಲಿ ಇಡೀ ಕಾಶ್ಮೀರದ ಚುನಾವಣೆ ನಡೆಸಬೇಕಿತ್ತು. ಇತ್ತೀಚೆಗಷ್ಟೆ ಹತ್ತುಸಾವಿರ ಸೈನಿಕರ ದಳಗಳನ್ನು ಕಾಶ್ಮೀರಕ್ಕೆ ಕಳಿಸಲಾಗಿದೆ ಅಲ್ಲವೆ? ಜೊತೆಗೆ ಜಮ್ಮು-ಕಾಶ್ಮೀರದ ವಿಧಾನಸಭೆಯ ಚುನಾವಣೆಯನ್ನೂ ನಡೆಸಬಹುದಿತ್ತು. ಆದರೆ ಅದನ್ನು ಅನಿರ್ದಿಷ್ಟವಾಗಿ ಮುಂದೂಡಲಾಗಿದೆ. ಕಾಶ್ಮೀರದ ಬಗೆಗಿನ ನೀತಿಯು ಹಿಂಸೆ-ಪ್ರತಿಹಿಂಸೆ ಗಳಿಗೆ ಎಡೆಮಾಡಿಕೊಡದಿರಲಿ ಎಂದಷ್ಟೇ ನಾವು ಆಶಿಸಬಹುದು.

* * *

ನಮ್ಮ ರಾಜ್ಯದಲ್ಲಿ ಪ್ರೌಢಶಾಲಾ ಶಿಕ್ಷಣ ಮತ್ತು ಐದನೆಯ ತರಗತಿಯ ನಂತರದ ಪಠ್ಯಪುಸ್ತಕಗಳೂ ಅಧ್ವಾನದ ಎಲ್ಲ ಸೂಚನೆಗಳನ್ನೂ ನೀಡುತ್ತಿವೆ. ಒಂದು ದೇಶ – ಒಂದು ಭಾಷೆ – ಒಂದು ಮಾದರಿಯ ಶಿಕ್ಷಣವೆಂಬ ನಿಕೃಷ್ಟ ನೀತಿಯು ನಮ್ಮ ರಾಜ್ಯವನ್ನು ತನ್ನೆಲ್ಲ ಸಾಂಸ್ಕೃತಿಕ ಮತ್ತು ಐಸಿಹಾಸಿಕ ಲಕ್ಷಣಗಳನ್ನೂ ಕಳೆದುಕೊಳ್ಳುವಂತೆ ಮಾಡಲಿದೆ. ಕರ್ನಾಟಕದ ಇತಿಹಾಸದ ಬಗ್ಗೆ ಒಂದಕ್ಷರವೂ ಇಲ್ಲದ ಪಠ್ಯಪುಸ್ತಕಗಳು ನಮ್ಮ ವಿದ್ಯಾರ್ಥಿ ಸಮೂಹವನ್ನು ರಾಜ್ಯದಿಂದ ಪರಕೀಯರನ್ನಾಗಿಸುತ್ತದೆ. ಎನ್‌ಸಿಇಆರ್‌ಟಿಯವೇ ಎಲ್ಲಾ ಪಠ್ಯಪುಸ್ತಕಗಳೆಂಬ ಅನಿಷ್ಟವಾದ ನೀತಿಯು ಕರ್ನಾಟಕದ ಶೈಕ್ಷಣಿಕ ಕ್ಷೇತ್ರದಲ್ಲಿ ಕರ್ನಾಟಕದ ಪರಿಣತರಿಗೆ ಯಾವ ಕರ್ತವ್ಯವೂ ಇಲ್ಲವಾಗಿಸುತ್ತದೆ. ಇರುವುದೆಲ್ಲಾ ಕೇವಲ ದೆಹಲಿ ಯಜಮಾನರು ಬರೆದ ಅನರ್ಘ್ಯ ಪುಸ್ತಕಗಳ ಅನುವಾದದ ಕೆಲಸ. ನಮ್ಮ ಶಿಕ್ಷಣ ಮಂತ್ರಿಗಳು ಇಂತಹ ನೀತಿಗೆ ಪುರಸ್ಕಾರ ನೀಡಿರುವುದು ನಾಚಿಕೆಗೇಡಿನ ಸಂಗತಿ. ಚುನಾವಣೆ ನಡೆಯಲಿದೆಯೆಂಬ ಕಾರಣಕ್ಕೆ ಯಾವ ಮಂತ್ರಿ ಯಾಗಲಿ, ಅಧಿಕಾರಿಯಾಗಲಿ ಈ ದುರಂತದ ಬಗ್ಗೆ ಯೋಚಿಸುತ್ತಿಲ್ಲವೇನೋ! ಬರುವ ವರ್ಷದಲ್ಲಿ ಈ ಅನುವಾದಿತ ರದ್ದಿಯನ್ನು ಬೋಧಿಸುವುದಿಲ್ಲ ಎಂದು ಶಿಕ್ಷಕ ಸಮುದಾಯವು ಈಗಲೇ ಹೇಳಿಬಿಡಬೇಕು. ಶಿಕ್ಷಕರ ಸಂಘಗಳು ಇಂತಹ ದುರಂತವನ್ನು ತಡೆಯಲು ಮಧ್ಯಪ್ರವೇಶ ಮಾಡುವ ಚಿಂತನೆ ನಡೆಸುವುದು ಯಾವಾಗ? ಮುಖ್ಯಮಂತ್ರಿಗಳೂ ನಡೆಯುತ್ತಿರುವ ಕೀಳು ಹೇರಿಕೆಯನ್ನು ವಿರೋಧಿಸಿ ಕೇಂದ್ರ ಸರ್ಕಾರಕ್ಕೆ ನಮ್ಮ ರಾಜ್ಯದ ಸ್ವಾಯತ್ತತೆಯ ಪರಿಚಯ ಮಾಡಿಕೊಡುವ ಜವಾಬ್ದಾರಿಯನ್ನು ಕೂಡಲೆ ನಿಭಾಯಿಸಬೇಕು. ಶಿಕ್ಷಣ ಸಚಿವಾಲಯದ ಉನ್ನತ ಅಧಿಕಾರಿಗಳು ಸಹ ರಾಜ್ಯದ ಪರವಾಗಿ ಕೇಂದ್ರಕ್ಕೆ ಅಸಮ್ಮತಿ ಸೂಚಿಸುವುದು ಸೂಕ್ತ ಮತ್ತು ಸಕಾಲಿಕ.



## ಕನ್ನಡ ಲಿಪಿ

ಶ್ರೀ ಸಿ. ಚಿಕ್ಕತಿಮ್ಮಯ್ಯ ಹಂದನಕೇರಿ ಅವರು ಕನ್ನಡ ಲಿಪಿಯ ಬಗ್ಗೆ ಮುಖ್ಯವಾದ ಮೌಲಿಕ ಪ್ರಶ್ನೆ ಎತ್ತಿದ್ದಾರೆ (ಹೊಸತು, ಮಾರ್ಚ್ ೨೦೧೯). ಕನ್ನಡ ಲಿಪಿಯ ಸರಳೀಕರಣವನ್ನು ಕುರಿತು ಚರ್ಚೆಗಳು ನಡೆಯುತ್ತಿವೆ; ಆದರೆ ಕೆಲವು ವಿದ್ವಾಂಸರು ತಮ್ಮ ದೃಷ್ಟಿಯ ನೇರಕ್ಕೆ ಲಿಪಿಯನ್ನು ಬದಲಾಯಿಸುವ ತೀರ್ಮಾನ ಕೈಗೊಂಡರೆ ಅಧಿಕೃತವಾಗಿ ಲಿಪಿಯು ಬದಲಾಗುವುದಿಲ್ಲ. 'ಹೊಸತು' ಬಳಸುವುದು ಅಧಿಕೃತ ಲಿಪಿಯನ್ನೇ. ಕಣ್ಣುತಪ್ಪಿ ಫೆಬ್ರವರಿ ೨೦೧೯ರ ಸಂಚಿಕೆಯಲ್ಲಿ ತಥಾಕಥಿತ ಸರಳೀಕೃತ ಲಿಪಿಯಲ್ಲಿ ಒಂದು ಲೇಖನವು ಅಚ್ಚಾಗಿದೆ. ಲೇಖಕರು ದಯಮಾಡಿ ಅಧಿಕೃತ ಲಿಪಿಯನ್ನು ಬಳಸಿಯೇ ಲೇಖನಗಳನ್ನು ಕಳಿಸಬೇಕೆಂದು ವಿನಂತಿ. ಲಿಪಿಯನ್ನು ಒಂದೊಂದು ಶಾಲೆಯಲ್ಲಿ ಒಂದೊಂದು ರೀತಿ ಕಲಿಸುವುದರಿಂದ ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತದೆಂಬುದನ್ನು ನಾವು ಗಮನಿಸಬೇಕು.

*– ಸಂ*




## ಸಮಾನತೆ ಯಾವುದು?

ಮಹಿಳೆಯರು ಶಬರಿಮಲೆ ದೇವಸ್ಥಾನ ಪ್ರವೇಶ ಮಾಡಬೇಕೋ ಬೇಡವೋ ಅನ್ನೋ ಚರ್ಚೆ ಬಹಳವಾಗಿ ನಡೀತಿದೆ. ಒಂದು ಸಂಪ್ರದಾಯವಾದಿ ಬ್ರಾಹ್ಮಣ ಕುಟುಂಬದ ಹೆಣ್ಣಾಗಿ ನಾನು ಈ ಘಟನೆಯನ್ನು ಬೇರೆ ರೀತಿಯಲ್ಲಿ ವಿಮರ್ಶೆ ಮಾಡ್ಲಿಕ್ಕೆ ಇಚ್ಛೆಪಡ್ತೀನಿ ಮತ್ತು ಸಮಾನತೆ, ಮಹಿಳಾ ಹಕ್ಕುಗಳ ಬಗ್ಗೆ ನನ್ನದೇ ಆದ ಕೆಲವು ನಿಲುವುಗಳನ್ನು ಹೇಳ್ಲಿಕ್ಕೆ ಇಷ್ಟಪಡ್ತೀನಿ.

ಬ್ರಾಹ್ಮಣರನ್ನೂ ಒಳಗೊಂಡಂತೆ ಎಲ್ಲ ಜಾತಿಯ ಮಹಿಳೆಯರಿಗೆ ಈ ದೇವರು ಅನ್ನುವವನು ನೇರವಾಗಿ ಮುಖಾಮುಖಿಯಾಗದ, ಮಧ್ಯಸ್ಥಿಕೆದಾರರ ಮುಖಾಂತರ ಸಂವಹನಕ್ಕೆ ಸಿಗುವ ಅಸ್ತಿತ್ವ.

ಇನ್ನೊಂದು, ಈ ಪೂಜಾ ವಿಧಿವಿಧಾನ ಅನುಷ್ಠಾನ ಮಹಿಳೆಯರ ಪಾಲಿನ ಸಂಕಷ್ಟದ ದಿನಗಳೆ. ಮನೆಯಲ್ಲಿ ವೈದಿಕವೋ, ಪಾರಾಯಣವೋ ಹೋಮವೋ ಅದೇ ಅಂದ್ರೆ, ಅದು ಹೆಣ್ಣುಮಕ್ಕಳ ಮುಟ್ಟಿನ ದಿನದ ಸಮೀಪವಿದ್ರೆ ಅವ್ರು ಮುಟ್ಟನ್ನು ಮುಂದೆ ಹಾಕುವ ಮಾತ್ರೆಗಳನ್ನು ನುಂಗಿಕೊಂಡು ಅದರಲ್ಲಿ ಭಾಗವಹಿಸಬೇಕು. ಅದು ಅವರ ಮುಂದಿನ ದಿನಮಾನಗಳಲ್ಲಿ ಆರೋಗ್ಯದ ಮೇಲೆ ಗಂಭೀರ ಪರಿಣಾಮ ಬೀರುತ್ತೆ.

ಇನ್ನು ಮಕ್ಕಳಿಲ್ಲದ ಹೆಣ್ಣುಮಕ್ಕಳ ಪಾಡಂತೂ ಇನ್ನೂ ಘೋರ. ಕೆಲವು ಕುಟುಂಬಗಳಲ್ಲಿ ಅವರು ಧಾರ್ಮಿಕ ಕಾರ್ಯದಲ್ಲಿ ಭಾಗವಹಿಸುವಂತಿಲ್ಲ. ಮಕ್ಕಳನ್ನು ಪಡೆಯೋಕಾಗಿ ಹರಕೆ, ಧರ್ಮಕ್ಷೇತ್ರಗಳ ಭೇಟಿ, ಉಪವಾಸ, ವ್ರತ ಮಾಡಬೇಕಾಗುತ್ತೆ. ಇದೂ ಒಂದು ರೀತಿ ಶೋಷಣೆಯೇ. ಶಬರಿಮಲೆಯ ೪೮ ದಿನಗಳ ವ್ರತ ಮತ್ತೊಂದು ಹೊರಲಾರದ ಹೊರೆಯೇ ಸರಿ.

ಎಷ್ಟೋ ಮನೆಗಳಲ್ಲಿ ಗಂಡನಿಲ್ಲದ ಮಹಿಳೆ ಮಕ್ಕಳನ್ನು ಏಕಾಂಗಿಯಾಗಿ ಸ್ವಾವಲಂಬನೆಯಿಂದ ದುಡಿದು ದೊಡ್ಡವರನ್ನಾಗಿ ಮಾಡಿರ್ತಾಳೆ. ಆದರೆ ಅವಳ ಮಕ್ಕಳ ಶುಭಕಾರ್ಯಗಳಿಗೆ ಅವಳು ಹಸೆಮಣೆಯಲ್ಲಿ ಕೂರುವಂತಿಲ್ಲ. ಬರೀ ಹೆಣ್ಣು ಮಕ್ಕಳಿರೋ ತಂದೆ ತಾಯಿಯರ ಮನೆಯಲ್ಲಿ ಅವರ ಅಂತ್ಯಸಂಸ್ಕಾರವನ್ನು ಹೆಣ್ಣುಮಕ್ಕಳು ಮಾಡುವಂತಿಲ್ಲ.

ಕೊನೆಯದಾಗಿ ಹೇಳಬೇಕಂದ್ರೆ ನಮಗೆ ಸಮಾನತೆ ಬೇಕಾಗಿರೋದು ಮಧ್ಯವರ್ತಿ ಇಲ್ಲದೆ ದೇವರನ್ನು ಆರಾಧಿಸುವ ಅವಕಾಶ. ಅಂದ್ರೆ ಮನೆ, ದೇವಸ್ಥಾನಗಳಲ್ಲಿ ನಾವು ಮಾಡಬೇಕಾದ ಪೂಜೆಗೆ ನಾವೇ ಪುರೋಹಿತರಾಗುವ ಅವಕಾಶ. ನನಗೆ ಬೇಕೆನಿಸಿದಾಗ ಬೇಕಾದ ರೀತಿಯಲ್ಲಿ ದೇವರನ್ನು ಆರಾಧಿಸುವ ಅವಕಾಶ. ಇವೆಲ್ಲಾ ಸಿಗೋದಾದ್ರೆ ಮಾತ್ರ ಅದು ಸಮಾನತೆ. ಅದು ಸಿಗೋದಿಲ್ಲಾ ಅಂತ ಆದ್ರೆ ಆ ಅಪದ್ಧದ ದೇವ್ರು, ಧರ್ಮಾಚರಣೆಗೆ ಧರ್ಮಕ್ಷೇತ್ರ ಪ್ರವೇಶವನ್ನು ಯಾವುದೂ ಬೇಡವೆಂದು ನಾವೇ ಅದನ್ನು ಧಿಕ್ಕರಿಸೋಣ. ಅದು ನಿಜವಾದ ಸ್ವಾಭಿಮಾನ, ಸಮಾನತೆ.

"ಎಲ್ಲಿ ನಿನಗೆ ಗೌರವ ಇರುವುದಿಲ್ಲವೋ ಆ ಸ್ಥಳದಲ್ಲಿ ನಿನ್ನ ಚಪ್ಪಲಿಯನ್ನೂ ಬಿಡಬೇಡ."

– ಅಂಬೇಡ್ಕರ್

*ಕುಂಚೆಬೈಲು ಅಂಚೆ* ***ಭಾಗ್ಯ ಹಾಗಲಗಂಚಿ***




## ಮನುಸ್ಮೃತಿಯ ಬಗ್ಗೆ ಅನಿಸಿಕೆ

ಮನುಸ್ಮೃತಿ ಗ್ರಂಥದ ವರ್ಣನೆ, ಇತಿಹಾಸ ಧರ್ಮದ ಬಗ್ಗೆ ವಿಸ್ತಾರವಾಗಿ ಮೂರು ಸಂಚಿಕೆಯಲ್ಲಿ ಮೂಡಿರುವುದು ಸಾಮಾನ್ಯರಿಗೂ ಅರಿವಾಗಿದ್ದು, ಅರ್ಥಗರ್ಭಿತವಾಗಿ ಲೇಖಕರು ಓದುಗರಿಗೆ ರಸದೂಟ ನೀಡಿರುವುದು ಸ್ವಾಗತಾರ್ಹ.

ಮನುಸ್ಮೃತಿ ಧರ್ಮಸೂತ್ರ, ಸಂಪ್ರದಾಯ ಆಚರಣೆ ನಮ್ಮ ಸನಿಹದಲ್ಲಿ ಅರಿವಿಲ್ಲದೆ ನಡೆದಿರುವುದು ಅದ್ಭುತದ ಸೋಜಿಗವಾಗಿದೆ. ವೇದ ಶಾಸ್ತ್ರ, ಪುರಾಣ, ಕೀರ್ತನೆ, ಜನಪದ ಕಲೆ, ಸಾಹಿತ್ಯ, ಭಗವದ್ಗೀತೆ, ಇತಿಹಾಸದಿಂದ ರಚನೆಯಾದ ಸಂಪ್ರದಾಯ ಆಚರಣೆ, ನಡೆ, ಮನುಸ್ಮೃತಿ ಧರ್ಮವು ಅಡಕವಾಗಿದ್ದು ಹಿಂದೂಗಳಿಗೆ ಮಾರಕಾಸ್ತ್ರ. ಮನುಸ್ಮೃತಿಯೂ ವ್ಯಕ್ತಿ, ಕುಟುಂಬ, ಸಮಾಜ, ವಿವಿಧ ವರ್ಗಗಳ ಮೇಲೆ ಪ್ರಭಾವ ಬೀರಿರುವುದು ಲೇಖನಿಯಿಂದ ಅರ್ಥ ವಾಯಿತು. ಮನುಸ್ಮೃತಿ ಧರ್ಮವು ನಿಖರತೆ, ಪ್ರಮಾಣತೆ, ಸತ್ಯನಿಷ್ಠೆ ಇಲ್ಲದಿರುವುದು ಸಮಾಜದ ಮೇಲೆ ಪರಿಣಾಮ ಬೀರುವುದು ಖಂಡಿತ. ಇದರ ಪೊಳ್ಳು ಧರ್ಮ ಸೂತ್ರಗಳು ಡಾಂಭಿಕವಾಗಿ ಮೂಢ ಸಂಪ್ರದಾಯ ಆಚರಣೆ ನಡೆದಿರುವುದರಿಂದ ವ್ಯಕ್ತಿ, ಕುಟುಂಬ, ಸಮಾಜ ವರ್ಗಗಳಲ್ಲಿ ಸಮಾನತೆ, ಸೌಹಾರ್ದ, ಸಹಕಾರ ಇಲ್ಲದ್ದರಿಂದ ಹಿಂದೂಗಳ ಸಂವಿಧಾನ ಆಗಲಾರದು. ಮನುಸ್ಮೃತಿಯೂ ಮಾನವನ ವರ್ಣಜಾತಿ, ಪ್ರಾಣಿಸಂಕುಲ, ನೈಸರ್ಗಿಕ ಪರಿಸರ ಆಧಾರದ ಮೇಲೆ ರಚನೆಗೊಂಡಿರುವುದು ಲೇಖಕರಿಂದ ಅರಿವಾಯಿತು. ಮನುವಿನ ಗುಣಲಕ್ಷಣ ಕೆಲವೊಮ್ಮೆ ಉದಾರಿಭಾವ ಮತ್ತು ಕಠಿಣ ನಿಲುವನ್ನು ಹೊಂದಿದೆ. ಲಘು ಹಾಗೂ ಮಹಾಭಾವನೆ ಗುಣ ಗಳನ್ನೂ ಹೊಂದಿವೆ. ಸಂದರ್ಭ, ಸನ್ನಿವೇಶ ತಕ್ಕಂತೆ ತಮಗಿಷ್ಟದಂತೆ ಪ್ರಕೃತಿ ಭಾವನೆಯೊಂದಿದೆ. ತಪ್ಪೊಪ್ಪುಗಳ ಪರಿಹಾರ ಮಾರ್ಗ ಸೂಚನೆಗಳಿವೆ. ಜಾತಿವರ್ಣಭೇದದ ಸಮಾನತೆ ಇಲ್ಲದಿರುವುದು ಸಂಚಲಗುಣ ಸ್ವಭಾವವಿದೆ. ಸ್ಥಿರತೆ, ನಿಖರತೆ ಪ್ರಾಮಾಣಿಕ ಲಕ್ಷಣಗಳು ಇಲ್ಲದ್ದರಿಂದ ಹಿಂದೂಗಳ ಸಂವಿಧಾನವಾಗಲು ಅನರ್ಹತೆ ಇದೆ. ಮನುಸ್ಮೃತಿ ಧರ್ಮವು ಮಾನವನನ್ನು ದಿಕ್ಕುತಪ್ಪಿಸುವ ಸಾಧನವಾಗಿ ಸಮಾಜದಲ್ಲಿ ಕೋಲಾಹಲವಾಗಿ ಪರಿಣಾಮ ಬೀರಿದೆ. ಇದರಿಂದ ಆರ್ಥಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ ತಾರತಮ್ಯ ಕಾರ್ಯಚಟುವಟಿಕೆ ಸಮತೋಲನೆ ಇಲ್ಲದ ವ್ಯಕ್ತಿ, ಕುಟುಂಬ, ಸಮಾಜದ ವಿವಿಧ ವರ್ಗಗಳಲ್ಲಿ ನರಳುತ್ತದೆ. ಇದರಿಂದ ಭ್ರಾತೃತ್ವ, ಸೌಹಾರ್ದ, ಸಹಕಾರ ಶಾಂತಿ ನೆಲೆಗೊಳ್ಳಲು ಸಾಧ್ಯವಿಲ್ಲವೆಂದು ಲೇಖನಿಯಿಂದ ಭಾಸವಾಯಿತು.

ಮನುಸ್ಮೃತಿ ಧರ್ಮ ಆಯಾಯ ಸಂಪ್ರದಾಯ ಆಚರಣೆಯ ಜಾತಿಗಳ ಸಂಘರ್ಷ. ಒಂದು ವರ್ಗ ಪಂಥದ ಮೇಲೆತ್ತುವ ಪಿತೂರಿ, ಸಮಾಜ ಸುಧಾರಕರು, ಜಾತ್ಯತೀತರು, ಕ್ರಾಂತಿಕಾರರು ಮತ್ತು ಸಾಹಿತಿ ಲೇಖಕರು ಇವರಿಗೆಲ್ಲಾ ಮಾರಕಾಸ್ತ್ರವಾಗಿ ಇರುವುದು ದುರದೃಷ್ಟ. ದೀನದಲಿತರು, ಬಡವರು ಇದರಿಂದ ಮೇಲೇಳಲು ಸಾಧ್ಯವಿಲ್ಲ. ಆದ್ದರಿಂದ ಡಾ॥ ಬಿ. ಆರ್. ಅಂಬೇಡ್ಕರ್ ಮನನೊಂದು "ನಾನು ಹುಟ್ಟಿದ್ದು ಹಿಂದೂವಾಗಿ ಸಾಯುವಾಗ ಬೌದ್ಧಧರ್ಮಿಯಾಗಿ" ಎಂಬ ಮಾತು ಹೇಳಿ ಅಮರ ವಾಗಿದ್ದಾರೆ. ಅವರು ರಚಿಸಿದ ಸಂವಿಧಾನ ಮಾರ್ಗಸೂಚಿಗಳ ಸನ್ನಿವೇಶ ಪರಿಸ್ಥಿತಿಗೆ ತಕ್ಕಂತೆ ಬದಲಿಸಬಹುದು. ಆದರೆ ಮನುಸ್ಮೃತಿಯ ಲಕ್ಷಣಗಳು ನಿಖರತೆ, ಸಮಾನತೆ ಇಲ್ಲದ್ದರಿಂದ ಸಂವಿಧಾನ ರಚನೆಯಾಗದು, ಹಿಂದೂಗಳಲ್ಲಿ ಧರ್ಮ ಸಮಾನತೆ ಬೀಜಬಿತ್ತಿ ಸಮಾನತೆಯ ಫಲಶ್ರುತಿ ಪಡೆಯಲು ಡಾ॥ ಅಂಬೇಡ್ಕರ್‌ರ ಆಶಯ. ಇದನ್ನು ಈಡೇರಿಸಲು ಸಮಾಜ ಸುಧಾರಕರು, ಲೇಖಕರು, ಸಾಹಿತಿ ಕಲೆಗಾರರು, ಕ್ರಾಂತಿಯ ಚಳುವಳಿಗಾರರು ಕಂಕಣಬದ್ಧ ರಾಗಿದ್ದಾರೆ. ಮಹಾತ್ಮ ಗಾಂಧಿಯ ಅಹಿಂಸೆ ತತ್ವ, ಚಿಂತನೆ ಹೋರಾಟದಿಂದ ಹಿಂದೂಗಳಿಗೆ ಅಂಟದ ಮನುಸ್ಮೃತಿ ಧರ್ಮಜಾಡ್ಯ ಹಂತಹಂತವಾಗಿ ತೊಲಗಿಸಬಹುದೆಂದು ಓದುಗರ ಅನಿಸಿಕೆ.

*ಚೌಡಾಪುರ, ಕೂಡ್ಲಿಗಿ* ***ಮರಿದೇವರ ಸಿದ್ದಪ್ಪ ಮೇಷ್ಟ್ರು***




# ಮನುಸ್ಮೃತಿಯ ಪರಿಚಯ – ೪

ಸ್ತ್ರೀಗೆ ಆಪದ್ಧರ್ಮಗಳನ್ನು ಹೇಳುವಂತೆ ಮನು ಯುಗಧರ್ಮಗಳನ್ನೂ ಪ್ರಸ್ತಾಪಿಸುತ್ತಾನೆ. ಅವು ಸ್ತ್ರೀ-ಪುರುಷರಿಬ್ಬರಿಗೂ ಅನ್ವಯವಾಗುವಂಥವು. ಯುಗಗಳು ನಾಲ್ಕೆಂದು ಪ್ರಸಿದ್ಧವಾಗಿವೆ : ಕೃತ, ತ್ರೇತಾ, ದ್ವಾಪರ ಮತ್ತು ಕಲಿ. ಸಾಮಾನ್ಯತಃ ಈ ಯುಗಗಳಲ್ಲಿ ಧರ್ಮಾಚರಣೆಯು ಛಿನ್ನವೆನ್ನುವ ಪರಂಪರೆ ಇದೆ. ಅಂದರೆ, ಮೌಲಿಕತ್ವದಲ್ಲಿ ಅದು ಕ್ಷೀಣಿಸುತ್ತಾ ಹೋಗುತ್ತದೆ. ಇದನ್ನು ಕುರಿತಂತೆ ಮನು ಅಷ್ಟೊಂದು ಗಡುಸಾದ ನಿಲುವನ್ನು ತಾಳುವುದಿಲ್ಲ. ರಾಜನ ಕರ್ತವ್ಯನಿಷ್ಠೆಯನ್ನು ಅವಲಂಬಿಸಿ ಯುಗಭೇದ ಹಾಗೂ ಕರ್ಮಭೇದ ಉಂಟಾಗುತ್ತದೆಂಬುದು ಸ್ವೀಕೃತ ಸೂತ್ರ. ಆ ಅರ್ಥದಲ್ಲಿ ಅವನು ಯುಗ ನಿರ್ಮಾತೃ ಎನಿಸಿಕೊಳ್ಳುತ್ತಾನೆ. ಅವನ ವಿಚಕ್ಷಣೆಯಲ್ಲಿನ ವ್ಯತ್ಯಾಸದಿಂದಾಗಿ ಕೃತವು ಕಲಿಯ ಲಕ್ಷಣಗಳನ್ನು ಇಲ್ಲವೇ ಕಲಿಯು ಕೃತದ ಲಕ್ಷಣಗಳನ್ನು ಬೆಳೆಸಿಕೊಳ್ಳಲು ಸಾಧ್ಯ. ಜನರಿಗೆ ಕೆಡುಕು ಉಂಟುಮಾಡುವಂತಹ ಸಂದರ್ಭವನ್ನು ಉಂಟುಮಾಡುವಂತಹ ಧರ್ಮವಾದರೆ ಅದನ್ನು ರಾಜನು ತ್ಯಜಿಸಬೇಕೆಂದು ಮನು ಉದಾರತ್ವದ ಛಾಯೆಯನ್ನು ಪ್ರದರ್ಶಿಸುತ್ತಾನೆ : ಅಸ್ವರ್ಗ್ಯಂ ಲೋಕವಿದ್ವಿಷ್ಟಂ ಧರ್ಮಮಪ್ಯಾಚರೇನ್ನ ತು. ಒಂದೆಡೆ ಹೇಳಿದ್ದನ್ನು ಮತ್ತೊಂದೆಡೆ ವಿರೋಧಿಸುವಂತಹ ಸಂದರ್ಭಗಳೂ ಮನುವಿನಲ್ಲಿ ಉಂಟು : ನಿಯೋಗ ಪದ್ಧತಿಯಡಿ ವಿಧವೆಯಲ್ಲಿ ಮೈದುನನು ಸಂತಾನ ಪಡೆಯಬಹುದೆಂಬ ವಿಧಿ ಇದೆ (೯.೫೯); ಆದರೆ ಪರಪುರುಷನಿಂದ ಅದು ಕೂಡದೆಂದು ಸಹ ಹೇಳಲಾಗಿದೆ (೯.೬೪).

ಮನುಸ್ಮೃತಿಯು ಐದನೆಯ ಅಧ್ಯಾಯದಲ್ಲಿ ಸ್ತ್ರೀಧರ್ಮವನ್ನು ಕುರಿತು ವ್ಯಾಪಕವಾಗಿ ಕಟ್ಟಳೆಗಳನ್ನು ಪಟ್ಟಿ ಮಾಡಿರುವುದನ್ನು ನೋಡಿದ್ದೇವೆ ಮತ್ತು ಅದರ ಮುಂದುವರಿದ ಭಾಗದಂತಿರುವ ಒಂಭತ್ತನೆಯ ಅಧ್ಯಾಯದ ನಿರೂಪಣೆಗಳನ್ನೂ ನೋಡಿದ್ದೇವೆ. ಮುಂದೆ ಆರನೆಯ ಅಧ್ಯಾಯಕ್ಕೆ ಹಿಂದಿರುಗಿದರೆ ಅಲ್ಲಿ ವಾನಪ್ರಸ್ಥ ಧರ್ಮದ ಪ್ರಸ್ತಾಪ ಬರುತ್ತದೆ. ಅದು ದ್ವಿಜರಿಗೆ ಮಾತ್ರ ಅನ್ವಯವಾಗುವಂಥದೆಂದು ಬೇರೆ ಹೇಳಬೇಕಾಗಿಲ್ಲ. ವಾನಪ್ರಸ್ಥ ಯಾವಾಗ, ಹೇಗೆ, ಆಚರಣೆಗಳೇನು, ನಂತರ ಸಂನ್ಯಾಸವು ಎಂತು, ಎಂಬ ವಿಚಾರಗಳು ಇಲ್ಲಿ ಬರುತ್ತವೆ. ವಿಶೇಷವೆಂದರೆ ಸಂನ್ಯಾಸಿಗಳಲ್ಲೂ ವಿಂಗಡಣೆ ಇದೆ ಎಂಬುದು. "ಯಾರ ಸಹಾಯವನ್ನೂ ಅಪೇಕ್ಷಿಸದೆ ಏಕಾಕಿಯಾಗಿ ಸಂಚರಿಸುತ್ತಾ ಮೋಕ್ಷ ಸಾಧನೆಗೆ ತೊಡಗುವುದು" ಸಂನ್ಯಾಸದ ಕ್ರಮ (೬.೪೨). ಅವನು (ಇಲ್ಲಿ 'ಅವಳ' ಪ್ರಸ್ತಾಪವಿಲ್ಲ) "ಜೀವನ್ಮರಣಗಳ ಚಿಂತೆಯಲ್ಲಿ ಮುಳುಗದೆ, ಯಾವ ಬಯಕೆಯೂ ಇಲ್ಲದೆ, ಯಜಮಾನನ ಅಪ್ಪಣೆಗಾಗಿ ಕಾಯುತ್ತಲೇ ಇರುವ ಸೇವಕನಂತೆ ಕಾಲನ ಅಪ್ಪಣೆಯನ್ನು ಎದುರುನೋಡುತ್ತಿರಬೇಕು (೬.೪೫ : ಕಾಲಮೇವ ಪ್ರತೀಕ್ಷೇತ ನಿರ್ದೇಶಂ ಭೃತಕೋ ಯಥಾ)."

ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸ, ಈ ನಾಲ್ಕೂ ಆಶ್ರಮಗಳಲ್ಲಿ ದ್ವಿಜರು ಅನುಸರಿಸಬೇಕಾದ ಧರ್ಮದಲ್ಲಿ ಹತ್ತು ಲಕ್ಷಣಗಳನ್ನು ಮನು ಗುರುತಿಸಿದ್ದಾನೆ : ಸಂತೋಷ, ಕ್ಷಮೆ, ಆತ್ಮನಿಯಂತ್ರಣ, ಕಳ್ಳತನ ಮಾಡದಿರುವುದು, ದೇಹಶುದ್ಧಿ, ಇಂದ್ರಿಯನಿಗ್ರಹ, ಶಾಸ್ತ್ರಚಿಂತನೆ, ಸತ್ಯ, ಶಾಂತಸ್ವಭಾವ ಮತ್ತು ವಿದ್ಯೆಯಲ್ಲಿ ತೊಡಗಿರುವಿಕೆ (೬.೯೨).

**ಜಿ. ರಾಮಕೃಷ್ಣ**

ನಾಲ್ಕು ವರ್ಣಗಳ ವ್ಯವಸ್ಥೆಯನ್ನು ಪುನರುಚ್ಚರಿಸಿದರೂ ಸಹ ಮನುಸ್ಮೃತಿಯ ಏಳು ಮತ್ತು ಎಂಟನೆಯ ಅಧ್ಯಾಯಗಳು ಸ್ವಲ್ಪಮಟ್ಟಿಗಾದರೂ ಅದನ್ನು ಸ್ವಲ್ಪ ಗೌಣವಾಗಿಸಿ ರಾಜಧರ್ಮ ಮತ್ತು ನ್ಯಾಯ ವಿತರಣೆ ಎಂಬೆರಡು ವಿಷಯಗಳನ್ನು ಕೈಗೆತ್ತಿಕೊಳ್ಳುತ್ತವೆ. ಈ ಎರಡು ಅಧ್ಯಾಯಗಳಿಂದಾಗಿ ಕೆಲವರು ಮನುಸ್ಮೃತಿಯನ್ನು ಭಾರತದ ಸಂವಿಧಾನ ಎಂಬ ಅತಿಶಯೋಕ್ತಿಯ ಮಾತನಾಡುತ್ತಾರೆ. ಮಹಾಭಾರತದ ಶಾಂತಿಪರ್ವ ಮತ್ತು ಕೌಟಿಲ್ಯನ

ಅರ್ಥಶಾಸ್ತ್ರ ಸಹ ಈ ವಿಷಯಗಳನ್ನು ವಿಸ್ತಾರವಾಗಿ ಪ್ರತಿಪಾದಿಸಿವೆ. ಅವು ಹೇಳಿದ ಐತಿಹ್ಯವನ್ನು ಮನು ವೈಭವೀಕರಿಸುತ್ತಾನೆ. ಉದಾಹರಣೆಗೆ ರಾಜನಲ್ಲಿ ಇಂದ್ರ, ವಾಯು, ಸೂರ್ಯ, ಅಗ್ನಿ, ವರುಣ, ಚಂದ್ರ, ಕುಬೇರ, ಇವರೆಲ್ಲರ ಸತ್ವಾಂಶಗಳು ಸಮ್ಮಿಳಿತವಾಗಿರುತ್ತವಂತೆ (೭.೪). ರಾಜನು ಚಿಕ್ಕ ವಯಸ್ಸಿನವನಾಗಿದ್ದರೂ ಅವನನ್ನು ಸಾಮಾನ್ಯ ಮಾನವನೆಂದು ಭಾವಿಸಿ ಅವಮಾನಿಸಿಬಾರದು (೭.೮). ರಾಜನೇ ರಾಜದಂಡ; ಅದೇ ಆಳ್ವಿಕೆಯ ಸಂಕೇತ, ನ್ಯಾಯಾಧಿಕಾರಿ ಮತ್ತು ಸಮರ್ಥ ಪುರುಷ. ಈ ಸಂದರ್ಭದಲ್ಲಿಯೇ ಮನುವಿನ ಹೀನಸುಳಿ ಪ್ರದರ್ಶಿತವಾಗುತ್ತದೆ : ರಾಜದಂಡವು ನಾಲ್ಕುವರ್ಣದವರು ಕ್ರಮವಾಗಿ ಅವರವರ 'ಧರ್ಮ' ಪರಿಪಾಲನೆ ಮಾಡುತ್ತಿದ್ದಾರೆಂಬುದಕ್ಕೆ ಸಾಕ್ಷಿಯಾಗಿರುತ್ತದಂತೆ (೭.೧೭: ...ಚತುರ್ಣಾಂ ಆಶ್ರಮಾಣಾಂ ಚ ಧರ್ಮಸ್ಯ ಪ್ರತಿಭೂಃ ಸ್ಮೃತಃ). ಅಂದರೆ, ರಾಜನು ದಂಡವನ್ನು ಹಿಡಿದು ವರ್ಣಭೇದವನ್ನು ಸುತರಾಂ ರಕ್ಷಿಸಬೇಕು. ಹಾಗೆ ಕಾರ್ಯ ನಿರ್ವಹಿಸದಿದ್ದರೆ ನಡೆಯಬಾರದ್ದೆಲ್ಲಾ ನಡೆದುಹೋಗುತ್ತದೆ : ಕಾಗೆ ಹವಿಸ್ಸನ್ನು ತಿಂದೀತು ಮತ್ತು ನಾಯಿ ಅದನ್ನು ನೆಕ್ಕೀತು; ಅದಕ್ಕಿಂತಲೂ ಹೀನಸ್ಥಿತಿಯೆಂದರೆ ಕೆಳಗಿನವರು ತಾವು ಉಚ್ಚಸ್ಥಾನೀಯರೆಂದು ಸಾಧಿಸಿಯಾರು (೭.೨೧ : ...ಪ್ರವರ್ತೇತ ಅಧರೋತ್ತಮಂ). ಅರ್ಥಾತ್, ರಾಜದಂಡದ ದಾಕ್ಷಿಣ್ಯರಹಿತ ಪ್ರಯೋಗವಿಲ್ಲದಿದ್ದರೆ ವರ್ಣಸಂಕರ ಆಗಿಬಿಡುತ್ತದೆ, ಎಲ್ಲ ವರ್ಣಗಳೂ ಅದರಿಂದ ದೂಷಿತರಾಗುತ್ತಾರೆ, ಎಲ್ಲ ಶಾಸ್ತ್ರ ನಿಯಮಗಳೂ ವ್ಯತ್ಯಸ್ತವಾಗುತ್ತವೆ ಮತ್ತು ಜನತೆಯಲ್ಲಿ ಹಾಹಾಕಾರ ಉಂಟಾಗುತ್ತದೆ (೭.೨೪ : ದುಷ್ಯೇಯುಃ ಸರ್ವವರ್ಣಾಶ್ಚ ಭಿದ್ಯೇರನ್ ಸರ್ವಸೇತವಃ। ಸರ್ವಲೋಕ ಪ್ರಕೋಪಶ್ಚ ಭವೇತ್ ದಂಡಸ್ಯ ವಿಭ್ರಮಾತ್ ॥).

ರಾಜನು ಯಾರನ್ನು ಆದರಿಸಬೇಕು, ಏನನ್ನು ವರ್ಜಿಸಬೇಕು, ಮಂತ್ರಿಗಳನ್ನಾಗಿ ಯಾರನ್ನು ನೇಮಿಸಿಕೊಳ್ಳಬೇಕು, ದೂತ, ಸೇನಾಪತಿ, ಮುಂತಾದವರು ಹೇಗಿರಬೇಕು, ಅವರ ಕರ್ತವ್ಯಗಳೇನು, ಇತ್ಯಾದಿ ನಿರ್ದೇಶನಗಳಿವೆ. ವಿದ್ವಾಂಸರು, ಪ್ರಾಜ್ಞರು, ಪರಿಶುದ್ಧರು ಮತ್ತು ದೃಢಚಿತ್ತರಾದ ಬ್ರಾಹ್ಮಣರು ಮಂತ್ರಿಗಳಾಗಬೇಕಂತೆ (೭.೬೦). ಅರಮನೆಯನ್ನು ನಿರ್ಮಿಸಿಕೊಂಡ ನಂತರ ರಾಜನು "ತನ್ನ ಜಾತಿಯವಳೇ ಆದ" ಸುಲಕ್ಷಣೆ ಮತ್ತು ಸಂಪನ್ನೆಯಾದ ಸುಂದರ ಸ್ತ್ರೀಯನ್ನು ಮದುವೆಯಾಗಬೇಕು (೭.೭೭). ಯಜ್ಞಾದಿ ಆಚರಣೆಗಳನ್ನು ನಡೆಸುತ್ತಾ ಬ್ರಾಹ್ಮಣರಿಗೆ ದಕ್ಷಿಣೆ ಮತ್ತು ಭೋಗ್ಯವಸ್ತುಗಳನ್ನು ನೀಡುತ್ತಿರಬೇಕು (೭.೭೯). ಅವರಿಗೆ ನೀಡಿದ ದಾನವು ವ್ಯರ್ಥವಾಗದು ಮತ್ತು ನಷ್ಟವಾಗದು. ಇಂತಹ ದಾನವು ಅಗ್ನಿಹೋತ್ರಕ್ಕಿಂತ ಶ್ರೇಷ್ಠ (೭.೮೪ : ... ವರಿಷ್ಠಮಗ್ನಿಹೋತ್ರೇಭ್ಯೋ ಬ್ರಾಹ್ಮಣಸ್ಯ ಮುಖೇ ಹುತಂ). ಬ್ರಾಹ್ಮಣನೇ ಧರ್ಮಗ್ರಂಥ ರಚಿಸುವಾಗ ತನಗೆ ಆಪ್ಯಾಯಮಾನವಾದುದನ್ನೇ ಬರೆದುಕೊಳ್ಳುತ್ತಾನೆಂಬುದಕ್ಕೆ ಇದು ಪುರಾವೆಯಂತಿದೆ. ಡಾ॥ ಅಂಬೇಡ್ಕರ್ ಇಲ್ಲದೆ ಕೆ. ಎಂ. ಮುನ್ಶಿಯಂಥವರೇ ದೇಶದ ಸಂವಿಧಾನ ರಚಿಸಿದ್ದರೆ ಸನ್ನಿವೇಶವು ಹೇಗಿರುತ್ತಿತ್ತೆಂಬುದಕ್ಕೆ ಇದು ಸೂಚನೆ. ಯುದ್ಧದಲ್ಲಿ ಹೋರಾಟ, ಪ್ರಜಾ ಪರಿಪಾಲನೆ ಮತ್ತು ಬ್ರಾಹ್ಮಣರನ್ನು ಸತ್ಕರಿಸುವುದು ರಾಜನಿಗೆ ಪರಮ ಶ್ರೇಯಸ್ಸಿನ ಹಾದಿ (೭.೮೮). ಯುದ್ಧದಲ್ಲಿ ಮಡಿದರೆ ಅವನಿಗೆ ವೀರಸ್ವರ್ಗ (೮೯), ಆದರೆ ಅವನು ಮೋಸದಿಂದ ಯುದ್ಧ ಮಾಡಬಾರದು; ಅಂದರೆ ಮೋಸದ ಅಸ್ತ್ರಗಳಿಂದ, ವಿಷಲೇಪಿತ ಬಾಣಗಳಿಂದ, ವಿಷ ಸವರಿದ ಶಸ್ತ್ರಗಳಿಂದ ಮತ್ತು ಬೆಂಕಿಯ ಶಸ್ತ್ರಗಳಿಂದ ಶತ್ರುವನ್ನು ಕೊಲ್ಲಬಾರದು (೭.೯೦). ಇದನ್ನು ನಮ್ಮ ಸಂವಿಧಾನದಲ್ಲಿ ಸೇರಿಸಲು 'ಮನುವಾದಿ'ಗಳು ಸಿದ್ಧರಿರುತ್ತಾರೆಯೇ? ಮುಂದುವರಿದು ಮನು ಹೇಳುತ್ತಾನೆ, ಯುದ್ಧದಲ್ಲಿ ದೊರೆತ ರಥ, ಕುದುರೆ, ಆನೆ, ಧನ, ಧಾನ್ಯ, ಪಶು, ಸ್ತ್ರೀ (!!), ಚಿನ್ನ, ಬೆಳ್ಳಿ, ಮುಂತಾದುವೆಲ್ಲಾ ಜಯಿಸಿ ತಂದ ವ್ಯಕ್ತಿಗೆ ಸೇರುತ್ತವೆ; ಇವುಗಳಲ್ಲಿ ಕೆಲವು ರಾಜನಿಗೆ ಸೇರುತ್ತವೆ (೭.೯೬). ಇದನ್ನೆಂದಾದರೂ ಅನುಷ್ಠಾನಕ್ಕೆ ತಂದಿದ್ದುದುಂಟೆ? ಯೋಧರು ಜಯಿಸಿ ತಂದ ವಸ್ತುಗಳಲ್ಲಿ ಕೆಲವನ್ನು 'ಉದ್ಧಾರ' ಎಂದು ರಾಜನಿಗೆ ಕೊಡಬೇಕೆನ್ನುತ್ತಾನೆ ಮನು.

ಎರಡು, ಮೂರು ಅಥವಾ ಐದು ಗ್ರಾಮಗಳನ್ನು ಗುಂಪುಮಾಡಿ ಅವಕ್ಕೆ ಪ್ರಧಾನರನ್ನು ನೇಮಿಸಬೇಕು; ಅಂತೆಯೇ ನೂರು ಗ್ರಾಮಗಳಿಗೆ ರಕ್ಷಕನಾದ ಅಧಿಪತಿಯನ್ನು ನಿಯಮಿಸಬೇಕು (೭.೧೧೪). ರಾಜನಿಗೆ ಗ್ರಾಮಸ್ಥರು ನೀಡಬೇಕಾದ ಧಾನ್ಯ, ಇಂಧನ, ಇತ್ಯಾದಿ ರೂಪದ ಕಪ್ಪಕಾಣಿಕೆಗಳನ್ನು ಗ್ರಾಮಾಧಿಪತಿಯು ಸಂಗ್ರಹಿಸಬೇಕು, ಅದರ ಭಾಗದಲ್ಲಿ ತಾನು ಜೀವಿಸಬೇಕು (೧೧೮). ನಗರಾಧಿಪತಿಗಳು ಹಾಗೂ ಗೂಢಚಾರರ ನೇಮಕಾತಿಯೂ ಉಂಟು (೧೨೧-೨). ಮನು ಅಪೇಕ್ಷಿಸುವ ತೆರಿಗೆಯ ವಿಧಾನ ಹೀಗಿದೆ : ಜಿಗಣೆಯು ತನಗೆ ಬೇಕಾದಷ್ಟು ರಕ್ತ ಹೀರುವಂತೆ, ಕರುವು ತನಗೆ ಬೇಕಾಗುವಷ್ಟು ಮೊಲೆಹಾಲು ಕುಡಿಯುವಂತೆ, ದುಂಬಿಯು ತನಗೆ ಬೇಕಾದಷ್ಟು ಮಧುವನ್ನು ಹೂವಿನಿಂದ ಹೀರುವಂತೆ ರಾಜನು ಅವಶ್ಯವಾದಷ್ಟು ಮಾತ್ರ ವಾರ್ಷಿಕ ಕರವನ್ನು ಪಡೆಯಬೇಕು (೭.೧೨೯). ಪಶುಗಳು, ಬಂಗಾರ, ಧಾನ್ಯ, ಮರ, ಮಾಂಸ, ಜೇನು, ತುಪ್ಪ, ಗೆಡ್ಡೆ-ಗೆಣಸು, ಮುಂತಾದುವನ್ನು ಮಾರಾಟ ಮಾಡಿದಾಗ ಬರುವ ಲಾಭದಲ್ಲಿ ರಾಜನು ಆರರಲ್ಲಿ ಒಂದು ಭಾಗದಿಂದ ಹಿಡಿದು ನೂರರಲ್ಲಿ ಅರ್ಧಭಾಗದವರೆಗೆ ತೆರಿಗೆ ಪಡೆಯಬೇಕು; ಪಶು ಮತ್ತು ಬಂಗಾರದ ಮಾರಾಟದಲ್ಲಿ ಮಾತ್ರ ಅರ್ಧದಷ್ಟು (೧೩೦-೧೩೧). ಆದರೆ ಅದರಲ್ಲೂ ಬ್ರಾಹ್ಮಣನಿಗೆ ಮೀಸಲಾತಿಯ ಸೌಲಭ್ಯವಿದೆ : ಅವನಿಂದ ಯಾವುದಕ್ಕೂ ಮತ್ತು ಯಾವತ್ತೂ ತೆರಿಗೆ ಪಡೆಯುವಂತಿಲ್ಲ ಮತ್ತು ಅವನೆಂದೂ ಹಸಿವಿನ ಬಾಧೆಗೆ ತುತ್ತಾಗುವಂತಿಲ್ಲ. ಅದು ರಾಜನ ಜವಾಬ್ದಾರಿ (೭.೧೩೩ : ಮ್ರಿಯಮಾಣೋऽಪಿ ಆದದೀತ ನ ರಾಜಾ ಶ್ರೋತ್ರಿಯಾತ್ ಕರಂ। ನ ಚ ಕ್ಷುಧ್ಯಾऽಸ್ಯ ಸಂಸೀದೇತ್ ಶ್ರೋತ್ರಿಯೋ ವಿಷಯೇ ವಸನ್). ತಾವೇ ಶಾಸ್ತ್ರ ರಚಿಸುವಂತಿದ್ದರೆ ಬೇರೆ ವರ್ಣದವರೂ ಇಂತಹ ಕಟ್ಟಳೆಗಳನ್ನು ನಿರ್ಣಯಾತ್ಮಕವಾಗಿ ವಿಧಿಸಿ ಹಾಯಾಗಿರಬಹುದಾಗಿತ್ತೇನೋ! ರಾಜನು ಹಾಗೂ ರಾಜ್ಯವು ಕಂಗಾಲಾಗಿ ನಶಿಸುವಂತಿದ್ದರೂ ಬ್ರಾಹ್ಮಣನಿಂದ ತೆರಿಗೆ ಪಡೆಯಬಾರದೆಂಬುದು ಅತ್ಯುಚ್ಚಮಟ್ಟದ ಮೀಸಲಾತಿಯಲ್ಲದೆ ಮತ್ತೇನು? ಜೊತೆಗೆ ಇನ್ನೊಂದು ವಿಧಿ ಹೇಗಿದೆ ಗಮನಿಸಿ : ಶಿಲ್ಪಿ, ಬಡಗಿ, ಕಮ್ಮಾರ, ಕೂಲಿ ಕೆಲಸದವನು, ಇತ್ಯಾದಿಗಳಿಂದ ತಿಂಗಳಿಗೊಂದು ದಿನ ಬಿಟ್ಟಿ ಕೆಲಸ ಮಾಡಿಸಿ ಅದನ್ನು ತೆರಿಗೆಯೆಂದು ಪಡೆಯಬೇಕು (೨.೧೩೮). ಇದೇ ಮುಂದೆ 'ವೇಠ್ ಬಿಗಾರ್' ಎಂದಾಗಿತ್ತು ಮತ್ತು ಅದನ್ನು ವಾರಕ್ಕೊಂದು ದಿನವೆಂದು ನಿಗದಿಗೊಳಿಸಿಕೊಂಡುಬಿಟ್ಟರು! ಇಷ್ಟೆಲ್ಲಾ ಏಕೆ ಬೇಕೆಂದರೆ ರಾಜನು ತನ್ನ ಆದಾಯದ ಮೂಲಗಳನ್ನು ಕಳೆದುಕೊಳ್ಳಬಾರದೆಂಬ ಕಾರಣಕ್ಕೆ. ಪ್ರಜೆಗಳ ಪೀಡನೆ ಬೇಡವೆಂದು ರಾಜನು ಉದಾರಿಯಾದರೆ ಜನರ ಮತ್ತು ರಾಜನ ಮೂಲೋತ್ಪಾಟನೆ ಆಗಿಬಿಡುತ್ತದೆ (೧೩೯ : ನ ಉಚ್ಛಿಂದ್ಯಾತ್ ಆತ್ಮನೋ ಮೂಲಂ ಪರೇಷಾಂ ಚ ಅತಿತೃಷ್ಣಯಾ। ಉಚ್ಛಿಂದನ್ ಹಿ ಆತ್ಮನೋ ಮೂಲಂ ಆತ್ಮಾನಂ ತಾಂಶ್ಚ ಪೀಡಯೇತ್ ॥).

ಮುಂದಿನ ವಿಷಯ ಗುಪ್ತ ಸಮಾಲೋಚನೆ; (ಹಿಂದೆ ವಾರಪತ್ರಿಕೆಯೊಂದರಲ್ಲಿ ಪ್ರಕಟವಾಗುತ್ತಿದ್ದ ಗುಪ್ತಸಮಾಲೋಚನೆಯಲ್ಲ). ಬೇಹುಗಾರರ ಆಯ್ಕೆಯಲ್ಲಿ ಇಬ್ಬರನ್ನು ದೂರವಿಡಬೇಕು : ಮೂಕರು ಮತ್ತು ಸ್ತ್ರೀಯರು. ತಮಗೆ ಅವಮಾನವಾಗುವ ಸಂದರ್ಭ ಬಂದರೆ ಅವರು ಗುಟ್ಟು ಬಿಟ್ಟುಕೊಡುತ್ತಾರಂತೆ, ಅದಕ್ಕೆ. ಮಂತ್ರಿಗಳ ಜೊತೆ ಸದಾ ಚರ್ಚಿಸುತ್ತಿರಬೇಕಾದ ವಿಷಯಗಳನ್ನು ವಿಸ್ತಾರವಾಗಿ ಹೇಳಲಾಗಿದೆ : ಕರ ವಸೂಲಾತಿ, ವೇತನ ಪಾವತಿ, ರಾಜಾಜ್ಞೆಯ ಅನುಷ್ಠಾನ, ಪ್ರಜೆಗಳ ವಾದ-ವಿವಾದಗಳ ತನಿಖೆ, ಆಕ್ರಮಣಕ್ಕೆ ಸರಿಯಾದ ಕಾಲ, ಇತ್ಯಾದಿ. ಮಾರ್ಗಶಿರ, ಫಾಲ್ಗುಣ ಮತ್ತು ಚೈತ್ರ ಮಾಸಗಳು ಆಕ್ರಮಣಕ್ಕೆ ಸಕಾಲ (೭.೧೮೨); ಸಾಧ್ಯವಾದರೆ ಯುದ್ಧವು ನಡೆಯದಂತೆ ನೋಡಿಕೊಳ್ಳಬೇಕು, ಏಕೆಂದರೆ ಯುದ್ಧದಲ್ಲಿ ವಿಜಯವು ಅನಿಶ್ಚಿತವಾದ್ದು (೭.೧೯೯ : ಅನಿತ್ಯೋ ವಿಜಯೋ ಯಸ್ಮಾತ್ ದೃಶ್ಯತೇ ಯುಧ್ಯಮಾನಯೋಃ। ಪರಾಜಯಶ್ಚ ಸಂಗ್ರಾಮೇ ತಸ್ಮಾದ್ಯುದ್ಧಂ ವಿವರ್ಜಯೇತ್ ॥). ಯುದ್ಧಕ್ಕೆ ಆಯಕಟ್ಟಿನ ಪ್ರದೇಶ, ಸೈನ್ಯವನ್ನು ತೊಡಗಿಸುವ ಬಗೆ, ಮುಂತಾದುವನ್ನು ಸಹ ಹೇಳಲಾಗಿದೆ (೭.೧೮೭-೧೯೨). ಬಲಿಷ್ಠರೂ ಎತ್ತರದವರೂ ಆದ ಕುರುಕ್ಷೇತ್ರ ಪ್ರದೇಶದವರನ್ನು ಸೇನೆಯ ಮುಂದೆ ನಿಲ್ಲಿಸಿ ಸೇನಾವ್ಯೂಹವನ್ನು ರಚಿಸಬೇಕು ಮತ್ತು ವೈರಿಗಳೊಡನೆ ಕಾದುವ

ವೀರರ ವ್ಯವಹಾರ ಮತ್ತು ವರ್ತನೆಯನ್ನು ಅರಿಯಬೇಕು (೧೯೩–೧೯೪). ಯಾವಾಗಲೂ ಯುದ್ಧವನ್ನೇ ನೆಚ್ಚದೆ ಸಾಮ–ದಾನ–ಭೇದೋಪಾಯ ಗಳನ್ನು ಬಳಸಿ ಗೆಲ್ಲಲು ಯತ್ನಿಸಬೇಕು (೧೯೮).

ಎಂಟನೆಯ ಅಧ್ಯಾಯವು ರಾಜ್ಯದ ಸಭೆಗಳು, ನ್ಯಾಯ ವಿತರಣೆ, ಮುಂತಾದ ವಿಷಯಗಳನ್ನು ಕುರಿತು ಸಲಹೆ ನೀಡುತ್ತದೆ. ನಾಗರಿಕರಿಗೆ ಅನ್ವಯ ವಾಗುವ ಕಾನೂನುಗಳ ಬಗ್ಗೆ ಈ ಅಧ್ಯಾಯದ ಅನೇಕ ಅಂಶಗಳು ಇಂದಿಗೂ ಉಪಯುಕ್ತವಾಗ ಬಲ್ಲವು. ೪೨೦ ಶ್ಲೋಕಗಳಿರುವ ಈ ಅಧ್ಯಾಯವು ಮನುಸ್ಮೃತಿಯಲ್ಲಿ ಅತಿದೀರ್ಘವಾದ್ದು. ನ್ಯಾಯ ವಿತರಣೆಯನ್ನು ಮನು ನೀಡಿದಾಗ ಕೆಲವು ಮೃಗೀಯ ಅಂಶಗಳಿರುವುದು ಅನಿವಾರ್ಯ. ರಾಜನು ವಿವಾದಗಳನ್ನು ಪರಿಹರಿಸಲು ಮಂತ್ರಿ ಗಳೊಡನೆ ಮಾತ್ರ ಇರುವುದಿಲ್ಲ, 'ವಿದ್ವಾಂಸನಾದ ಬ್ರಾಹ್ಮಣ'ನೂ ಇರುತ್ತಾನೆ. ಸಾಮಾನ್ಯವಾಗಿ ಹದಿನೇಳು ತರಹದ ವ್ಯಾಜ್ಯಗಳು ನ್ಯಾಯಾಲಯದ ಮುಂದೆ ಬರುತ್ತವೆ, ಆದರೆ ಸಾಲದ ಬಾಕಿಯ ತಕರಾರು ಪ್ರಧಾನವಾದ್ದು (೮.೪). ತನ್ನದಲ್ಲದ್ದನ್ನು ಮಾರುವುದು ಮತ್ತು ಪಾಲುಗಾರಿಕೆಯ ವ್ಯಾಪಾರದಲ್ಲೂ ಸಾಕಷ್ಟು ತಕರಾರುಗಳಿರುತ್ತವೆ. ವೈಯ್ಯಕ್ತಿಕ ಭೂಮಿಯ ಎಲ್ಲೆ ಗುರುತಿಸುವುದರಲ್ಲೂ ವ್ಯಾಜ್ಯಗಳು ಉದ್ಭವಿಸುತ್ತವೆ. ಇವನ್ನೆಲ್ಲಾ ರಾಜನೇ ಪರಿಹರಿಸಲಾಗದಿದ್ದರೆ ಒಬ್ಬ ಬ್ರಾಹ್ಮಣನನ್ನು ನೇಮಿಸಿಕೊಳ್ಳಬಹುದಂತೆ; ಅವನು ಬೇರೆ ಮೂರು ಬ್ರಾಹ್ಮಣರನ್ನು ಸಹಾಯಕರನ್ನಾಗಿ ಹೊಂದಬಹುದು (೮.೯–೧೦). ಮಾಡಿಸಿಕೊಂಡ ಕೆಲಸಕ್ಕೆ ಕೂಲಿ ಕೊಡದಿರುವುದು, ಯಜಮಾನ–ದುಡಿಯುವವನ ನಡುವೆ ಜಗಳ, ಕಟು ನಿಂದನೆ ಮಾಡುವುದು (ಪಾರುಷ್ಯ), ಕಳ್ಳತನ, ಸ್ತ್ರೀ ವಿಷಯದಲ್ಲಿ ಜಗಳ, ಆಸ್ತಿ ವಿಭಾಗ, ಜೂಜಾಟ, ಇಂಥವೆಲ್ಲಾ ನ್ಯಾಯಾಲಯದ ಮುಂದೆ ಬರುವಂತಹ ವ್ಯಾಜ್ಯಗಳು. ಕೇವಲ ವಾದ ಮಾಡಲು ನ್ಯಾಯಾಲಯಕ್ಕೆ ಹೋಗಬಾರದು ಮತ್ತು ಅಸತ್ಯವನ್ನು ನುಡಿದರೆ ಪಾಪ ಸುತ್ತಿಕೊಳ್ಳುತ್ತದೆ (೮.೧೩). ನಾವೀಗ "ಧರ್ಮೋ ರಕ್ಷತಿ ರಕ್ಷಿತಃ" ಎಂಬ ಘೋಷಣಾ ವಾಕ್ಯವನ್ನು ಬಹುವಾಗಿ ಕೇಳುತ್ತಿರುತ್ತೇವೆ. ಅದು ಮನುವಿನ ಮಾತು : "ನಾವು ಧರ್ಮವನ್ನು ಕೊಂದರೆ ಅದು ನಮ್ಮನ್ನು ಕೊಲ್ಲುತ್ತದೆ, ಅದನ್ನು ರಕ್ಷಿಸಿದರೆ ಅದು ನಮ್ಮನ್ನು ರಕ್ಷಿಸುತ್ತದೆ" (೮.೧೫). ಹೆಸರಿಗೆ ಮಾತ್ರ ಬ್ರಾಹ್ಮಣನಾಗಿರುವವನು, ಅಂದರೆ ಜಾತಿಮಾತ್ರದಲ್ಲಿ ಬ್ರಾಹ್ಮಣನು, ವಿದ್ವಾಂಸನ ಜಾಗದಲ್ಲಿ ನೇಮಿಸಲ್ಪಡ ಬಹುದು; ಆದರೆ ಯಾವ ಕಾರಣಕ್ಕೂ ಶೂದ್ರನನ್ನು ನೇಮಿಸಕೂಡದು (೮.೨೦). ಶೂದ್ರನು ಹಾಗೇನಾದರೂ ನೇಮಿಸಲ್ಪಟ್ಟರೆ ರಾಜನ ದೇಶವು ಕೆಸರಿನಲ್ಲಿ ಸಿಲುಕಿಕೊಂಡ ಹಸುವಿನಂತೆ ಒದ್ದಾಟದಲ್ಲಿ ಸಿಲುಕಿಕೊಳ್ಳುತ್ತದೆ (೮.೨೧). ಅಷ್ಟೇ ಅಲ್ಲ, "ರಾಜ್ಯವು ಹೆಚ್ಚಾಗಿ ಶೂದ್ರರಿಂದಲೇ ತುಂಬಿದ್ದರೆ, ನಾಸ್ತಿಕರಿಂದ ಆಕ್ರಮಿಸಲ್ಪಟ್ಟಿದ್ದರೆ, ಬ್ರಾಹ್ಮಣ ರಹಿತ ವಾಗಿದ್ದರೆ, ಆ ರಾಜ್ಯವು ದುರ್ಭಿಕ್ಷ ಮತ್ತು

> ವ್ಯಂಗ್ಯಚಿತ್ರಕಾರರು ರಾಜಕಾರಣಿಗಳನ್ನು ಚಿತ್ರಿಸುವಾಗ ಸಾಮಾನ್ಯವಾಗಿ ಬಿಳಿಯ ಟೋಪಿಯನ್ನು ತಲೆಗೆ ತೊಡಿಸುತ್ತಾರೆ. ಈಗಿನ ರಾಜಕಾರಣಿಗಳು ಟೋಪಿ ಧರಿಸುವುದು ವಿರಳ. ಭ್ರಷ್ಟಾಚಾರ, ಸ್ವಾರ್ಥ, ಮಂಕುತನ, ಗೋಸುಂಬೆತನ ಮುಂತಾದವು ಯಾವುದೇ ಒಂದು ಪಕ್ಷದ ರಾಜಕಾರಣಿಗಳ ಏಕಸ್ವಾಮ್ಯದಲ್ಲಿಲ್ಲ. ಆದ್ದರಿಂದ 'ಹೊಸತು' ವ್ಯಂಗ್ಯಚಿತ್ರಕಾರರು ಇನ್ನು ಮುಂದೆ ಟೋಪಿ ಇಲ್ಲದ ರಾಜಕಾರಣಿಗಳನ್ನು ಚಿತ್ರಿಸಬೇಕೆಂದು ವಿನಂತಿ.
>
> – *ಸಂ*

ರೋಗಗಳಿಗೆ ತುತ್ತಾಗುತ್ತದೆ" (೮.೨೨) ಹೀಗೆ ಇಡೀ ಅಧ್ಯಾಯದಲ್ಲಿ ಬ್ರಾಹ್ಮಣರ ಪ್ರಾಮುಖ್ಯತೆಯನ್ನು ಎಲ್ಲ ಸಂದರ್ಭಗಳಲ್ಲೂ ಎತ್ತಿಹಿಡಿಯಲಾಗಿದೆ. ಇದು ಎಷ್ಟರಮಟ್ಟಿಗೆಂದರೆ ಬೈಗುಳ ತಿನ್ನಿಸಿದವರಿಗೆ ವಿಧಿಸಲಾಗುವ ದಂಡದಲ್ಲಿ ಸಹ ವರ್ಣಾಧಾರಿತ ವ್ಯತ್ಯಾಸವಿದೆ. ಬ್ರಾಹ್ಮಣನನ್ನು ಕ್ಷತ್ರಿಯನು ಬೈದರೆ ನೂರು ಪಣಗಳ ದಂಡ, ವೈಶ್ಯನಾದರೆ ನೂರೈವತ್ತು, ಶೂದ್ರನು ಬೈದರೆ ಅವನಿಗೆ ಹೊಡೆತವೇ ದಂಡ. ಅದೇ ಬ್ರಾಹ್ಮಣನು ಕ್ಷತ್ರಿಯನನ್ನು ಬೈದರೆ ಐವತ್ತು ಪಣಗಳ ದಂಡ, ವೈಶ್ಯನನ್ನು ಬೈದರೆ ೨೫, ಶೂದ್ರನನ್ನು ಬೈದರೆ ೧೨ (೮.೨೬೭–೨೬೯).

ನ್ಯಾಯಸ್ಥಾನವು ವಿಶೇಷವಾಗಿ ಬಂಜೆ, ಮಗನು ಸತ್ತ ತಾಯಿ, ದೇಶಾಂತರವಾಗಿರುವ ವ್ಯಕ್ತಿಯ ಪತ್ನಿ, ಪತಿವ್ರತೆ, ರೋಗಿಯಾದ ಮಹಿಳೆ, ವಿಧವೆ, ಇವರ ಸ್ವತ್ತನ್ನು ರಕ್ಷಿಸಿಡಬೇಕು (೮.೨೮). ಸಾಲಗಾರನಿಂದ ಹಣವನ್ನು ಕೊಡಿಸಬೇಕಾದ ತುರ್ತು ಮತ್ತು ಅದಕ್ಕೆ ಅಗತ್ಯವಾದ ವಿಧಾನಗಳನ್ನು ಸ್ವಲ್ಪ ದೀರ್ಘವಾಗಿ ವಿವರಿಸಲಾಗಿದೆ (೮.೪೭–೬೦). ಸಾಕ್ಷಿ ನುಡಿಯಲು ಅರ್ಹತೆ ಮತ್ತು ದಂಡದ ಪ್ರಮಾಣ, ಇವನ್ನೂ ದೀರ್ಘವಾಗಿ ನಮೂದಿಸಲಾಗಿದೆ (೮.೬೭–೧೨೨). ಸಾಕ್ಷ್ಯವನ್ನು ಕುರಿತ ಒಂದು ವಿಧಿ ಹೀಗಿದೆ : "ಸುಳ್ಳು ಸಾಕ್ಷಿ ಹೇಳುವ ಬ್ರಾಹ್ಮಣೇತರ ವರ್ಣದವರನ್ನು ದಂಡ ವಿಧಿಸಿ ರಾಜ್ಯದಿಂದ ಹೊರಹಾಕಬೇಕು; ಅದನ್ನೇ ಬ್ರಾಹ್ಮಣನು ಮಾಡಿದರೆ ದಂಡ ವಿಧಿಸದೆ ಸುಮ್ಮನೆ ರಾಜ್ಯದಿಂದ ಹೊರಹಾಕಬೇಕು" (೮.೧೨೪). ಪ್ರತಿಯೊಂದು ಹಂತದಲ್ಲೂ ಬ್ರಾಹ್ಮಣರಿಗೆ ರಕ್ಷಣೆ ಮತ್ತು ಇತರರಿಗೆ ದೂಷಣೆ ಹಾಗೂ ಶಿಕ್ಷೆ: ಇದು ಮನುವಿನ ಮೂಲಭೂತ ಸೂತ್ರ. ಆದರೆ ಪ್ರಧಾನವಾಗಿ, ಸುಳ್ಳು ಸಾಕ್ಷಿ ಹೇಳಿದವರಿಗೆ ವಿವಿಧ ಶಿಕ್ಷೆಗಳನ್ನು ದೀರ್ಘವಾಗಿ ನಿರೂಪಿಸಲಾಗಿದೆ.

ಮುಂದೆ, ಕೂಲಿಗೆಲಸದವರು ನಿಗದಿಗೊಂಡ ಕೆಲಸವನ್ನು ಮಾಡದಿದ್ದರೆ ದಂಡ ವಿಧಿಸುವ ವಿಧಾನ ಮತ್ತು ಪರಿಮಾಣಗಳನ್ನು ಗೊತ್ತುಪಡಿಸಲಾಗಿದೆ: ತಾನು ಆರೋಗ್ಯದಿಂದಿದ್ದು ಕೆಲಸ ಕದ್ದರೆ ಎಂಟು ನಾಣ್ಯಗಳ (ಅದನ್ನು ಕೃಷ್ಣಲ ಎನ್ನಲಾಗಿದೆ) ದಂಡ. ಆದರೆ ಅವನು ಕಾಯಿಲೆಯಿಂದ ಮುಕ್ತನಾಗಿ ಕೆಲಸಕ್ಕೆ ಬಂದಾಗ ತಡವಾಗಿ ಕೆಲಸ ಮುಗಿಸಿದರೂ ಅವನಿಗೆ ಕೊಡಬೇಕಾದ ಕೂಲಿಯನ್ನು ಪೂರ್ತಿಯಾಗಿ ಕೊಡ ಬೇಕು. ಇಂತಹ ಕನಿಷ್ಠಮಟ್ಟದ ಮಾನವೀಯತೆಯು ಸಹ ಯಾವಾಗಲೂ ಪ್ರದರ್ಶಿತವಾಗದಿರುವುದು ಮನುಸ್ಮೃತಿಯ ಒಂದು ನ್ಯೂನತೆ ಎನ್ನಲಡ್ಡಿಯಿಲ್ಲ. ಏಕೆಂದರೆ, ರೋಗಪೀಡಿತನಾಗಿರುವಾಗ ಅವನು ತನ್ನ ಕೆಲಸವನ್ನು ಬೇರೊಬ್ಬನಿಂದ ಮಾಡಿಸಿಕೊಡಬೇಕು; ಇಲ್ಲವೇ, ಗುಣಹೊಂದಿ ಬಂದ ಮೇಲೆ ತಾನೇ ಮಾಡಿ ಪೂರೈಸಬೇಕು. ಇಲ್ಲವಾದರೆ ಅವನಿಗೆ ಕೂಲಿ ಕೊಡು ವಂತಿಲ್ಲ (೮.೨೧೬–೨೧೭). ದನ ಕಾಯುವವನಿಗೆ ಕೂಲಿ ನಿಗದಿಯಾಗಿಲ್ಲದಿರುವಾಗ ಅವನು ತನ್ನ ಒಡೆಯನ ಅಪ್ಪಣೆ ಪಡೆದು ಒಂದು ಹಸುವಿನ ಹಾಲನ್ನು ತನ್ನ ಕೂಲಿಗೆ ಬದಲಾಗಿ ಕರೆದು ಕೊಳ್ಳಬಹುದು. ಅದೇ ಅವನ ಕೂಲಿ (೮.೨೩೧). ಪಶುಗಳು ಸಹಜವಾಗಿ ಸತ್ತರೆ ಅವುಗಳ ಕಿವಿ, ಬಾಲ, ಸ್ನಾಯು, ಕೋಡು, ಗೊರಸು, ಮುಂತಾದುವನ್ನು ತಂದು ಯಜಮಾನನಿಗೆ ತೋರಿಸಬೇಕು. ಕುರಿ–ಮೇಕೆ ಕಾಯುವವನು ಅವನ್ನು ತೋಳದ ಬಾಯಿಗಿಕ್ಕಿದರೆ ನಷ್ಟವನ್ನು ತುಂಬಿಕೊಡಬೇಕು, ಏಕೆಂದರೆ ತೋಳಗಳನ್ನು ಬೆನ್ನಟ್ಟಿ ಕುರಿಗಳನ್ನು ರಕ್ಷಿಸುವ ಜವಾಬ್ದಾರಿ ಅವನದು (೮.೨೩೫).

ಒಂದು ಗ್ರಾಮದ ಸುತ್ತಲೂ ಗೋಮಾಳವನ್ನು ಕಾದಿರಿಸಬೇಕು. ಒಬ್ಬನು ಜೋರಾಗಿ ಎಸೆದ ಕೋಲು ಎಷ್ಟು ದೂರ ಹೋಗಿ ಬೀಳುತ್ತದೋ ಅದರ ಮೂರರಷ್ಟು ಜಾಗವು ಗೋಮಾಳದ ವ್ಯಾಪ್ತಿ. ಆ ದೂರವನ್ನು 'ಶಮ್ಯಾಪಾತ' ಎನ್ನಲಾಗಿದೆ(೮.೨೩೭). ಗೋಮಾಳದಲ್ಲಿ ಬೇಲಿ ಹಾಕದೆ ರೈತರು ಬೆಳೆಸಿದ ಧಾನ್ಯವನ್ನು ಪಶುಗಳು ತಿಂದುಹಾಕಿದರೆ ರಾಜನು ಆ ಪಶುಗಳನ್ನು ಕಾಯುವವರಿಗೆ ದಂಡ ವಿಧಿಸುವಂತಿಲ್ಲ (೮.೨೩೮), ಏಕೆಂದರೆ ಅದು ಅಕ್ರಮವಾಗಿ ಬೆಳೆಸಲಾದ ಧಾನ್ಯ. ಎತ್ತರವಾದ ಬೇಲಿ ಹಾಕಿ, ಹಂದಿಗಳು ತೂರಲಾರದಂತೆ ಕಿಂಡಿಗಳನ್ನು ಮುಚ್ಚುವುದು ಧಾನ್ಯ ಬೆಳೆಯುವವನ ಜವಾಬ್ದಾರಿ (೮.೨೩೯). ಬೇರೆಡೆ, ಹೊಲದಲ್ಲಿ ಬೇಲಿಯನ್ನು ನುಗ್ಗಿ ಪಶುಗಳು ಬೆಳೆ ಹಾಳುಮಾಡಿದರೆ ಪಶುಪಾಲಕನಿಗೆ ನೂರು ಪಣಗಳ ದಂಡ ವಿಧಿಸಲಾಗುತ್ತದೆ; ಪಶುಪಾಲಕನಿಲ್ಲದಿದ್ದರೆ ದನ ಗಳನ್ನು ಓಡಿಸುವುದು ಹೊಲದೊಡೆಯನ ಕರ್ತವ್ಯ (೨೪೦). ಗ್ರಾಮಗಳ ಗಡಿಗಳನ್ನು ಗುರುತಿಸಲು ಮರಗಳನ್ನು ಬೆಳೆಸಬೇಕು (೨೪೬). ಸರೋವರ, ಬಾವಿ, ನೀರಿನ ಕಾಲುವೆ, ಕೆರೆ, ದೇವಸ್ಥಾನ, ಇತ್ಯಾದಿಗಳನ್ನು ಗ್ರಾಮಗಳ ಎಲ್ಲೆಗಳು ಸಂಧಿಸುವ ಜಾಗದಲ್ಲಿ, ಅಂದರೆ ಗಡಿಪ್ರದೇಶದಲ್ಲಿ, ನಿರ್ಮಿಸಬೇಕು (೮.೨೪೮). ಗ್ರಾಮಗಳ ಗಡಿಗಳ ಬಗ್ಗೆ ತಕರಾರಿದ್ದರೆ ಬೇಡರು, ಹಕ್ಕಿ ಹಿಡಿಯುವವರು, ದನ ಮೇಯಿಸುವವರು, ಮೀನುಗಾರರು, ಹಾವಾಡಿಗರು, ಮೂಲಿಕೆಗಳನ್ನು ಮಾರುವವರು, ಮುಂತಾದವರಿಂದ ವಿವರಣೆ ಪಡೆದು ತೀರ್ಮಾನಿಸ ಬೇಕು (೮.೨೬೦) ಜನರನ್ನು ಹೆದರಿಸಿ, ಬೆದರಿಸಿ ಮನೆ, ಹೊಲ, ಕೆರೆ, ತೋಟಗಳನ್ನು ಅತಿಕ್ರಮಿಸಿ ದವರಿಗೆ ೫೦೦ ಪಣಗಳ ದಂಡ ಮತ್ತು

ತಿಳಿಯದೆ ಅತಿಕ್ರಮಿಸುವವರಿಗೆ ೨೫೦ ಪಣಗಳ ದಂಡ ವಿಧಿಸಬೇಕು (೨೬೪).

ತಥಾಕಥಿತ ನ್ಯಾಯದೇವತೆಯನ್ನು ಮನುಸ್ಮೃತಿ ಎಷ್ಟು ಕೀಳುಮಟ್ಟಕ್ಕೆ ಇಳಿಸಬಲ್ಲದೆಂಬುದಕ್ಕೆ ನಾಲ್ಕು ವರ್ಣಗಳ ನಡುವೆ ಪಕ್ಷಪಾತವು ಎಷ್ಟು ಢಾಳಾಗಿದೆ ಎಂಬುದನ್ನು ನೋಡಿದರೆ ತಿಳಿಯುತ್ತದೆ : "ಏಕ ಜಾತಿಯ ಶೂದ್ರನು ದ್ವಿಜರಾದ ಇತರ ಮೂರು ವರ್ಣದವರನ್ನು ಕೆಟ್ಟ ಮಾತುಗಳಿಂದ ಬೈದರೆ ಕೆಳಜಾತಿಯ ಶೂದ್ರನ ನಾಲಿಗೆಯನ್ನು ಛೇದಿಸಬೇಕು, ಏಕೆಂದರೆ ಅವನು ಕೆಳಜಾತಿಯವನು" (೮.೨೭೦ : ...ಜಿಹ್ವಾಯಾಃ ಪ್ರಾಪ್ನುಯಾತ್ ಛೇದಂ ಜಘನ್ಯಪ್ರಭವೋ ಹಿ ಸಃ). ಮನು ಎತ್ತಿ ಹಿಡಿಯುವ ಕಟ್ಟಳೆಗಳೆಲ್ಲಾ ಅವನ ಕಾಲದ ಸಮಾಜದಲ್ಲಿ ಹಾಗೆಯೇ ಆಚರಣೆಯಲ್ಲಿದ್ದುವೇ ಅಥವಾ ಇಲ್ಲವೇ ಎಂಬುದನ್ನು ಆರಂಭದಲ್ಲಿ ಚರ್ಚಿಸಿದ್ದೆವು. ಹಾಗಿತ್ತೋ ಇಲ್ಲವೋ ಎಂಬುದು ಒಂದು ಕಡೆಯಾದರೆ ಅಂತಹ ಕ್ರೂರ ನಿಯಮಗಳನ್ನು ವಿಧಿಸುವ, ಗ್ರಂಥಸ್ಥ ಮಾಡುವ ವಿಕೃತ ಮನಸ್ಸು ಮನುವಿಗೆ ಇದ್ದಿತೆಂಬುದು ಇನ್ನೊಂದು ಕಡೆ. ಭಯಾನಕವೋ ಬೀಭತ್ಸವೋ ಆದ ಸಂಗತಿಗಳು ವಾಸ್ತವದಲ್ಲಿ ಇವೆ ಎಂಬುದು ನಿಜ; ಆದರೆ ಅದನ್ನು ಮಾನ್ಯ ಮಾಡುವ ಮನಸ್ಸು ನಮ್ಮದಾಗಬಾರದೆಂಬುದು ಸದಾಶಯ. ಅದು ಮನುವಿನ ವ್ಯಕ್ತಿತ್ವದಲ್ಲಿಲ್ಲ. ಆದ್ದರಿಂದಲೇ ಮಹಿಳೆಯರ ಬಗ್ಗೆ, ಶೂದ್ರರ ಬಗ್ಗೆ, ಅಸಹ್ಯವಾದ ಭಾವನೆಗಳನ್ನವನು ಪ್ರಕಟಿಸುತ್ತಾನೆ. ಅವನ ಸಮಾಜದಲ್ಲಿ ಅಂತಹ ಸಂಗತಿಗಳಿದ್ದುವು, ಆದ್ದರಿಂದ ಪ್ರಾಮಾಣಿಕವಾಗಿ ಅದನ್ನು ದಾಖಲಿಸಿದ್ದಾನೆ ಎಂದು ಯಾರಾದರೂ ಸಮಜಾಯಿಷಿ ಕೊಡಹೊರಟರೆ ಅವರಿಗೆ ಒಂದು ಪ್ರಶ್ನೆ ಹಾಕಬೇಕು: ದಾಖಲಿಸಿದ್ದಾನೆ, ಸರಿ; ಆದರೆ ಇವೆಲ್ಲಾ ಕೊಳಕು ಮನಸ್ಸಿನ ಪ್ರತಿಫಲನವೆಂಬ ಒಂದು ವಾಕ್ಯವನ್ನು ಎಲ್ಲಾದರೂ, ಒಮ್ಮೆಯಾದರೂ, ಸೇರಿಸಬಹುದಿತ್ತಲ್ಲ, ಏಕೆ ಸೇರಿಸಲಿಲ್ಲ? ಏಕೆಂದರೆ ಅವನ ಆಶಯದ ಆದರ್ಶ ಸಮಾಜದಲ್ಲಿ ಸಾಮರಸ್ಯದ ಸೋಂಕಿಲ್ಲ, ಬದಲಾಗಿ ಮೃಗೀಯ ಕೃತ್ಯಗಳಿವೆ; ಅವುಗಳ ನಡುವೆ ವಿಜೃಂಭಿಸುವ ವರ್ಣವೊಂದರ ವಕ್ತಾರ ಅವನು. ಅವನ ಕೆಲವು ವಿಧಿಗಳನ್ನು ಗಮನಿಸೋಣ : ಜಾತಿಯ ಹೆಸರೆತ್ತಿ ಮೇಲಿನ ಜಾತಿಯವರನ್ನು ತೀವ್ರವಾಗಿ ದೂಷಿಸಿದರೆ ಅಂತಹ ಶೂದ್ರನ ಬಾಯಲ್ಲಿ ಹತ್ತು ಅಂಗುಲ ಉದ್ದದ ಕಾದ ಕಬ್ಬಿಣದ ಸರಳನ್ನು ತುರುಕಬೇಕು (೮.೨೭೧ : ನಾಮಜಾತಿ ಗ್ರಹಂ ತ್ವೇಷಾಮಭಿದ್ರೋಹೇಣ ಕುರ್ವತಃ। ನಿಕ್ಷೇಪ್ಯಃ ಅಯೋಮಯಃ ಶಂಕುಃ ಜ್ವಲನ್ ಆಸ್ಯೇ ದಶಾಂಗುಲಃ ॥). ಇದು ಮಾನವನೊಬ್ಬ ಹೇಳಬಹುದಾದ ಮಾತೆ? ಗ್ವಾಂಟನಾಮೋ ಕೈದಿಗಳ ಕ್ರೂರತಾಣದಲ್ಲಿ ಅಮೆರಿಕಾದ ನಿರ್ದಯೀ ಪೊಲೀಸರು ಮಾತ್ರವೇ ಯೋಚಿಸಬಹುದಾದ ಶಿಕ್ಷೆ ಇದು!

ಶೂದ್ರರ ಬಗೆಗಿನ ಕ್ರೂರಭಾವನೆಯು ಇಷ್ಟೇ ಆದರೆ ಮನುನುವಿನ ಆತ್ಮಕ್ಕೆ ಶಾಂತಿ ಇಲ್ಲ. ಆದ್ದರಿಂದ ಮುಂದುವರಿದು ಅವನು ಹೇಳುವುದಿದು : "ಶೂದ್ರನೊಬ್ಬನು ಮೇಲ್ಜಾತಿಯವರಿಗೆ ಧರ್ಮಬೋಧೆ ಮಾಡಹೊರಟರೆ ಅವನ ಬಾಯಲ್ಲಿ ಮತ್ತು ಕಿವಿಯಲ್ಲಿ ಕಾದ ಎಣ್ಣೆ ಸುರಿಯಬೇಕು (೮.೨೭೨); ಬ್ರಾಹ್ಮಣ ಅಥವಾ ಬೇರೆ ಮೇಲು ಜಾತಿಯವರನ್ನು ಶೂದ್ರನು ಕೈ, ಕಾಲು, ಇವುಗಳ ಪೈಕಿ ಯಾವ ಅಂಗದಿಂದ ಹೊಡೆಯುತ್ತಾನೋ ಆ ಅಂಗವನ್ನು ಕತ್ತರಿಸಿ ಹಾಕಬೇಕು (೮.೨೭೯); ಶೂದ್ರ ಅಥವಾ ಅಂತ್ಯಜನೊಬ್ಬ ಬ್ರಾಹ್ಮಣನ ಜೊತೆ ಒಂದೇ ಆಸನದಲ್ಲಿ ಕೂತರೆ ಅಂಥವನ ಸೊಂಟದ ಮೇಲೆ ಬರೆ ಹಾಕಬೇಕು, ಕುಂಡಿ ಕತ್ತರಿಸಬೇಕು" (೨.೨೮೧). ಮನುವಿನ ವಿಕಟ ಮನಸ್ಸಿನ ಕ್ಷುದ್ರ ಭಾವನೆಯು ಅಷ್ಟಕ್ಕೆ ಮುಕ್ತಾಯವಾಗುವುದಿಲ್ಲ. ಅವನು ಶಿಕ್ಷೆಗಳ ಸಂಶೋಧಕ ಮತ್ತು ಮನೋರೋಗಿ; ಆದ್ದರಿಂದ ಹೇಳುತ್ತಾನೆ : "ಶೂದ್ರನೊಬ್ಬ ಸೊಕ್ಕಿನಿಂದ ಬ್ರಾಹ್ಮಣನ ಮೇಲೆ ಉಗಿದರೆ ಅವನ ತುಟಿ ಕತ್ತರಿಸಬೇಕು; ಮೂತ್ರ ಚೆಲ್ಲಿ ಅವಮಾನಿಸಿದರೆ ಅವನ ಶಿಶ್ನವನ್ನು ಕತ್ತರಿಸಬೇಕು; ಬೇಕೆಂತಲೇ ಬ್ರಾಹ್ಮಣನೆದುರು ಹೂಸಿದರೆ ಅವನ ಗುದವನ್ನು ಕತ್ತರಿಸಬೇಕು" (೨.೨೮೨). ಇಂತಹ ಕುಕೃತ್ಯಗಳನ್ನು ಬ್ರಾಹ್ಮಣನು ಶೂದ್ರನ ಮೇಲೆ ಎಸಗಿದರೆ ಅವನಿಗೇನಾದರೂ ಶಿಕ್ಷೆಯುಂಟೆ? ಅದೂ ಅಷ್ಟೇ ಉಗ್ರ ಮತ್ತು ಕ್ಷುದ್ರ ಆಗಿರುತ್ತದೆಯೇ? ಇನ್ನೊಂದು ಉದ್ಧರಣೆಯನ್ನು ನೋಡಿ: ಶೂದ್ರನು ಮೇಲ್ಜಾತಿಯವನೊಬ್ಬನ ತಲೆಗೂದಲು, ಗಡ್ಡ, ಮೀಸೆ, ಕುತ್ತಿಗೆ, ಪಾದ, ವೃಷಣ, ಹೀಗೆ ಏನನ್ನಾದರೂ ಹಿಡಿದೆಳೆದರೆ ಅಂಥವನ ಕೈ ಕತ್ತರಿಸಬೇಕು (೮.೨೮೩). ಕೆಲವು ಸಮಕಾಲೀನ ರಾಜಕಾರಣಿಗಳು ಇಂಥದೇ ಭಾಷಾ ಪ್ರಯೋಗ ಮಾಡುವುದನ್ನು ಕಂಡಾಗ ಅವರು ಆ ಮಾತುಗಳನ್ನು ಮನುವಿನಿಂದ ಎರವಲು ಪಡೆದಿದ್ದಾರೇನೋ ಎನಿಸಿದರೆ ಅಚ್ಚರಿಯಿಲ್ಲ.

ಪ್ರಜೆಗಳಿಗೆ ರಕ್ಷಣೆ ನೀಡುವ ಸಲುವಾಗಿ ರಾಜನು ಕಳ್ಳರನ್ನು ನಿಗ್ರಹಿಸಬೇಕಾದ್ದು ಅಗತ್ಯ. ಸಿಕ್ಕಿಬಿದ್ದ ಕಳ್ಳರಿಗೆ ಎಂತೆಂತಹ ಶಿಕ್ಷೆ ನೀಡಬಹುದೆಂಬುದನ್ನು ಸಂಕ್ಷಿಪ್ತವಾಗಿ ಸೂಚಿಸಿ, ರಕ್ಷಣೆ ನೀಡಿದ ರಾಜನಿಗೆ ಎಷ್ಟು ಪುಣ್ಯ ಲಭಿಸುತ್ತದೆಂಬುದನ್ನು ಹೇಳುತ್ತಾನೆ. (೮.೩೦೨ ಇತ್ಯಾದಿ). ತೆರಿಗೆ, ಕಂದಾಯ, ದಂಡ, ಸುಂಕ, ಮುಂತಾಗಿ ಧನವನ್ನು ವಸೂಲು ಮಾಡಿಯೂ ಜನರನ್ನು ರಕ್ಷಿಸಲು ವಿಫಲನಾದರೆ ಅಂತಹ ರಾಜನು ನರಕಕ್ಕೆ ಹೋಗುತ್ತಾನೆ (೮.೩೦೮). ಪ್ರಕೃತದಲ್ಲಿ ಈ ಭಾಗ್ಯವನ್ನು ತಮ್ಮದಾಗಿಸಿಕೊಳ್ಳಲು ಪ್ರಪಂಚದ ಎಷ್ಟೊಂದು ದೇಶಗಳ ನಾಯಕರು ಈಗಾಗಲೇ ಅರ್ಹತೆ ಗಳಿಸಿದ್ದಾರಲ್ಲವೆ?

ಮನು ಪ್ರಸ್ತಾಪಿಸುವ ಇನ್ನೊಂದು ವಿಚಾರವು ಶಸ್ತ್ರಪ್ರಯೋಗಕ್ಕೆ ಸಂಬಂಧಿಸಿದ್ದು: "ಹಿರಿದ ಕತ್ತಿಯನ್ನು ಕೈಯಲ್ಲಿ ಹಿಡಿದು ಮೇಲೆರಗಲು ಬರುವವನು ಗುರುವೋ ಬಾಲಕನೋ ಮುದುಕನೋ ಬ್ರಾಹ್ಮಣನೋ ವಿದ್ವಾಂಸನೋ ಹೀಗೆ ಯಾವನೇ ಆಗಿರಲಿ ಅವನನ್ನು ಯಾವ ವಿಚಾರವೂ ಮಾಡದೆ ಕೊಂದುಹಾಕಬೇಕು (೮.೩೫೦ : ...ಆತತಾಯಿನಂ ಆಯಾಂತಂ ಹನ್ಯಾದೇವ ಅವಿಚಾರಯನ್). ಅದರಿಂದ ಹತ್ಯೆಯ ದೋಷವೇನೂ ಇರುವುದಿಲ್ಲ, ಏಕೆಂದರೆ ಪರಸ್ಪರರ ಕೋಪವೇ ಸಂಘರ್ಷಕ್ಕೆ ಕಾರಣವಾದ್ದರಿಂದ ಯಾರಿಗೂ ಶಿಕ್ಷೆ ಇರುವುದಿಲ್ಲ (೮.೩೫೧).

ಎಂಟನೆಯ ಅಧ್ಯಾಯದ ಕೊನೆಯ ಭಾಗವು ಕಾಮುಕತೆ, ಪರಸ್ತ್ರೀ ಸಂಪರ್ಕ, ವರ್ಣಧರ್ಮ, ಮುಂತಾದುವನ್ನು ಪುನರಪಿ ಪ್ರಸ್ತಾಪಿಸುತ್ತದೆ. ವರ್ಣಸಂಕರವು ಸರ್ವಥಾ ಅನಿಷ್ಟವೆಂದು ಮನು ಹೇಳುತ್ತಾನೆ, ಗೀತೆಯೂ ಹೇಳುತ್ತದೆ. ಪರಸ್ತ್ರೀಯ ಸಂಗ ಮಾಡುವವನ ಅಂಗಾಂಗಗಳನ್ನು ಕತ್ತರಿಸಬೇಕೆಂಬುದು ಮನುವಿನ ಆಗ್ರಹ (೮.೩೫೨). ವರ್ಣಸಂಕರವು ಸರ್ವನಾಶಕ್ಕೆ, ಸಂತೋಷದ ನಾಶಕ್ಕೆ, ಕಾರಣವಾಗಿ ಅಧರ್ಮಕ್ಕೆ ಎಡೆಯುಂಟುಮಾಡುತ್ತದೆ (೮.೩೫೩). ವಿವಿಧ ಪ್ರಕಾರಗಳ ಕಾಮುಕತೆಗೆ ಮತ್ತು ಕಾಮುಕತೆಯ ಪ್ರದರ್ಶನಕ್ಕೆ ಬೇರೆ ಬೇರೆ ಶಿಕ್ಷೆಗಳನ್ನು ಮನು ವಿಧಿಸಿದ್ದಾನೆ. ಪರಸ್ತ್ರೀಯರಿಗೆ ಉಡುಗೊರೆಗಳನ್ನು ಕೊಡುವುದು, ಆಲಂಗಿಸಲು ಮುಂದಾಗುವುದು, ಮೈಮೇಲಿನ ಆಭರಣಗಳನ್ನು ಮುಟ್ಟಹೋಗುವುದು, ಅವಳೊಡನೆ ಕುಳ್ಳಿರುವುದು, ಇವೆಲ್ಲಾ "ಪರಸ್ತ್ರೀ ಸಂಗ್ರಹಣ" ಎಂಬ ಅಪರಾಧದ ಆರಂಭಿಕ ಸೋಪಾನಗಳು (೩.೩೫೪). ಪರಸ್ತ್ರೀಯ ಕೆಲವು ಅವಯವಗಳನ್ನು ಸ್ಪರ್ಶಿಸುವುದು, ಅಂತೆಯೇ ತನ್ನ ಅವಯವಗಳನ್ನು ಮುಟ್ಟಲು ಅವಕಾಶ ಕೊಡುವುದು, ಅವೂ ಸ್ತ್ರೀ ಸಂಗ್ರಹಣದ ಭಾಗವೇ (೩೫೮). ಇಂಥ ಪ್ರಸಂಗಗಳನ್ನು ನಿಗ್ರಹಿಸಲು ಮನು ಬದ್ಧನಾಗಿದ್ದಾನೆ. ಅದರಂತೆ "ಅಬ್ರಾಹ್ಮಣನು ಬ್ರಾಹ್ಮಣ ಸ್ತ್ರೀಯನ್ನು ಸಂಗ್ರಹಣದ ಮೂಲಕ ಭೋಗಿಸಿದರೆ ಅವನಿಗೆ ಮರಣದಂಡನೆಯು ಸೂಕ್ತ. ಏನೇ ಇರಲಿ, ನಾಲ್ಕೂ ವರ್ಣದವರು ತಮ್ಮ ತಮ್ಮ ಹೆಂಡಂದಿರನ್ನು ಸದಾಕಾಲ ರಕ್ಷಿಸಿಕೊಳ್ಳಬೇಕು" (೩೫೯). ಸ್ತ್ರೀಯರೊಡನೆ ನಿರಾತಂಕವಾಗಿ ಮಾತನಾಡಬಹುದಾದವರು ಭಿಕ್ಷುಕರು, ಸ್ತುತಿಪಾಠಕರು, ಅಡಿಗೆಯವರು ಮತ್ತು ಯಜ್ಞಗಳಲ್ಲಿ ಪುರೋಹಿತರು (೩೬೧), ಅಷ್ಟೆ. ಪರಸತಿಯರೊಡನೆ ಮಾತನಾಡಲು ನಿಷೇಧವಿಲ್ಲದ್ದು ಒಂದೆರಡು ಹಿನ್ನೆಲೆಗಳಲ್ಲಿ ಮಾತ್ರ : ನಟರು ಮತ್ತು ಗಾಯಕರ ಹೆಂಡಂದಿರು ಮತ್ತು ತನ್ನ ಹೆಂಡತಿಯ ವ್ಯಭಿಚಾರದಿಂದ ಜೀವನ ಹೊರೆಯುವ ಪುರುಷನ ಹೆಂಡತಿ, ಅಷ್ಟೆ (೮.೩೬೨). ನಟರು ಮತ್ತು ಗಾಯಕರ ಬಗ್ಗೆ ಮನುವಿಗೆ ವಿಪರೀತ ಶಂಕೆ ಮತ್ತು ಅಗೌರವವಿದೆಯೆಂಬುದು ಸ್ವತಸ್ಸಿದ್ಧ. ಅವರ ಹೆಂಡತಿಯರೊಂದಿಗೆ ಗುಟ್ಟಾಗಿ ಸಂಭಾಷಿಸುವವರಿಗೆ ರಾಜನು ಜುಲ್ಮಾನೆ ವಿಧಿಸಬೇಕು; ಆದರೆ ಸಂನ್ಯಾಸಿಯರು, ದಾಸಿಯರು, ಬ್ರಹ್ಮಚಾರಿಣಿಯರು, ಮುಂತಾದವರೊಂದಿಗೆ ಗುಟ್ಟಾಗಿ ಸಂಭಾಷಿಸುವವರಿಗೆ ಅಲ್ಪಪ್ರಮಾಣದ ದಂಡ ವಿಧಿಸಿದರೆ ಸಾಕು (೩೬೪), ಮುಂದಿನ ಕೆಲವು ಪದ್ಯಗಳು ಅಕ್ರಮ ಕ್ರಿಯೆ ಮತ್ತು ಅದಕ್ಕೆ ಶಿಕ್ಷೆ, ಎರಡನ್ನೂ ಪ್ರಸ್ತಾಪಿಸಿವೆ; ಆದರೆ ಅವನ್ನು ಇಲ್ಲಿ ಉದ್ಧರಿಸುವುದು ರುಚಿಸುವುದಿಲ್ಲ. ಆಸಕ್ತರು ಗ್ರಂಥವನ್ನು ನೋಡಿ ಗ್ರಹಿಸಬಹುದು (೮.೩೬೫ – ೩೭೨). ಒಂದು ವಿಧಿಯನ್ನು ಮಾತ್ರ ಸ್ವಲ್ಪ ಸಂಕೋಚದಿಂದಲೇ ದಾಖಲಿಸಬೇಕೆನಿಸುತ್ತದೆ : ಕ್ಷತ್ರಿಯನು ಬ್ರಾಹ್ಮಣ ಸ್ತ್ರೀಯನ್ನು ಕೆಡಿಸಿದರೆ ಅವನ ತಲೆಯನ್ನು ಮೂತ್ರ ಹಚ್ಚಿ ಬೋಳಿಸಬೇಕು (೩.೩೭೬). ಇಂತಹ ಪ್ರಸಂಗಗಳು ಜರುಗಿದ್ದಿರಬಹುದು, ಆದರೆ ಉಕ್ತ ಪ್ರಕಾರದಲ್ಲಿ ಕ್ಷತ್ರಿಯರ ತಲೆ ಬೋಳಿಸಿದ ಬಗ್ಗೆ ಇತಿಹಾಸದ ದಾಖಲೆಗಳು ಲಭ್ಯವಿಲ್ಲ!

ಅಧ್ಯಾಯವನ್ನು ಮುಕ್ತಾಯ ಮಾಡುವ ಮುನ್ನ, ಮನು ಮೊದಲೇ ಹೇಳಿದ್ದ ವರ್ಣಧರ್ಮಗಳನ್ನು ಮತ್ತೆ ಉಚ್ಚರಿಸುತ್ತಾನೆ. ಏಕೆಂದರೆ, ಆ ಕರ್ಮಗಳ

ವಿಭಜನೆಯು ಅವನ ಆದರ್ಶ ಸಮಾಜದ ಸುಭದ್ರ ಅಡಿಪಾಯ. ಅದರ ಪ್ರಕಾರ "ಬ್ರಾಹ್ಮಣನು ಯಾವುದೇ ವಿಧದ ಅಪರಾಧವೆಸಗಿರಲಿ, ಯಾವುದೇ ಪಾಪಕ್ರಿಯೆಯಲ್ಲಿ ತೊಡಗಿರಲಿ, ಅವನಿಗೆ ಮರಣದಂಡನೆಯು ಕೂಡದು. ಹೆಚ್ಚೆಂದರೆ ಅವನ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಂಡು ದೇಶದಿಂದ ಅವನನ್ನು ಹೊರಹಾಕಬಹುದು" (೮.೩೮೦), ಅಷ್ಟೆ. "ವೈಶ್ಯನು ವ್ಯಾಪಾರ, ಕೃಷಿ, ಪಶುಪಾಲನೆ, ಲೇವಾದೇವಿ, ಮುಂತಾದುವನ್ನು ಕಸುಬಾಗಿ ಹೊಂದುತ್ತಾನೆ; ಶೂದ್ರನಿಂದ ದ್ವಿಜಾತಿಯವರ ಸೇವೆ ಮಾಡಿಸಬೇಕು" (೩.೮೧). ಶೂದ್ರನಿಗಾದರೋ ಯಾರಿಗೂ ಇಲ್ಲದ 'ಪರಮಸೌಲಭ್ಯ' ನೀಡಲಾಗಿದೆ : "ಕೂಲಿಯನ್ನು ಕೊಟ್ಟೋ, ಕೊಡದೆಯೋ, ಬ್ರಾಹ್ಮಣನು ಶೂದ್ರನಿಂದ ಸೇವೆ ಪಡೆಯಬೇಕು; ಏಕೆಂದರೆ, ಸ್ವಯಂಭೂ ಆದ ಕರ್ತಾರನು ಶೂದ್ರರನ್ನು ಸೃಷ್ಟಿಸಿರುವುದೇ ಬ್ರಾಹ್ಮಣರಲ್ಲಿ ದಾಸ್ಯ ಮಾಡಲಿ, ಎಂದು" (೮.೪೧೩ : ಶೂದ್ರಂ ತು ಕಾರಯೇದ್ದಾಸ್ಯಂ ಕ್ರೀತಮಕ್ರೀತ ಏವ ವಾ। ದಾಸ್ಯಾಯೈವ ಹಿ ಸೃಷ್ಟಃ ಅಸೌ ಬ್ರಾಹ್ಮಣಸ್ಯ ಸ್ವಯಂಭುವಾ॥). ಸೃಷ್ಟಿಕರ್ತನಾದ ಬ್ರಹ್ಮನ ಚಮತ್ಕಾರವು ಅತೀವ ಅಯೋಗ್ಯತನದಿಂದ ಆವೃತ ವಾಗಿದೆಯೆಂಬುದಂತೂ ಸಂಶಯಾತೀತ. "ಶೂದ್ರನನ್ನು ದಾಸ್ಯದಿಂದ ಬಿಡಿಸಲು ಸಾಧ್ಯವೇ ಇಲ್ಲದಂತೆ ಬ್ರಹ್ಮನು ಅವನಿಗೆ ಬಿಡಿಸಲಾಗದ ಗಂಟನ್ನು ಹಾಕಿ ಬಂಧನದಲ್ಲಿರಿಸಿದ್ದಾನೆ; ಸೇವಕ ವೃತ್ತಿಯು ಅವನ ಸಹಜ ಕರ್ತವ್ಯ. ಅವನ ಯಜಮಾನನು ಅವನನ್ನು ಮುಕ್ತನನ್ನಾಗಿಸಿದರೂ ಅವನಿಗೆ ಸೇವಕ ವೃತ್ತಿಯಿಂದ ಬಿಡುಗಡೆ ಇಲ್ಲ (೮.೪೧೪ : ನ ಸ್ವಾಮಿನಾ ನಿಸೃಷ್ಟೋಽಪಿ ಶೂದ್ರೋ ದಾಸ್ಯಾದ್ವಿ ಮುಚ್ಯತೇ। ನಿಸರ್ಗಜಂ ಹಿ ತತ್ ತಸ್ಯ ಕಸ್ತಸ್ಮಾತ್ ತದೋಪಹತಿ॥). ಮನುವಿನ ಈ ಆಕಾಂಕ್ಷೆಯು ಅವನ ಕಾಲದಲ್ಲೇ ಸೊರಗುವ ಸೂಚನೆಗಳಿದ್ದವು. ಆದ್ದರಿಂದಲೇ ಅವನು ಕಟುವಾದ ವಿಧಿಗಳನ್ನು ಸೂಚಿಸುತ್ತಾನೆಂಬುದು ಸ್ವಯಂ ವೇದ್ಯ. ಕಾಲದ ದೃಷ್ಟಿಯಿಂದ ನೋಡಿದರೆ ಮನುಸ್ಮೃತಿಯು ಅಸ್ತಿತ್ವಕ್ಕೆ ಬರುವುದು ಬುದ್ಧನ ಎರಡು ಶತಮಾನಗಳ ನಂತರ. ಶೂದ್ರನ ಸಾಮಾಜಿಕ ಸ್ಥಾನದ ಬಗ್ಗೆ ಮನು ಹೇಳುವ ವಿಧಿಗಳು ಆಗಲೇ ಶಿಥಿಲಗೊಳ್ಳಲಾರಂಭಿಸಿದ್ದವು; ಈಗಂತೂ ಮನುವಿನ ಅನೇಕ ವಿಧಿಗಳು ನಗೆಪಾಟಲಿಗೆ ಗುರಿಯಾಗುವಂತಾಗಿರುವುದು ಸ್ವಾಗತಾರ್ಹ ಬೆಳವಣಿಗೆ.

ಕಡೆಯದಾಗಿ, ದಾಸರು ಏಳು ಬಗೆಯವರು; ಯುದ್ಧದಲ್ಲಿ ಸೋತು ಸೆರೆಸಿಕ್ಕವರು, ಅನ್ನ ಬಯಸಿ ದಾಸರಾದವರು, ಪರಂಪರೆಯಿಂದ ದಾಸವೃತ್ತಿಯಲ್ಲಿ ಇರುವವರು, ಶಿಕ್ಷೆಗೆ ಗುರಿಯಾಗಿ ದಾಸರಾಗಿರುವವರು, ಇತ್ಯಾದಿ (೮.೪೧೫). ದಾಸನ ಹೆಂಡತಿ, ಮಗ ಮತ್ತು ಸ್ವತಃ ದಾಸ, ಈ ಮೂವರೂ ನಿರ್ಧನರಾದವರು; ಅವರ ಹಣವೆಲ್ಲಾ ಅವರ ಒಡೆಯನಿಗೆ ಸಲ್ಲುತ್ತದೆ (೮.೪೧೬). ಯಾವ ಹಿಂಜರಿಕೆಯೂ ಇಲ್ಲದೆ ಒಡೆಯನು ತನ್ನ ದಾಸನ ಧನವನ್ನು ಪಡೆಯ ಬಹುದು, ಏಕೆಂದರೆ ದಾಸನ ಸಂಪತ್ತು ಏನಿದ್ದರೂ ಒಡೆಯನದೇ ಆಗುತ್ತದೆ (೪೧೬ : ... ಯಸ್ಯ ತೇ ತಸ್ಯ ತದ್ಧನಂ). ಅದನ್ನು ಪಡೆಯಲು ಒಡೆಯನು ಹಿಂದುಮುಂದು ನೋಡಬೇಕಾಗಿಲ್ಲ (೪೧೭).

ಒಂದು ಪದ್ಯವನ್ನು ಗಮನಿಸಿ ಎಂಟನೆಯ ಅಧ್ಯಾಯಕ್ಕೆ ಮುಕ್ತಾಯ ಹೇಳೋಣ : "ರಾಜನು ತನ್ನ ರಾಜ್ಯದಲ್ಲಿ ವೈಶ್ಯರು ಮತ್ತು ಶೂದ್ರರಿಂದ ಅವರಿಗೆ ನಿಯುಕ್ತವಾದ ಕೆಲಸಗಳನ್ನು ಮಾಡಿಸುತ್ತಿರಬೇಕು; ಏಕೆಂದರೆ ಆ ಎರಡು ವರ್ಣದವರು ತಮ್ಮ ಸ್ವಜಾತಿಯ ಕರ್ತವ್ಯಗಳನ್ನು ನೆರವೇರಿಸದಿದ್ದರೆ ಜಗತ್ತಿನ ತುಂಬ ಕೋಲಾಹಲ ಉಂಟಾಗುತ್ತದೆ" (೮.೪೧೮ : ವೈಶ್ಯ ಶೂದ್ರೌ ಪ್ರಯತ್ನೇನ ಸ್ವಾನಿ ಕರ್ಮಾಣಿ ಕಾರಯೇತ್। ತಾ ಹಿ ಚ್ಯುತೌ ಸ್ವಕರ್ಮಭ್ಯಃ ಕ್ಷೋಭಯೇತಾಂ ಇದಂ ಜಗತ್॥).

ಅಂತಹ ಕೋಲಾಹಲವನ್ನು ನಾವು ನಿರೀಕ್ಷಿಸಬೇಕು ಮತ್ತು ಸ್ವಾಗತಿಸಬೇಕು; ಏಕೆಂದರೆ ಮಾನವನು ಇತರ ಮಾನವರ ಬಂಧನದಲ್ಲಿ ಉಳಿಯುವುದು ಯಾರಿಗೂ ಶೋಭಿಸುವುದಿಲ್ಲ. ಎಲ್ಲರೂ ಸಮಾನಸ್ಕಂಧರಾಗಿ ಅಕ್ಕಪಕ್ಕದಲ್ಲಿ ನಿಂತು ಜೀವಿಸಬೇಕು, ಒಬ್ಬರು ಇನ್ನೊಬ್ಬರ ಹೆಗಲೇರಿ ಹಿಂಸಿಸಿ ಸುಖಿಸುವುದು ಅಮಾನವೀಯವಾದ್ದು.

೧೯೩೦ರ ದಶಕದಲ್ಲೊಮ್ಮೆ ಜಮ್‌ಶೆಡ್‌ಪುರದ ಟಾಟಾ ಉಕ್ಕು ಕಾರ್ಖಾನೆಯಲ್ಲಿ ಮಾಲಿಕ–ಕಾರ್ಮಿಕರ ನಡುವೆ ಸಂಘರ್ಷವೇರ್ಪಟ್ಟಿತ್ತು. ಮುಂಬೈನ ಕಾರ್ಮಿಕ ನಾಯಕನಾಗಿ ಪ್ರಸಿದ್ಧಿ ಪಡೆದಿದ್ದ ಎಸ್. ಎ. ಡಾಂಗೆಯನ್ನು ಕಾರ್ಮಿಕರು ಅಲ್ಲಿಗೆ ಬರಮಾಡಿಕೊಂಡರು. ಸಂಧಾನದ ಸಮಯದಲ್ಲಿ ಕಾರ್ಖಾನೆಯ ಮಾಲಿಕ ಪ್ರತಿನಿಧಿ ಡಾಂಗೆಗೆ ಹೇಳಿದನಂತೆ, "ನೋಡಿ, ನಮ್ಮ ಊರಲ್ಲಿ ಸೂರ್ಯನು ಯಾವಾಗಲೂ ಪ್ರಕಾಶಿಸುತ್ತಾನೆ; ಬೆಳಿಗ್ಗೆ ತಿಳಿದೇ ಇದೆ, ಆದರೆ ರಾತ್ರಿಯ ವೇಳೆ ನಮ್ಮ ಕುಲುಮೆಗಳ ಅಗ್ನಿಕುಂಡ ಸೂರ್ಯನಷ್ಟೇ ಪ್ರಕಾಶಮಾನ," ಎಂದು. ಸಂಧಾನ ಮುರಿದುಬಿದ್ದ ಮಾರನೆಯ ದಿನ ಕಾರ್ಮಿಕರನ್ನುದ್ದೇಶಿಸಿ ಮಾತನಾಡುತ್ತಾ ಡಾಂಗೆ ಹೇಳಿದ್ದಿದು : "ಈ ಊರಿನಲ್ಲಿ ರಾತ್ರಿಯಲ್ಲೂ ಸೂರ್ಯನು ಪ್ರಕಾಶಿಸುತ್ತಾನೆಂದು ನಿಮ್ಮ ಮಾಲಿಕರ ಪ್ರತಿನಿಧಿ ಹೇಳಿದರು. ಅದು ನಿಜ, ಏಕೆಂದರೆ ರಾತ್ರಿಯ ಪಾಳಿಯಲ್ಲಿ ಕೆಲಸ ಮಾಡುವ ನೀವು ಸೂರ್ಯನನ್ನೇ ಸೃಷ್ಟಿಸಿಬಿಡುತ್ತೀರಿ. ಇಂದು ರಾತ್ರಿಯಿಂದ ನಾವು ಮುಷ್ಕರ ಹೂಡೋಣ. ಸೂರ್ಯನ ಪ್ರಕಾಶವನ್ನು ಈ ಊರಿಗೆ ಯಾರು ತರಿಸುತ್ತಿದ್ದಾರೆಂಬುದನ್ನು ಮಾಲಿಕರಿಗೆ ಮನದಟ್ಟು ಮಾಡಿಕೊಡೋಣ."

ಈ ಮಾತನ್ನು ವರ್ತಮಾನದ ಮನುಗಳ ಕಿವಿಗಳಿಗೆ ಹಾಕಬೇಕು, ಆಗ ಸಮಕಾಲೀನ ನೂತನ ಮನುಸ್ಮೃತಿಯ ರಚನೆಗೆ ಕೈಹಾಕಲು ಸಾಧ್ಯವಾಗುತ್ತದೆ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿ ನಗರ, ಬನಶಂಕರಿ ೩ನೇ ಹಂತ, ಬೆಂಗಳೂರು–೫೬೦ ೦೮೫

## ಓದುಗರಲ್ಲೊಂದು ವಿಶೇಷ ಮನವಿ

'ಹೊಸತು' ಪತ್ರಿಕೆ ಜಾಹಿರಾತುಗಳಿಗಿಂತ ಹೆಚ್ಚಾಗಿ ಚಂದಾದಾರರ ಮೇಲೆ ಅವಲಂಬಿಸಿರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/– ಹಣ ನೀಡಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ / ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ 'ಹೊಸತು' ಪತ್ರಿಕೆಯನ್ನು ಉಚಿತವಾಗಿ ಕಳಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ.

ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು 'ಹೊಸತು' ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

– ಪ್ರಕಾಶಕ

ಶ್ರೀ ಮಾವಳ್ಳಿ ಶಂಕರ, ಕರ್ನಾಟಕದ ದಲಿತ ಚಳುವಳಿಯ ಪ್ರಮುಖ ನಾಯಕ. ರಾಜ್ಯದಲ್ಲಿ ದಲಿತ ಚಳುವಳಿ ಸಂಘಟನಾ ರೂಪ ಪಡೆದು ಕ್ರಿಯಾಶೀಲವಾದಾಗ ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದ ಇವರು ಮುಂದೆ ಚಳುವಳಿಯ ಪೂರ್ಣಾವಧಿ ಕಾರ್ಯಕರ್ತರಾಗಿ, ಇಂದು ನಾಯಕರಾಗಿ ಬೆಳೆದಿದ್ದಾರೆ. ಮೊದಮೊದಲು ಮಾರ್ಕ್ಸ್‌ವಾದಿ ಚಿಂತನೆಗಳ ಪ್ರಭಾವಕ್ಕೊಳಗಾಗಿ ಎಡಪಂಥೀಯ ಚಳುವಳಿಗಳಲ್ಲಿ ಭಾಗವಹಿಸುತ್ತಲೇ ಡಾ॥ ಬಾಬಾಸಾಹೇಬ ಅಂಬೇಡ್ಕರ್ ಅವರ ಚಿಂತನೆ, ಹೋರಾಟಗಳ ಅಧ್ಯಯನಗಳಿಂದ ಒಬ್ಬ ದಲಿತ ಚಳುವಳಿಯ ನಾಯಕನಾಗಿ ಬೆಳೆದವರು. ಬೆಂಗಳೂರಿನ ಮಾವಳ್ಳಿಯಲ್ಲಿ ಬಡ ಕುಟುಂಬದಲ್ಲಿ ಜನಿಸಿ, ವಿದ್ಯಾರ್ಥಿ ಚಳುವಳಿಗಾರನಾಗಿ, ಸಾಂಸ್ಕೃತಿಕ ರಂಗದ ಕಾರ್ಯಕರ್ತನಾಗಿ, ನ್ಯಾಯವಾದಿಯಾಗಿ, ಪತ್ರಕರ್ತನಾಗಿ ಕೆಲಸ ಮಾಡಿ ಬಹುಮುಖಿ ವ್ಯಕ್ತಿತ್ವವನ್ನು ರೂಪಿಸಿಕೊಂಡ ಶ್ರೀ ಮಾವಳ್ಳಿ ಶಂಕರ ಇಂದು ರಾಜ್ಯದ ದಲಿತ ಚಳುವಳಿಯ ನಾಯಕನಾಗಿ ನಿರಂತರ ಹೋರಾಡುತ್ತಿದ್ದಾರೆ. ಎಲ್ಲ ಜನಪರ ಚಳುವಳಿಗಳೂ ಆಂತರಿಕ ಭಿನ್ನ ಮತವನ್ನು ತೊರೆದು ವರ್ಣ–ವರ್ಗ ಹೋರಾಟಗಳನ್ನು ಏಕಕಾಲಕ್ಕೆ ನಡೆಸುತ್ತಲೇ ಶೋಷಣಾಮುಕ್ತ ಸಮಾಜ ನಿರ್ಮಾಣಕ್ಕೆ ಶ್ರಮಿಸಬೇಕೆಂದು ಆಶಿಸುವ ಆ ನಿಟ್ಟಿನಲ್ಲಿ ಪ್ರಯತ್ನಿಸುತ್ತಲೇ ಇರುವ ಶ್ರೀ ಮಾವಳ್ಳಿ ಶಂಕರ ಅವರ ಜೊತೆ ಡಾ॥ ಜಿ. ರಾಮಕೃಷ್ಣ , ಡಾ॥ ಎನ್. ಗಾಯತ್ರಿ, ಸಿ. ಆರ್. ಕೃಷ್ಣರಾವ್ ಹಾಗೂ ಡಾ॥ ಸಿದ್ದನಗೌಡ ಪಾಟೀಲ ಅವರು ನಡೆಸಿದ ಸಂದರ್ಶನದಲ್ಲಿನ ವಿಚಾರಗಳು ಇಲ್ಲಿವೆ.

– ಸಂ.

# ಅಧಿಕಾರವೇ ಅಂತಿಮವಲ್ಲ...

## – ಮಾವಳ್ಳಿ ಶಂಕರ




**ಸಂದರ್ಶಕರು**

**ಡಾ॥ ಜಿ. ರಾಮಕೃಷ್ಣ, ಡಾ॥ ಎನ್. ಗಾಯತ್ರಿ,**
**ಸಿ. ಆರ್. ಕೃಷ್ಣರಾವ್, ಡಾ॥ ಸಿದ್ದನಗೌಡ ಪಾಟೀಲ**

**ಸಂದರ್ಶನ ಚಿತ್ರಗಳು : ಆನಂದ**

**ಹೊಸತು :** ಕರ್ನಾಟಕದ ದಲಿತ ಚಳುವಳಿಗಳ ಪ್ರಮುಖ ನಾಯಕರಾದ ನಿಮ್ಮನ್ನು, ಅಂಬೇಡ್ಕರ್ ದಿನಾಚರಣೆಯ ಸಂದರ್ಭದಲ್ಲಿ 'ಹೊಸತು' ಬಳಗದ ಪರವಾಗಿ ಅಭಿನಂದಿಸುತ್ತೇವೆ. ನಿಮ್ಮ ಹೋರಾಟಗಳು ಯಶಸ್ವಿಯಾಗಲೆಂದು ಶುಭ ಕೋರುತ್ತೇವೆ.

**ಶಂಕರ :** ಧನ್ಯವಾದ. ವಿದ್ಯಾರ್ಥಿದೆಸೆಯಿಂದಲೂ ಕೆಂಬಾವುಟ, ಐಕ್ಯರಂಗ, ಸಮುದಾಯ ವಾರ್ತಾ ಪತ್ರ, ಹೊಸತು ಇಂಥ ಪತ್ರಿಕೆಗಳ ಓದುಗನಾಗಿ ಚಳುವಳಿಗಳಲ್ಲಿ ಭಾಗವಹಿಸಿದವನು ನಾನು. ನನ್ನಂಥ ಕಾರ್ಯಕರ್ತರಿಗೆ ಇಂಥ ಪತ್ರಿಕೆಗಳೇ ವೈಚಾರಿಕ ಆಯುಧಗಳೆಂದು ಭಾವಿಸಿಕೊಂಡಿದ್ದೇನೆ. ಪ್ರಸ್ತುತ 'ಹೊಸತು' ಪತ್ರಿಕೆ ಹೊಸತಲೆಮಾರಿನ ಯುವಕರಿಗೆ ಹೊಸ ಚಿಂತನೆಗಳನ್ನು ಬಿತ್ತುವ ಕೆಲಸ ಮಾಡ್ತಾ ಇದೆ. ಹೊಸತು ಬಳಗಕ್ಕೆ ಧನ್ಯವಾದ.

**ಹೊಸತು :** ಪ್ರಸ್ತುತ ಸಂದರ್ಭದಲ್ಲಿ ದಲಿತ ಚಳುವಳಿಯ ಆದ್ಯತೆಗಳೇನು?

**ಶಂಕರ :** ಇಂದು ದಲಿತ ಚಳುವಳಿ ಒಂದು ಸಂಕ್ರಮಣ ಘಟ್ಟದಲ್ಲಿ ಬಂದು ನಿಂತಿದೆ. ಕಳೆದ ಶತಮಾನದ ಅರವತ್ತರ ದಶಕದ ಮಧ್ಯ ಭಾಗ ಮತ್ತು ಎಪ್ಪತ್ತರ ಆರಂಭದಲ್ಲಿ ದಲಿತ ಚಳುವಳಿಯ ಮುಂದೆ ಇದ್ದ ಪ್ರಮುಖ ವಿಷಯಗಳೆಂದರೆ ದಲಿತ ಜನಾಂಗದ ಅವಮಾನಗಳು ಮತ್ತು ಅವರ ಮೇಲೆ ನಡೆಯುತ್ತಿದ್ದ ದೌರ್ಜನ್ಯಗಳು. ಇಂಥ ಅವಮಾನ ಮತ್ತು ದೌರ್ಜನ್ಯಗಳನ್ನು ಕೇಂದ್ರೀಕರಣ ಮಾಡಿಕೊಂಡು ದಲಿತ ಚಳುವಳಿ ಆರಂಭವಾಯಿತು. ಆದರೆ ಇವತ್ತು ದೇಶದಲ್ಲಿ ಅನೇಕ ರೀತಿಯ ಬದಲಾವಣೆಗಳನ್ನು ನಾವು ಕಾಣ್ತಾ ಇದೀವಿ. ಜಾಗತೀಕರಣ, ನವಉದಾರವಾದ, ಫ್ಯಾಸಿಸಂನ ವಿವಿಧ ವಿಕಾರಗಳು ನಮ್ಮ ಮುಂದಿವೆ. ದಲಿತ ಚಳುವಳಿ ಹಿಂದಿನ ತನ್ನ ಹೋರಾಟಗಳ ಸತ್ವವನ್ನು ಉಳಿಸಿ ಕೊಳ್ಳುತ್ತಲೇ ಇಂದಿನ ಹೊಸ ಸಮಸ್ಯೆ, ಸವಾಲುಗಳನ್ನು ಎದುರಿಸಬೇಕಾಗಿದೆ ಎನ್ನುವುದು ನನ್ನ ಅಭಿಪ್ರಾಯ. ಇಂದಿಗೂ ದಲಿತ ಜನಾಂಗ ಅವಮಾನ, ದೌರ್ಜನ್ಯಗಳನ್ನು ಅನುಭವಿಸುತ್ತಲೇ ಹೊಸ ರೀತಿಯ ಶೋಷಣೆಗೊಳಗಾಗುತ್ತಿದೆ.

**ಹೊಸತು :** ಇಂಥ ಸವಾಲುಗಳನ್ನು ಎದುರಿಸೋಕೆ ತಾತ್ವಿಕವಾಗಿ, ಸಂಘಟನಾತ್ಮಕವಾಗಿ ದಲಿತ ಚಳುವಳಿಗಾರರಾಗಿ ನಿಮ್ಮ ತಯಾರಿ ಏನು?

**ಶಂಕರ :** ನಾನು ವಿದ್ಯಾರ್ಥಿಯಾಗಿದ್ದಾಗಲೇ ಈ ಚಳುವಳಿಗಳಲ್ಲಿ ಭಾಗ ವಹಿಸಿದವನು. ಮೊದಲಮೊದಲು ಮಾರ್ಕ್ಸ್‌ವಾದ ನನ್ನ ಮೇಲೆ ಆಳವಾದ ಪ್ರಭಾವವನ್ನು ಬೀರಿತು. ಹಲವಾರು ಮಾರ್ಕ್ಸ್‌ವಾದಿ ಚಿಂತಕರು ನಮ್ಮ ಹಟ್ಟಿಗೆ ಬಂದು ನಮಗೆ ಪಾಠ ಮಾಡುತ್ತಿದ್ದರು. ವಿದ್ಯಾರ್ಥಿ, ಕಾರ್ಮಿಕ, ಸಮುದಾಯ, ಬಂಡಾಯ ಸಾಹಿತ್ಯ ಸಂಘಟನೆ, ಹೀಗೆ ಎಲ್ಲ ಎಡಪಂಥೀಯ ಸಾಂಸ್ಕೃತಿಕ, ಸಾಹಿತ್ಯಿಕ, ರಾಜಕೀಯ ಚಳುವಳಿಗಳಲ್ಲಿ ಭಾಗವಹಿಸುತ್ತಲೇ ನನಗೊಂದು ಬದ್ಧತೆ ಬಂತು. ನಂತರ ಅಂಬೇಡ್ಕರ ಅವರ ಚಿಂತನೆ ಹೋರಾಟಗಳು ನನ್ನ ಮೇಲೆ ತೀವ್ರವಾದ ಪರಿಣಾಮವನ್ನುಂಟುಮಾಡಿದವು. ಭಾರತದ ಜಾತಿ ವ್ಯವಸ್ಥೆಯ ಕ್ರೌರ್ಯವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಯಿತು. ಮುಂದೆ ನಾನು ಸರಕಾರಿ ವಿಜ್ಞಾನ ಕಾಲೇಜಿನಲ್ಲಿ ಓದುವಾಗ ಹಾಸ್ಟೆಲ್‌ನಲ್ಲಿದ್ದೆ. ಆಗ ದೇವನೂರ ಮಹಾದೇವ, ಸಿದ್ಧಲಿಂಗಯ್ಯ, ಬಿ. ಕೆ. ಕೃಷ್ಣಪ್ಪ ಮುಂತಾದ ದಲಿತ ಹೋರಾಟಗಾರರ ಮಾತುಗಳನ್ನು ಕೇಳಿ ಗಟ್ಟಿಗೊಳ್ಳುತ್ತಿದ್ದೆವು. ರಾತ್ರಿ ಹಳ್ಳಿಗಳಿಗೆ ಹೋಗಿ ದಲಿತಕೇರಿಯಲ್ಲಿ ಹಾಡು, ಬೀದಿನಾಟಕ, ಸಭೆ ಮುಂತಾದ ಕಾರ್ಯಕ್ರಮ ಮಾಡುತ್ತಿದ್ದೆವು. ಇವೆಲ್ಲವೂ ನಮ್ಮನ್ನು ತಾತ್ವಿಕವಾಗಿ, ಸಂಘಟನಾತ್ಮಕವಾಗಿ ಚಳುವಳಿಯಲ್ಲಿ ಬದ್ಧರಾಗುವಂತೆ ಮಾಡಿದವು. ಇಂದು ಅಂಥ ಚಿಂತನೆ, ಚಟುವಟಿಕೆ ಬೇಕಾಗಿದೆ. ವರ್ಗ ಹೋರಾಟ, ವರ್ಣ ಹೋರಾಟ ಎಂದು ನೋಡಬೇಕಾಗಿಲ್ಲ. ಬಾಬಾಸಾಹೇಬ ಜಾತಿ, ವರ್ಗ ಒಂದೇ ನಾಣ್ಯದ ಎರಡು ಮುಖಗಳು ಎಂದು ಹೇಳಿದ್ದಾರೆ. ಬ್ರಾಹ್ಮಣ್ಯ ಮತ್ತು ಬಂಡವಾಳದ ಅಪಾಯಗಳ ಕುರಿತು ಹೇಳಿದ್ದಾರೆ. ಪ್ರಸ್ತುತ ಸಂದರ್ಭದಲ್ಲಿ ಎಲ್ಲ ಜನಪರ ಚಳುವಳಿಗಳು ಒಂದಾಗಬೇಕಾದ ಅವಶ್ಯಕತೆ ಇದೆ. ದಲಿತ ಚಳುವಳಿಗಾರರು ಅಂಬೇಡ್ಕರ್ ಅವರನ್ನು ಗಂಭೀರವಾಗಿ ಓದಬೇಕಿದೆ. ತಾತ್ವಿಕ ನೆಲೆಗಟ್ಟನ್ನು ಗಟ್ಟಿಮಾಡಿಕೊಳ್ಳಬೇಕಿದೆ.

ಕೇವಲ ಆರಾಧನೆ ಸಲ್ಲದು. ಆರಾಧನೆ ಸರ್ವಾಧಿಕಾರಕ್ಕೆ ತಳ್ಳುತ್ತದೆ ಎಂದು ಅಂಬೇಡ್ಕರ್ ಅವರೇ ಹೇಳಿದ್ದಾರೆ. ಇಂದು ದಲಿತ ಚಳುವಳಿ ತನ್ನ ನೆಲೆಯನ್ನು ವಿಶಾಲ ಗೊಳಿಸಿಕೊಳ್ಳಬೇಕಿದೆ. ಯಾವುದೇ ಜನಪರ, ಜೀವಪರ, ಮಾನವೀಯ ಸಿದ್ಧಾಂತಗಳನ್ನು ಒಳಗೊಳ್ಳಬೇಕಿದೆ. ಪ್ರತ್ಯೇಕತೆಯನ್ನು ತೊಡೆದು ತನ್ನ ಸಿದ್ಧಾಂತ ತತ್ವಗಳೊಂದಿಗೇ ಇತರ ಜೀವಪರ ಚಿಂತನೆ, ಚಳುವಳಿಗಳ ಜೊತೆಗೂಡಿ ಹೋರಾಡುವುದೇ ಇಂದಿನ ಸಂದರ್ಭದ ಅವಶ್ಯಕತೆ. ಆ ಪ್ರಯತ್ನವನ್ನು ನಾವು ಮಾಡುತ್ತಿದ್ದೇವೆ.

**ಹೊಸತು :** ಕಳೆದ ೨೫–೩೦ ವರ್ಷದಿಂದ ನಿಮ್ಮ ಚಳುವಳಿಯನ್ನು ನೋಡಿದ್ದೇವೆ. ನಿಮ್ಮ ಅನುಭವದ ಹಿನ್ನೆಲೆಯಲ್ಲಿ ದಲಿತ ಚಳುವಳಿಯನ್ನು ಹೇಗೆ ಮಾಪನ ಮಾಡುತ್ತೀರಿ?

**ಶಂಕರ :** ನಾನು ಬೆಂಗಳೂರಿನ ಗ್ಯಾಸ್ ಕಾಲೇಜ್‌ನಲ್ಲಿ ಬಿ.ಎಸ್.ಸಿ. ಓದಿದೆ. ಆ ಸಂದರ್ಭದ ಚಳುವಳಿ ತುಂಬ ವಿಶಾಲವಾಗಿತ್ತು. ನಾವು ಕೇವಲ ದಲಿತ ಚಳುವಳಿ ಅಂತ ನೋಡಲಿಲ್ಲ. ಹಳ್ಳಿಯ ಕೇರಿಗಳಿಗೆ ಹೋಗಿ ಚಟುವಟಿಕೆ ನಡೆಸುತ್ತಲೇ ನಗರದ ಕಾರ್ಮಿಕ ಚಳುವಳಿಗಳಲ್ಲಿಯೂ ನಾನು ಭಾಗವಹಿಸಿದೆ. ಬಿಸ್ಕೆಟ್ ಫ್ಯಾಕ್ಟರಿ ಹೋರಾಟ, ತಾತಗುಣಿ ಎಸ್ಟೇಟ್ ಹೋರಾಟ ಹೀಗೆ ಹಲವಾರು ಹೋರಾಟಗಳಲ್ಲಿ ಭಾಗವಹಿಸಿದ್ದೆ. ಸಮುದಾಯದ ಬೀದಿನಾಟಕಗಳಾದ 'ಪತ್ರಿಸಂಗಪ್ಪನ ಕೊಲೆ', ಸಿದ್ಧಲಿಂಗಯ್ಯನವರ 'ಪಂಚಮ', 'ಅಲ್ಲೇ ಕುಂತವ್ರೆ' ಮುಂತಾದ ನಾಟಕಗಳಲ್ಲಿ ನಾನು ಕಲಾವಿದನಾಗಿ ಭಾಗವಹಿಸಿದೆ. ನಾನು ಪಿ.ಯು.ಸಿ. ಓದುವಾಗ ಸಶಸ್ತ್ರ ಹೋರಾಟದ ವಿಧಾನಕ್ಕೆ ಆಕರ್ಷಿತನಾಗಿದ್ದೆ, ಗದ್ದರ್ ಅವರ ಹಾಡುಗಳಿಂದ ಪ್ರಭಾವಿತನಾಗಿದ್ದೆ. ಕ್ರಾಂತಿ ಆಗುತ್ತದೆಂಬ ಹುಮ್ಮಸ್ಸಿನಲ್ಲಿದ್ದೆ. ಅದೇ ಸಂದರ್ಭದಲ್ಲಿ ಯಾವುದು ಸರಿಯಾದ ಮಾರ್ಗ ಎಂಬ ಗೊಂದಲಗಳೂ ಇದ್ದವು. ನಾನು ಬಿ.ಎಸ್.ಸಿ. ಮುಗಿಸಿದಾಗ ಅಂಬೇಡ್ಕರ್ ಓದು ಹಾಗೂ ದಲಿತ ಚಳುವಳಿಯಲ್ಲಿನ ಭಾಗವಹಿಸುವಿಕೆ ನನ್ನನ್ನು ಪೂರ್ಣಾವಧಿ ಕಾರ್ಯಕರ್ತನಾಗಲು ಪ್ರೇರೇಪಿಸಿತು. ಆಗ ನನಗೆ ಉದ್ಯೋಗದ ಅವಕಾಶಗಳೂ ಬಂದವು. ದಲಿತ ಚಳುವಳಿ ಆರಂಭದ ಘಟ್ಟದಲ್ಲಿ ಜಾಗೃತ ದಲಿತ ನೌಕರರ ನಾಯಕತ್ವದಲ್ಲಿಯೇ ನಡೆಯಿತು. ಎರಡನೇ ಹಂತದಲ್ಲಿ ಪೂರ್ಣಾವಧಿ ಕಾರ್ಯಕರ್ತರ ಅವಶ್ಯಕತೆ ಇತ್ತು. ಆಗ ನಾನು ಉದ್ಯೋಗಕ್ಕೆ ಹೋಗದೆ ಚಳುವಳಿಯ ಪೂರ್ಣಾವಧಿ ಕಾರ್ಯಕರ್ತನಾದೆ. ಮುಂದೆ ಕಾನೂನು ಪದವಿ ಪಡೆದು ಒಂದೆರಡು ವರ್ಷ ವಕೀಲಿ ವೃತ್ತಿಯನ್ನೂ ಮಾಡಿದೆ. ಆದರೆ ದಲಿತ ಚಳುವಳಿಗೆ ಪೂರ್ಣಾವಧಿಯಾಗಿ ತೊಡಗಿಸಿಕೊಳ್ಳಬೇಕೆಂಬ ನನ್ನ ಆಂತರಿಕ ಒತ್ತಡದಿಂದ ವಕೀಲಿ ವೃತ್ತಿಯನ್ನೂ ಬಿಟ್ಟು ಪೂರ್ಣಾವಧಿಯಾಗಿ ಚಳುವಳಿಯಲ್ಲಿ ತೊಡಗಿಸಿಕೊಂಡೆ. ಜನರ ಚಳುವಳಿ ಮುಖ್ಯ, ಅವರ ಭಾಗವಹಿಸುವಿಕೆ ಮುಖ್ಯ. ಜನರನ್ನು ಸಂಘಟಿಸಬೇಕೆಂಬ ತೀರ್ಮಾನಕ್ಕೆ ಬಂದೆ. ಆಗ ಅಂಬೇಡ್ಕರ್ ಅವರ ಓದು ನನ್ನನ್ನು ಮುಖ್ಯ ವಾಹಿನಿಗೆ ಬರುವಂತೆ ಮಾಡಿತು. ಹಾಗಂತ ನಾನು ಎಡಪಂಥೀಯ ಸಿದ್ಧಾಂತಗಳ ಓದನ್ನು ಬಿಡಲಿಲ್ಲ. ಕಮ್ಯುನಿಸ್ಟ್ ಚಿಂತಕರಾದ ಸರ್ದೇಸಾಯಿ, ಗೋದಾವರಿ ಪರುಳೇಕರ, ರಣದಿವೆ, ನಿರಂಜನ ಮುಂತಾದವರ ಕೃತಿಗಳನ್ನು ಓದಿದೆ. ಈ ಎಲ್ಲ ಓದುಗಳು ನನ್ನನ್ನು ಹೋರಾಟ, ಚಿಂತನೆ ಎರಡೂ ಕಡೆ ಗಟ್ಟಿಯಾಗುವಂತೆ ಮಾಡಿತು. ಅಂಬೇಡ್ಕರ್ ಅವರು ಹೇಳಿದ ಹಾಗೆ ಬ್ರಾಹ್ಮಣ್ಯ ಮತ್ತು ಬಂಡವಾಳದ ದೌರ್ಜನ್ಯದ ವಿರುದ್ಧದ ಹೋರಾಟ ಅವಶ್ಯಕವೆಂದು ಮನಗಂಡೆ.

**ಹೊಸತು :** ದಲಿತ ಸಂಘರ್ಷ ಸಮಿತಿ ಒಂದಾಗಿದ್ದ ಸಂದರ್ಭದಲ್ಲಿ ನಿಮ್ಮ ನಿಲುವಿಗೆ ಬೆಂಬಲವಿತ್ತೇ?



**ಶಂಕರ :** ಆರಂಭದಲ್ಲಿ ದಲಿತ ಸಂಘರ್ಷ ಸಮಿತಿ ಯಾವುದೇ ಒಂದು ವಾದಕ್ಕೆ ಕಟ್ಟುಬಿದ್ದಿರಲಿಲ್ಲ. ಮಾರ್ಕ್ಸ್, ಗಾಂಧಿ, ಲೋಹಿಯಾ, ಅಂಬೇಡ್ಕರ್ ಹೀಗೆ ಯಾರ ಒಬ್ಬರ ಚಿಂತನೆಗೂ ಸೀಮಿತವಾಗಿರಲಿಲ್ಲ. ಆದರೆ ಅಂಬೇಡ್ಕರ್ ಅವರನ್ನು 'ಐಕಾನ್' ಆಗಿ ಸ್ವೀಕರಿಸಿತ್ತು. ದೇವನೂರ ಮಹಾದೇವ, ಬಿ. ಕೃಷ್ಣಪ್ಪ, ಸಿದ್ಧಲಿಂಗಯ್ಯ, ರಾಯಚೂರು, ಕೋಲಾರದ ಸಂಗಾತಿಗಳು ಇಂಥವರೆಲ್ಲರೂ ಒಂದೇ ರೀತಿಯ ಚಿಂತಕರಲ್ಲ. ಆದರೆ ಅವರೆಲ್ಲರೂ ಚಳುವಳಿ ಗಟ್ಟಿಗೊಳ್ಳಲು ಶ್ರಮಿಸಿದರು. ಅನೇಕ ವಿಚಾರಧಾರೆಗಳು ಅಲ್ಲಿದ್ದವು.



**ಹೊಸತು :** ದಲಿತ ಚಳುವಳಿಯ ಒಡಕಿಗೆ ತಾತ್ವಿಕ ಭಿನ್ನತೆ ಕಾರಣವೇ?

**ಶಂಕರ :** ಹೌದು, ತಾತ್ವಿಕ ಭಿನ್ನತೆ ಕಾರಣ. ವ್ಯಕ್ತಿಗತ ಕಾರಣವನ್ನು ಕೆಲವರು ಹೇಳ್ತಾರೆ. ನನಗೆ ಹಾಗನ್ನಿಸುವುದಿಲ್ಲ. ನಾನು ಪ್ರಾಥಮಿಕ ಹಂತದಿಂದ ದಲಿತ ಸಂಘಟನೆಯನ್ನು ನೋಡಿದೀನಿ. ಮೊದಮೊದಲು ಸಣ್ಣ ಪ್ರಮಾಣದಲ್ಲಿ ಬೇರೆಬೇರೆ ಸಿದ್ಧಾಂತಗಳ ಪ್ರಭಾವ ಸಂಘಟನೆಯ ಮೇಲಿದ್ದದ್ದು ನಿಜ. ರಾಜ್ಯದಲ್ಲಿ ಕಾಂಗ್ರೆಸ್ ವಿರೋಧಿ ಸರಕಾರ, ಜನತಾರಂಗ, ಜನತಾಪಕ್ಷ ಬಂದಾಗ ನಾವೆಲ್ಲ ಎಡ ಮತ್ತು ಪ್ರಜಾಸತ್ತಾತ್ಮಕ ಶಕ್ತಿಗಳಿಗೆ ಬೆಂಬಲಿಸಬೇಕು ಎಂದು ತೀರ್ಮಾನಿಸಿದ್ವಿ. ದಲಿತ ಸಮುದಾಯದಲ್ಲಿ ಈ ತೀರ್ಮಾನ ಒಂದು ಪ್ರಮುಖ ಸ್ಥಿತ್ಯಂತರವಾಗಿತ್ತು. ಆದರೆ ಜನತಾಪಕ್ಷ ಒಂದು ಫ್ಯೂಡಲ್‌ಗಳ ಪಕ್ಷವಾಗಿತ್ತು. ಸಾಮಾನ್ಯವಾಗಿ ದಲಿತ ಸಮುದಾಯ ಕಾಂಗ್ರೆಸ್‌ನ ಮತದಾರರು. ದಲಿತ ಸಂಘರ್ಷ ಸಮಿತಿ ಕಾಂಗ್ರೆಸ್‌ಗೆ ಮತ ನೀಡಬಾರದು ಅಂತ ತೀರ್ಮಾನಿಸಿದಾಗ ನನ್ನ ತಾಯಿಯಂಥ ಸಾಮಾನ್ಯ ಮನೆಕೆಲಸದ ಮಹಿಳೆಯೂ ಬೇಸರಿಸಿಕೊಂಡಂಥ ಘಟನೆಗಳು ಸಾಕ್ಷಿವೆ. ಸಿದ್ಧಲಿಂಗಯ್ಯನವರು ಹೆಗಡೆಯವರ ಜೊತೆ ಹೋದಾಗ ಭಿನ್ನಾಭಿಪ್ರಾಯಗಳು ನಮ್ಮ ಸಂಘಟನೆಯಲ್ಲಿ ಬಂದವು. ಆದರೆ ಸಂಘಟನೆಯ ಮೇಲೆ ಅಂಥ ಪ್ರಭಾವವೇನೂ ಆಗಿಲ್ಲ. ೧೯೯೧ರಲ್ಲಿ ಜನಕಲಾ ಮೇಳ ನಡೆಸಿದಾಗ ಸಮತಾ ಪಕ್ಷ ಸ್ಥಾಪಿಸಬೇಕೆಂದು ತೀರ್ಮಾನಿಸಿದಾಗ ಸಂಘಟನೆ ಒಂದಾಗಿಯೇ ಸ್ಪಂದಿಸಿತು. ಆದರೆ ಅದು ಜಾರಿಗೆ ಬರಲಿಲ್ಲ. ಮುಂದೆ ಬಿ.ಎಸ್.ಪಿ. ಆರಂಭವಾದಾಗ ದಲಿತ ಸಂಘರ್ಷ ಸಮಿತಿ ಒಮ್ಮನಸ್ಸಿನಿಂದ ಬೆಂಬಲಿಸಿತು. ಆದರೆ ಬಿ.ಎಸ್.ಪಿ. ಉತ್ತರಪ್ರದೇಶದಲ್ಲಿ ಬಿ.ಜೆ.ಪಿ. ಜೊತೆ ಕೂಡಿ ಅಧಿಕಾರ ಹಿಡಿದಾಗ ನಮ್ಮಲ್ಲಿ ಭಿನ್ನಾಭಿಪ್ರಾಯಗಳು ತೀವ್ರವಾದವು. ಭಿನ್ನಾಭಿಪ್ರಾಯಗಳಿಗೆ ತಾತ್ವಿಕ ಹಿನ್ನೆಲೆಯಿದ್ದರೂ ಕೆಲವು ವ್ಯಕ್ತಿಕೇಂದ್ರಿತ ಗುಂಪುಗಳಿವೆ. ಆದರೆ ಅವು ಸಮುದಾಯದ ಧ್ವನಿಗಳಲ್ಲ.

**ಹೊಸತು :** ಉತ್ತರಪ್ರದೇಶದಲ್ಲಿ ಬಿ.ಜೆ.ಪಿ.ಯೊಂದಿಗೆ ಬಿ.ಎಸ್.ಪಿ. ಸೇರಿ ಮೊದಲ ಬಾರಿಗೆ ಅಧಿಕಾರ ಹಿಡಿದಾಗ ಬಿ.ಎಸ್.ಪಿ. ನಾಯಕರು 'ಅಧಿಕಾರ ಮುಖ್ಯ, ಯಾರ ಜೊತೆಗೆ ಎಂಬುದಲ್ಲ' ಎಂದು ಹೇಳಿದರು. ಅದಾಗಿ ೨೦ ವರ್ಷವಾಯಿತು. ಆ ಕುರಿತ ನಿಮ್ಮ ಅಭಿಪ್ರಾಯವೇನು?

**ಶಂಕರ :** ತಾತ್ವಿಕವಾಗಿ ಆ ನಿಲುವನ್ನು ನಾನು ಒಪ್ಪುವುದಿಲ್ಲ. ೧೯೯೨-೯೩ರಲ್ಲಿ ದಲಿತ ಸಂಘರ್ಷ ಸಮಿತಿ ಬಹುಜನ ಸಮಾಜ ಪಕ್ಷವನ್ನು ರಾಜಕೀಯವಾಗಿ ಬೆಂಬಲಿಸಿತು. ಕರ್ನಾಟಕದಲ್ಲಿ ಆಗ ಬಿ.ಎಸ್.ಪಿ.ಗೆ ತನ್ನದೇ ಆದ ದೊಡ್ಡ ಬೇಸ್ ಇರಲಿಲ್ಲ. ಕಾನ್ಶೀರಾಂ ಅವರು ಕರ್ನಾಟಕಕ್ಕೆ ಬಂದು ಇಲ್ಲಿ ದಲಿತ ಸಂಘಟನೆಯೊಂದಿಗೆ ಸಭೆ ನಡೆಸಿದರು. ದಲಿತ ಸಂಘರ್ಷ ಸಮಿತಿ ಸಾಂಸ್ಕೃತಿಕವಾಗಿ ತನ್ನ ಬೇರುಗಳನ್ನು ಗಟ್ಟಿಗೊಳಿಸಿಕೊಳ್ಳಬೇಕು ಎಂದು ಹೇಳಿದರು. ಸಾಂಸ್ಕೃತಿಕ ಬೇರುಗಳೂ ಗಟ್ಟಿಯಾಗದೇ ರಾಜಕೀಯ ಶಕ್ತಿಯಾಗಲು ಸಾಧ್ಯವಿಲ್ಲ ಅಂತ ಹೇಳಿದರು. ನಂತರ ಉತ್ತರಪ್ರದೇಶದಲ್ಲಿ ಆದ ಬೆಳವಣಿಗೆ ಈ ನೀತಿಗೆ ವಿರುದ್ಧವಾಗಿತ್ತು. ಆಗ ಕೃಷ್ಣಪ್ಪನವರನ್ನು ಬಿ.ಎಸ್.ಪಿ.ಯ ಕರ್ನಾಟಕ ರಾಜ್ಯ ಮುಖ್ಯಸ್ಥರನ್ನಾಗಿ ಮಾಡಿದ್ದರು. ಉತ್ತರಪ್ರದೇಶದಲ್ಲಿನ ಬಿ.ಎಸ್.ಪಿ. ಮತ್ತು ಬಿಜೆಪಿ ಸಖ್ಯ ಅಧಿಕಾರಕ್ಕಾಗಿ ನಡೆಸಿದ ಮೈತ್ರಿ. ಡಾ॥ ಬಾಬಾಸಾಹೇಬರು ದಲಿತರ ವಿಮೋಚನೆಗೆ ಅಧಿಕಾರ ಮುಖ್ಯವೆಂದಿದ್ದರು ನಿಜ. ಆದರೆ ಅಧಿಕಾರವೇ ಅಂತಿಮವಲ್ಲ, ಅಧಿಕಾರ ಪಡೆದು ಮಾಡುವ ಕೆಲಸ ಮುಖ್ಯ. ಇಂದಿನ ಸಂದರ್ಭದಲ್ಲಿ ಅಧಿಕಾರ ಪಡೆಯಲು ನಮ್ಮ ನಡೆಯೂ ಮುಖ್ಯ. ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಕಾಂಗ್ರೆಸ್‌ಅನ್ನು ವಿರೋಧಿಸಿದ್ದವರಿಗೆ ಇಂದು ಫ್ಯಾಸಿಸ್ಟರನ್ನು ಎದುರಿಸಲು ಕಾಂಗ್ರೆಸ್‌ಗೆ ಬೆಂಬಲಿಸುವುದು ಅನಿವಾರ್ಯವಾಗಿದೆ.

**ಹೊಸತು :** ದೇಶದ ದಲಿತ ಚಳುವಳಿಯಲ್ಲಿ ಮಹಿಳೆಯರ ಪಾತ್ರ ದೊಡ್ಡದು. ಆದರೆ ಇಂದು ದಲಿತ ಚಳುವಳಿಯಲ್ಲಿ ಮಹಿಳೆಯರ ನಾಯಕತ್ವದ ಕೊರತೆ ಕಾಣಿಸುತ್ತಿದೆ ಇದಕ್ಕೆ ಕಾರಣವೇನು?

**ಶಂಕರ :** ನಾನು ಆಗಲೇ ಹೇಳಿದ ಹಾಗೆ ಪ್ರಜ್ಞಾವಂತ ದಲಿತ ನೌಕರರು ದಲಿತ ಚಳುವಳಿಯನ್ನು ಹುಟ್ಟುಹಾಕಿ ಅದಕ್ಕೆ ನಾಯಕತ್ವ, ಮಾರ್ಗದರ್ಶನ ಕೊಟ್ಟರು. ದೇವನೂರ ಮಹಾದೇವ, ಸಿದ್ಧಲಿಂಗಯ್ಯ, ಬಿ. ಕೆ. ಕೃಷ್ಣಪ್ಪ, ದೇವಯ್ಯ ಹರವೆ, ಬೋಳಬಂಡೆಪ್ಪ ಹೀಗೆ ಮುಂತಾದವರು. ಎರಡನೇ ಹಂತದಲ್ಲಿ ಚಂದ್ರಪ್ರಸಾದ ತ್ಯಾಗಿ, ಮುನಿಯಪ್ಪ, ಗಂಗಣ್ಣ, ರಾಜಣ್ಣ ಇಂಥ ಹಲವಾರು ಜನ ಪೂರ್ಣಾವಧಿಯಾಗಿ ದಲಿತ ಕಾರ್ಯಕರ್ತರಾಗಿ ನಾಯಕರಾಗಿ ಕೆಲಸ ಮಾಡಿದರು. ಈ ಹಂತದಲ್ಲಿ ಸಂಘಟನೆ ವಿಶಾಲವಾಗಿ ಮಹಿಳೆಯರೂ ಅದರ ಭಾಗವಾದರು. ನಾವು ನಡೆಸುವ ಚಳುವಳಿಗಳಲ್ಲಿ ಮಹಿಳೆಯರ ಪಾತ್ರ ದೊಡ್ಡದಿದೆ. ಅವರು ಚಳುವಳಿಗೆ ಅಂದು, ಇಂದು ನೀಡುತ್ತಿರುವ ಕಾಣಿಕೆ ದೊಡ್ಡದು. ನಾವು ಮಹಿಳಾ ನಾಯಕತ್ವವನ್ನು ಬೆಳೆಸಲು ದಲಿತ ಮಹಿಳಾ ವಿಭಾಗ ವನ್ನೇ ಆರಂಭಿಸಿದೆವು. ತುಮಕೂರಿನ ಗಂಗಮ್ಮ, ಕೋಲಾರದ ಸುನಂದಮ್ಮ ಇಂಥವರು ನಾಯಕಿಯ ರಾಗಿ ಬೆಳೆದರು. ಕೆಲವು ಮಹಿಳಾ ಉದ್ಯೋಗಿಗಳು, ಪದವೀಧರರು ದಲಿತ ಚಳುವಳಿಗೆ ಬಂದರು. ಆದರೆ ನಿರಂತರವಾಗಿ ಮುಂದುವರೆಯಲಿಲ್ಲ. ಇಂದಿಗೂ ದಲಿತ ಚಿಂತಕಿಯರ ಪಡೆಯೇ ನಮ್ಮ ರಾಜ್ಯದಲ್ಲಿದೆ. ಆದರೆ ಅವರು ಸಂಘಟನೆಯ ನಾಯಕತ್ವಕ್ಕೆ ಬರಬೇಕು. ನಮ್ಮ ಸಂಪೂರ್ಣ ಸಹಕಾರ ಇದೆ.

ಕೆಲವು ಸ್ವಯಂ ಸೇವಾ ಸಂಸ್ಥೆ (ಎನ್‌ಜಿಓ)ಗಳು ದಲಿತ ಮಹಿಳಾ ನಾಯಕಿಯರನ್ನು ಹೈಜಾಕ್ ಮಾಡಿವೆ. ಸ್ವಯಂ ಸೇವಾ ಸಂಸ್ಥೆಗಳ ಅಜೆಂಡಾ ಬಗ್ಗೆ ಯಾವತ್ತೂ ನಮಗೆ ಅನುಮಾನಗಳಿವೆ. ಅವುಗಳಿಂದ





ಅಂತರವನ್ನೂ ಕಾಯ್ದುಕೊಂಡಿದ್ದೇವೆ. ಚಳುವಳಿಗಳಲ್ಲಿ ಭಾಗವಹಿಸುವ ಬಹುತೇಕ ದಲಿತ ಮಹಿಳೆಯರು ಕೃಷಿಕೂಲಿಕಾರರು, ದಿನನಿತ್ಯದ ದುಡಿಮೆಗೆ ಕಷ್ಟಪಡುವವರೂ ಆಗಿರುತ್ತಾರೆ. ಅಂಥವರು ಪೂರ್ಣಾವಧಿ ಕಾರ್ಯಕರ್ತರಾಗಿ ನಾಯಕತ್ವ ವಹಿಸುವುದು ಕಷ್ಟ. ದುಡಿಮೆಯನ್ನೂ ಸಂಸಾರದ ಜವಾಬ್ದಾರಿಯನ್ನೂ ಹೊತ್ತ ಇಂಥ ಮಹಿಳೆಯರು ನಾಯಕತ್ವಕ್ಕೆ ಬರುವುದು ಕಷ್ಟ. ಬದುಕಿಗಾಗಿ ವಲಸೆ ಅವರ ಇನ್ನೊಂದು ಸಮಸ್ಯೆ. ಇಂಥ ಸಂದರ್ಭದಲ್ಲಿ ಉದ್ಯೋಗದಲ್ಲಿರುವ ಮಹಿಳೆಯರು, ದಲಿತ ಚಿಂತಕಿಯರು ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ನಾಯಕತ್ವ ಕೊಡಬೇಕು. ಅದಕ್ಕೆ ನಮ್ಮ ಸಂಪೂರ್ಣ ಸಹಕಾರವಿದೆ. ದಲಿತ ಚಳುವಳಿ ಮಹಿಳಾ ನಾಯಕತ್ವವನ್ನು ರೂಪಿಸಲಿಲ್ಲ ಎಂಬ ಆರೋಪ ಇದೆ. ಅದಕ್ಕೆ ಕಾರಣಗಳೂ ಇವೆ. ಇದನ್ನು ಗಂಭೀರವಾಗಿ ಪರಿಗಣಿಸುತ್ತಿದ್ದೇವೆ. ಆದರೆ ಇಂದಿಗೂ ನಮ್ಮ ಚಳುವಳಿಯ ಅಂತಃಶಕ್ತಿ ಮಹಿಳೆಯರೆ.

**ಹೊಸತು :** ದಲಿತ ಚಳುವಳಿ ಹಲವಾರು ಗುಂಪುಗಳಾಗಿ ಒಡೆದುಹೋಗಿದೆ. ಮಾದಿಗ ದಂಡೋರಾದಂಥ ಸಂಘಟನೆ ಇನ್ನೊಂದೆಡೆ ಇದೆ. ಇವೆಲ್ಲ ಒಟ್ಟಾರೆ ದಲಿತ ಚಳುವಳಿಯ ಗುರಿಗೆ ಧಕ್ಕೆ ತರುತ್ತಿಲ್ಲವೇ?

**ಶಂಕರ :** ಹೌದು ದಲಿತ ಸಂಘಟನೆಗಳು ಬೇರೆ ಬೇರೆ ಹೆಸರಿನಲ್ಲಿವೆ. ಕೆಲವು ಲೆಟರ್‌ಹೆಡ್ ಸಂಘಟನೆಗಳೂ ಇವೆ. ಒಂದು ಸಾರಿ ದಲಿತ ಸಂಘರ್ಷ ಸಮಿತಿಯಲ್ಲಿ ತಾತ್ವಿಕ ಭಿನ್ನಾಭಿಪ್ರಾಯ ಬಂದ ಮೇಲೆ ಕೆಲವು ಪ್ರಮುಖ ದಲಿತ ಸಂಘಟನೆಗಳನ್ನು ಹೊರತುಪಡಿಸಿ ವ್ಯಕ್ತಿ ಕೇಂದ್ರಿತ ಸಂಘಟನೆಗಳೂ ಹುಟ್ಟಿವೆ. ಅವುಗಳ ಹಿಂದೆ ರಾಜಕೀಯ ಉದ್ದೇಶಗಳೂ ಇವೆ. ಅವು ದಲಿತ ಜನಾಂಗದ ಪ್ರತಿನಿಧಿಗಳಲ್ಲ. ಕೆಲವು ದಲಿತ ಗುಂಪುಗಳನ್ನು ಸಾಂದರ್ಭಿಕವಾಗಿ ಹುಟ್ಟುಹಾಕುತ್ತಾರೆ. ಅವು ಅಷ್ಟೇ ಬೇಗ ಸಾಯುತ್ತವೆ. ಕೆಲವು ಪ್ರಮುಖ ದಲಿತ ಸಂಘಟನೆಗಳನ್ನು ಹೋರಾಟದಲ್ಲಿ ಒಂದುಗೂಡಿಸುವ ಪ್ರಯತ್ನ ಮಾಡಿದ್ದೇವೆ. ಅದರಲ್ಲಿ ಯಶಸ್ಸೂ ಕಂಡಿದ್ದೇವೆ. ನಿಜವಾದ ಕಾಳಜಿ ಹೊಂದಿದ ದಲಿತ ಸಂಘಟನೆಗಳು ಸೇರಿ ಒಂದಾಗಿಯೇ ಹೋರಾಡುತ್ತೇವೆ. ಮಾದಿಗ ದಂಡೋರಾ ಸಂಘಟನೆಯನ್ನು ಆಳುವ ಪಕ್ಷಗಳು ದಲಿತ ಚಳುವಳಿಯನ್ನು ಒಡೆಯಲು ಉಪಯೋಗಿಸಿಕೊಂಡವು. ದಂಡೋರಾ ಹೋರಾಟ ಸರಿ. ಜನಸಂಖ್ಯೆಗನುಗುಣವಾಗಿ ಮೀಸಲಾತಿಯನ್ನು ರೂಪಿಸಬೇಕು. ಅದು ಬರೀ ದಲಿತರ ಮಧ್ಯೆ ಮಾತ್ರವಲ್ಲ ಬ್ರಾಹ್ಮಣರಿಂದ ದಲಿತರವರೆಗೆ ಎಲ್ಲರಿಗೂ ಅವರ ಜನಸಂಖ್ಯೆಗನುಗುಣವಾಗಿ ಪ್ರಾತಿನಿಧ್ಯ ಸಿಗಬೇಕು. ಅದಕ್ಕೆ ನಮ್ಮ ಸರಕಾರಗಳು ಸಿದ್ಧವಿಲ್ಲ. ಈಗ ಮೇಲ್ಜಾತಿಯ ಬಡವರಿಗೂ ಶೇ. ೧೦ ಮೀಸಲಾತಿ ತಂದಿದ್ದಾರೆ ಮೋದಿಯವರು. ಇದೊಂದು ರಾಜಕೀಯ ಗಿಮಿಕ್. ಚುನಾವಣೆ ಸಂದರ್ಭದ ಮತಬ್ಯಾಂಕ್ ರಾಜಕಾರಣ. ಇಷ್ಟಕ್ಕೂ ಮೀಸಲಾತಿ ಪರಿಕಲ್ಪನೆಯನ್ನೇ ನಾಶ ಮಾಡುತ್ತಿದ್ದಾರೆ. ಎಲ್ಲ ಕ್ಷೇತ್ರಗಳಲ್ಲಿ ಖಾಸಗೀಕರಣ ನೀತಿ ಅನುಸರಿಸುತ್ತಿರುವುದರಿಂದ ಅಂಬೇಡ್ಕರ್ ಅವರ ಆಶಯಗಳನ್ನೇ ಅಪ್ರಸ್ತುತಗೊಳಿಸುವ ಹುನ್ನಾರ ನಡೆದಿದೆ. ದಲಿತರು ರಾಷ್ಟ್ರೀಕರಣಕ್ಕಾಗಿ ಹೋರಾಡುವುದೊಂದೇ ಈಗಿರುವ ದಾರಿ. ದಲಿತರು ಒಂದಾಗಬಾರದೆಂದೇ ಅವರನ್ನು ಒಡೆದು ಗುಂಪುಗಳನ್ನಾಗಿಸುತ್ತಾರೆ.

**ಹೊಸತು :** ಸಂವಿಧಾನ ಬದಲಾವಣೆ ಕುರಿತು ಮಾತನಾಡುತ್ತಿದ್ದಾರೆ. ನಿಮ್ಮ ಅಭಿಪ್ರಾಯವೇನು?

**ಶಂಕರ :** ಸಂವಿಧಾನ ಬದಲಾವಣೆ ಕುರಿತು ಮಾತನಾಡುವುದು ನಿಜವಾದ ರಾಷ್ಟ್ರದ್ರೋಹ. ಮನುವಾದಿಗಳ ಪಿತೂರಿ. ಹಾಗೆ ನೋಡಿದರೆ ಅಂಬೇಡ್ಕರ್ ಅವರು ಬಯಸಿದ ಆಶಯಗಳನ್ನು ಪೂರ್ತಿಯಾಗಿ ಈ ಸಂವಿಧಾನದಲ್ಲಿ ಅಳವಡಿಸಲು ಅವರಿಗೆ ಸಾಧ್ಯವಾಗಿರಲಿಲ್ಲ. 'ನನ್ನನ್ನು ಒಂದು ವರ್ಗದ ನಾಯಕನನ್ನಾಗಿ ಗುರ್ತಿಸಿದ್ದಾರೆ. ನಾನು ಎಲ್ಲ ವರ್ಗದ ಹಿತಾಸಕ್ತಿ ಕಾಯಬೇಕು' ಎಂದು ಅಂಬೇಡ್ಕರ್ ಅವರು ಹೇಳಿದ್ದರು. ಭೂಮಿ ಸಾಮೂಹಿಕ ಉಳುಮೆಗೆ ಒಳಪಡಬೇಕು. ಬೃಹತ್ ಕೈಗಾರಿಕೆಗಳ ರಾಷ್ಟ್ರೀಕರಣವಾಗಬೇಕು ಎಂಬುದು ಅವರ ಆಶಯವಾಗಿತ್ತು. ಇಂದು ಆ ಆಶಯಗಳು ಇಂದಿನ ಪರಿಸ್ಥಿತಿಯಲ್ಲಿ ಜಾರಿಯಾಗಬೇಕು. ಆ ನಿಟ್ಟಿನಲ್ಲಿ ನಮ್ಮ ಸಂವಿಧಾನ ವಿಕಾಸಗೊಳ್ಳಬೇಕೇ ಹೊರತು ಸಂವಿಧಾನದ ಬದಲಾವಣೆ ಎನ್ನುವುದು ಅಂಬೇಡ್ಕರ್ ಆಶಯ ಮತ್ತು ಪ್ರಜಾಸತ್ತೆಯ ಮೌಲ್ಯಗಳಿಗೆ ವಿರೋಧವಾದದ್ದು. ಇಂದು ಸಂವಿಧಾನ ಬಿಕ್ಕಟ್ಟಿನಲ್ಲಿದೆ. ಅದನ್ನು ಉಳಿಸಿಕೊಳ್ಳಲು ಸಮಗ್ರ ದುಡಿಯುವ ಜನ ಒಂದಾಗಬೇಕು. ಇಂದು ಕೆಲವು ದಲಿತರ ಪಕ್ಷಗಳೇ ಬಿ.ಜೆ.ಪಿ.ಯ ಜೊತೆಗಿವೆ. ಅಟವಳೆಯಂಥವರು ಮೋದಿಯವರ ನೀತಿಗಳನ್ನು ಸಮರ್ಥಿಸುತ್ತಾರೆ. ದಲಿತರ ಬಾಯಿಯಿಂದಲೇ ದಲಿತ ವಿರೋಧಿ ಹೇಳಿಕೆಗಳನ್ನು ಕೊಡಿಸುತ್ತಾರೆ. ಇಂಥ ಸಂದರ್ಭದಲ್ಲಿ ದಲಿತ ಚಳುವಳಿಗಳು ಒಂದಾಗಬೇಕು. ಎಡ, ಪ್ರಜಾಸತ್ತಾತ್ಮಕ ಜಾತ್ಯತೀತ ಶಕ್ತಿಗಳೊಂದಿಗೆ ಸೇರಿ ದಲಿತ, ಅಲ್ಪಸಂಖ್ಯಾತ, ಕಾರ್ಮಿಕ ರೈತ ವಿರೋಧಿ ಫ್ಯಾಸಿಸ್ಟ್ ಶಕ್ತಿಗಳನ್ನು ರಾಷ್ಟ್ರದ ರಾಜಕೀಯ ವಲಯದಿಂದ ದೂರವಿಡಬೇಕು. ತುರ್ತು ಪರಿಸ್ಥಿತಿಯಲ್ಲಿ ಕಾಂಗ್ರೆಸ್‌ಅನ್ನು ವಿರೋಧಿಸಿದವರೇ ಇಂದು ಫ್ಯಾಸಿಸ್ಟರನ್ನು ಎದುರಿಸಲು ಕಾಂಗ್ರೆಸ್‌ಅನ್ನು ಬೆಂಬಲಿಸುವ ಸ್ಥಿತಿ ಬಂದಿದೆ. ಕಾಂಗ್ರೆಸ್ ತನ್ನ ನೀತಿಗಳನ್ನು ಬದಲಾಯಿಸಿ ಕೊಳ್ಳಬೇಕು.

**ಹೊಸತು** : ದಲಿತ, ದಮನಿತ ಎಲ್ಲ ದುಡಿವ ವರ್ಗ ಒಂದಾಗಿ ಒಂದು ರಾಜಕೀಯ ಶಕ್ತಿಯಾಗಬೇಕು ಎಂಬ ನಿಮ್ಮ ಆಶಯ ಈಡೇರಲಿ. ನಿಮ್ಮ ಹೋರಾಟಗಳಿಗೆ 'ಹೊಸತು' ಬಳಗದ ಶುಭಾಶಯಗಳು.

**ಶಂಕರ :** ಧನ್ಯವಾದ.

---

ಲೇಖನ ಸಿದ್ಧಪಡಿಸಿದವರು: **ಡಾ॥ ಸಿದ್ದನಗೌಡ ಪಾಟೀಲ**
ನಂ. ೧೬೭-೧೬೮, ೧೦ನೇ ಮುಖ್ಯರಸ್ತೆ, ೩ನೇ ಫೇಸ್
ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು – ೫೬೦ ೦೫೮

ನಮಗೆ ಬೇಕಿರುವುದು ನೊಂದವರ ನೋವನ್ನು ವಿವರಿಸಲು ಹಕ್ಕುಗಳು ಎಂಬ ಭಾಷೆಯನ್ನು ರೂಪಿಸಿಕೊಟ್ಟ ಸ್ವಾಭಿಮಾನಿ, ಮಾನವತಾವಾದಿ ಅಂಬೇಡ್ಕರ್ ಹೊರತು ರಾಜಕೀಯ ಪ್ರತಿಮೆ ಅಂಬೇಡ್ಕರ್ ಅಲ್ಲ...! ನಾವು ಅಂಬೇಡ್ಕರ್ ಅವರನ್ನು ಭಾರತೀಯರನ್ನೂ ಒಳಗೊಂಡಂತೆ ಜಗತ್ತಿನ ಎಲ್ಲಾ ಶೋಷಿತರ ವಿಮೋಚಕನಾಗಿ ನೋಡಬೇಕಿದೆ. ಬಾಬಾಸಾಹೇಬರನ್ನು ಜಾಗತಿಕ ವಿಮೋಚಕರ ಸಾಲಿನಲ್ಲಿ ಗುರುತಿಸುವ ಹೊಸ ಮಾದರಿಯ ಓದುವ ಕ್ರಮವನ್ನು ನಾವು ಕಟ್ಟಿಕೊಳ್ಳಬೇಕಿದೆ ಅನ್ನಿಸುತ್ತಿದೆ. ನನ್ನ ಅನುಭವದಲ್ಲಿ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ಮತ್ತು ಪೊಲಿಟಿಕಲ್ ಸೈನ್ಸ್ ವಿಶ್ವವಿದ್ಯಾನಿಲಯದಲ್ಲಿ ನಡೆಯುತ್ತಿರುವ ಅಂಬೇಡ್ಕರ್ ಕುರಿತ ಅಧ್ಯಯನ ಮತ್ತು ಸಂಶೋಧನಾ ಕಾರ್ಯ ಆ ದಾರಿಯಲ್ಲಿ ಪಯಣ ಆರಂಭಿಸಿದೆ ಅನ್ನಿಸುತ್ತಿದೆ.

# ನೊಂದವರ ನೋವಿಗೊಂದು ಭಾಷೆ ಕಲಿಸಿದ ಅಂಬೇಡ್ಕರ್...

ಡಾ॥ ಕಿರಣ್ ಎಂ ಗಾಜನೂರು

ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗದ (UGC) ಅಂತರ್ಜಾಲದ ಪುಟವನ್ನು ನೋಡುತ್ತಿದ್ದಾಗ ಭಾರತ ಸರ್ಕಾರದ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಅವರ ೧೨೫ನೇ ಜನ್ಮಶತಮಾನೋತ್ಸವದ ಭಾಗವಾಗಿ ಭಾರತೀಯ ಸಂಶೋಧಕರ ತಂಡವನ್ನು ಅಂಬೇಡ್ಕರ್ ಅವರು ಓದಿದ್ದ ಇಂಗ್ಲೆಂಡಿನ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ಮತ್ತು ಪೊಲಿಟಿಕಲ್ ಸೈನ್ಸ್ ಹಾಗೂ ಅಮೆರಿಕಾದ ಕೊಲಂಬಿಯಾ ವಿಶ್ವವಿದ್ಯಾನಿಲಯಕ್ಕೆ ಕಳುಹಿಸುವ ಯೋಜನೆ ರೂಪಿಸಿರುವುದು ನನ್ನ ಗಮನಕ್ಕೆ ಬಂದಿತ್ತು.

ಅದನ್ನು ಆಧರಿಸಿ ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗಕ್ಕೆ ನನ್ನ ಅರ್ಜಿಯನ್ನು ಸಲ್ಲಿಸಿದ್ದೆ. ಅದಾದ ನಂತರ ಕೆಲಸದ ಒತ್ತಡಗಳ ಕಾರಣಕ್ಕೆ ನಾನು ಆ ವಿಷಯವನ್ನೇ ಮರೆತುಹೋಗಿದ್ದೆ. ಆಗಸ್ಟ್ ೨೫, ೨೦೧೫ರ ರಾತ್ರಿ ನನ್ನ ಇಮೇಲ್ ವಿಳಾಸಕ್ಕೆ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ, ಭಾರತ ಸರ್ಕಾರ ನಿಮ್ಮ ಅರ್ಜಿಯನ್ನು ಪರಿಗಣಿಸಿ ನಿಮ್ಮ ಹೆಸರನ್ನು ಬಾಬಾಸಾಹೇಬ್ ಅಂಬೇಡ್ಕರ್ ಅಧ್ಯಯನ ಮಾಡಿದ್ದ ಇಂಗ್ಲೆಂಡಿನ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ಮತ್ತು ಪೊಲಿಟಿಕಲ್ ಸೈನ್ಸ್ ಸಂಸ್ಥೆಯ ಭೇಟಿಗೆ ಅಂತಿಮಗೊಳಿಸಿದೆ. ತಾವು ಮುಂದಿನ ವ್ಯವಸ್ಥೆಯನ್ನು ಮಾಡಿಕೊಳ್ಳುವುದು ಎಂಬ ಅರ್ಥದ ಪತ್ರವೊಂದು ಬಂದು ಬಿದ್ದಿತ್ತು.

ನೋಡಿದ ತಕ್ಷಣ ಹೇಗೆ ಪ್ರತಿಕ್ರಿಯಿಸಬೇಕು ಎಂದು ಗೊತ್ತಾಗಲಿಲ್ಲ. ಜಗತ್ತಿನ ಎಲ್ಲಾ ಸಮಾಜ ವಿಜ್ಞಾನಿಗಳ ಕನಸು ಒಮ್ಮೆ ಪ್ರತಿಷ್ಠಿತ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ಮತ್ತು ಪೊಲಿಟಿಕಲ್ ಸೈನ್ಸ್ ವಿಶ್ವವಿದ್ಯಾನಿಲಯಕ್ಕೆ ಭೇಟಿ ಕೊಡಬೇಕು ಎಂಬುದಾಗಿರುತ್ತದೆ. ಉಳ್ಳವರು ಅಲ್ಲಿಗೆ ಶಿಕ್ಷಣಕ್ಕಾಗಿ ಸೇರುತ್ತಾರೆ. ಆದರೆ ಒಂದನೇ ತರಗತಿಯಿಂದ ಪಿಎಚ್‌ಡಿ ಪದವಿಯ ತನಕ ಸರ್ಕಾರಿ ಶಿಕ್ಷಣ ವನ್ನು ಪಡೆದ ನನ್ನಂಥವರ ಪಾಲಿಗೆ ಅದು ನಿಜಕ್ಕೂ ಬಹಳ ದೊಡ್ಡ ವಿಷಯ.

ಅಂತಹ ವಿಷಯ ಸಾಧ್ಯವಾಗಿದ್ದಕ್ಕೆ ಒಮ್ಮೆಲೆ ಆಶ್ಚರ್ಯ ಆಗಿತ್ತು. ಎಲ್ಲಕ್ಕಿಂತ ಮುಖ್ಯವಾಗಿ ಡಾ॥ ಅಂಬೇಡ್ಕರ್ ಓದಿದ, ದಿನಗಳನ್ನು ಕಳೆದ ಸಂಸ್ಥೆಯಲ್ಲಿ ನಾನು ಅವರ ೧೨೫ನೇ ಜನ್ಮಶತಮಾನೋತ್ಸವದ ಭಾಗವಾಗಿ ನಡೆಯುವ ಕಾರ್ಯಕ್ರಮದ ಭಾಗವಾಗುತ್ತೇನೆಂಬುದು ನನ್ನ ಉತ್ಸಾಹವನ್ನು ಮತ್ತಷ್ಟು ಹೆಚ್ಚಿಸಿತ್ತು.

ಆ ಪತ್ರ ತಲುಪಿದ ಕೆಲವೇ ದಿನಗಳಲ್ಲಿ ಸರ್ಕಾರದ ಕಡೆಯಿಂದ ಎಲ್ಲಾ ದಾಖಲೆಗಳು ನನ್ನನ್ನು ತಲುಪಿ ನಾನು ಬೇಕಾದ ಎಲ್ಲಾ ತಯಾರಿಗಳನ್ನು ಮಾಡಿಕೊಂಡೆ. ಮುಖ್ಯವಾಗಿ ಮೊದಲ ಬಾರಿಗೆ ಬೇರೊಂದು ದೇಶದ ವೀಸಾ ಪಡೆಯುವ ಸಾಲಿನಲ್ಲಿ ನಾನು ನಿಂತಿದ್ದೆ. ಆಗ ನನಗೆ ನೆನಪಾಗಿದ್ದು ಬಾಬಾ ಸಾಹೇಬರು ಬರೆದ "ವೀಸಾಗಾಗಿ ಕಾಯುತ್ತಾ" ಎಂಬ ಲೇಖನ...! ಅದಾದ ನಂತರ ಸಚಿವಾಲಯ ನಮ್ಮದು ಶೈಕ್ಷಣಿಕ ಕಾರ್ಯಕ್ರಮ ಆಗಿರುವುದರಿಂದ ನೀವು ಇಷ್ಟು ಲೇಖನಗಳನ್ನು ಓದಿಕೊಂಡು ತಯಾರಿ ಮಾಡಿಕೊಂಡಿರಬೇಕು ಎಂಬ ಸಂದೇಶವನ್ನು ರವಾನಿಸುವ ಜೊತೆಗೆ ಬಾಬಾಸಾಹೇಬರು ಬರೆದ ಹಲವಾರು ಲೇಖನಗಳನ್ನು ಕಳುಹಿಸಿತ್ತು. ಅವುಗಳನ್ನು ಓದುತ್ತಾ ನಾನು "೨೧ನೇ ಶತಮಾನದಲ್ಲಿ ಅಂಬೇಡ್ಕರ್ – ಒಂದು ಮರುಚಿಂತನೆ" ಎಂಬ ವಿಸ್ತೃತ ಲೇಖನವೊಂದನ್ನು ಬರೆದು ಮುಗಿಸಿದೆ.

ನವೆಂಬರ್ ೨೭ಕ್ಕೆ ನಮ್ಮ ಪ್ರಯಾಣ ದೆಹಲಿ ಯಿಂದ ಇಂಗ್ಲೆಂಡಿನ ಹೀಥ್ರೊ ವಿಮಾನ ನಿಲ್ದಾಣಕ್ಕೆ ನಿಗದಿಯಾಗಿತ್ತು. ಆ ಸಂದರ್ಭದಲ್ಲಿ ನನ್ನ ದೆಹಲಿಯ ಎಡಚಿಂತನೆಯ ಮಿತ್ರರು Occupy UGC ಹೋರಾಟವನ್ನು ರೂಪಿಸಿದ್ದರು. ಆ ಮಾಹಿತಿ ಇದ್ದ ಕಾರಣಕ್ಕೆ ಮೂರು ದಿನಗಳ ಮೊದಲು ದೆಹಲಿ ತಲುಪಿ ಆ ಹೋರಾಟದ ಭಾಗವಾಗಿದ್ದೆ. ಅಲ್ಲಿರುವ ಸಂಗಾತಿಗಳು ಅಂದು ಬೆಳಿಗ್ಗೆ ನಮ್ಮ ಬೇಡಿಕೆ ಈಡೇರಿಕೆಗಾಗಿ ಪಾರ್ಲಿಮೆಂಟ್ ಮುತ್ತಿಗೆ ಹಾಕುವ ಯತ್ನದಲ್ಲಿ ಪೊಲೀಸರಿಂದ ಹೊಡೆತ ತಿಂದು ನರಳುತ್ತಿದ್ದರು. ಅವರೊಂದಿಗೆ ಚರ್ಚಿಸುತ್ತಾ ಎರಡು ರಾತ್ರಿಗಳನ್ನು ಅವರೊಂದಿಗೆ ದೆಹಲಿಯ ರಸ್ತೆಗಳಲ್ಲಿ ಕಳೆಯುವ ಸುಯೋಗ ನನ್ನದಾಗಿತ್ತು. ಆಗಲೇ ನಾನು ಮೊದಲಬಾರಿಗೆ ಕನ್ಹಯ್ಯಕುಮಾರ್, ಆಶುತೋಶ್ ಮತ್ತು ಅಪರಾಜಿತ ಅವರಂತಹ ಧೀಮಂತ ಹೋರಾಟಗಾರರನ್ನು ಭೇಟಿಯಾಗಲು ಸಾಧ್ಯವಾಯಿತು. ಆ ಮೂರು ದಿನಗಳು ನಿಜಕ್ಕೂ ನನ್ನ ಬದುಕಿನ ಅತ್ಯಮೂಲ್ಯ ದಿನಗಳಾಗಿದ್ದವು.

ನವೆಂಬರ್ ೨೧, ೨೦೧೫ರ ಮಧ್ಯಾಹ್ನ ನಾವು ಒಟ್ಟು ೨೭ ಜನರ ತಂಡ ದೆಹಲಿಯ ಅಂತರರಾಷ್ಟ್ರೀಯ ವಿಮಾನ ನಿಲ್ದಾಣದಿಂದ ಹೊರಟು ಒಂಬತ್ತು ಗಂಟೆಗಳ ಸುದೀರ್ಘ ಪ್ರಯಾಣದ ನಂತರ ಲಂಡನ್ನಿನ ಹೀಥ್ರೊ ನಿಲ್ದಾಣ ತಲುಪಿದೆವು. ರಾತ್ರಿ ಆಗಸದಿಂದ ಕಾಣುತ್ತಿದ್ದ ಜಗತ್ತಿನ ಮಹತ್ವದ ನಗರ ಲಂಡನ್ ಚಿತ್ರಣ ಕಣ್ಮನ ಸೆಳೆಯುವಂತಿತ್ತು. ನಾವು ನಿಲ್ದಾಣಕ್ಕೆ ಇಳಿದ ತಕ್ಷಣ ನಮ್ಮನ್ನು ಬರಮಾಡಿಕೊಳ್ಳಲು ಭಾರತೀಯ ರಾಯಭಾರಿ ಕಛೇರಿಯ ಅಧಿಕಾರಿಗಳು ನಿಂತಿದ್ದರು. ಕೊರೆಯುವ ನಾಲ್ಕು ಡಿಗ್ರಿ ಚಳಿಯಲ್ಲಿ ನಾವು ನಮ್ಮ ಹೊಸ ಅನುಭವಕ್ಕೆ ಕಾಲಿಟ್ಟಿದ್ದೆವು. ನಾಳೆ ಬೆಳಿಗ್ಗೆ ಎಂಟು ಗಂಟೆಗೆ ಭೇಟಿಯಾಗೋಣ ಎಂದು ಅಧಿಕಾರಿಗಳು ಹೊರಟುಹೋದರು.

ಒಂದು ವಿಷಯದಲ್ಲಿ ಭಾರತೀಯರು ಇಂಗ್ಲಿಷರನ್ನು ಗೌರವಿಸಲೇಬೇಕು. ಅದು ಸಮಯ ಪಾಲನೆ. ರಾತ್ರಿ ಅವರು ಹೊರಡುವಾಗ ಬೆಳಿಗ್ಗೆ ಎಂಟು ಗಂಟೆಗೆ ಭೇಟಿ ಎಂದು ಹೇಳಿದ್ದನ್ನು ಮರೆತು ಕೆಲವರು ನಿದ್ದೆಯಲ್ಲಿದ್ದರು. ಬೆಳಿಗ್ಗೆ ಸರಿಯಾಗಿ ೭.೫೫ಕ್ಕೆ ಬಾಗಿಲು ಬಡಿದು ರೆಡಿ ಇದ್ದವರನ್ನು ಕರೆದುಕೊಂಡು ಅವರು ಪೂರ್ವ ನಿಯೋಜಿತ ಕಾರ್ಯಕ್ರಮಕ್ಕೆ ಹೋದರು. ಮಿಕ್ಕವರು ಏನಾಗುತ್ತಿದೆ ಎಂದು ಅರ್ಥವಾಗುವುದರಲ್ಲಿ ಅವರುಗಳು ಒಂದು ದಿನದ ಕಾರ್ಯಕ್ರಮದಿಂದ ವಂಚಿತರಾಗಿದ್ದರು.

ಮೊದಲ ದಿನವೇ ಸಮಯ ಪಾಲನೆಯ ಕುರಿತು ದಕ್ಕಿದ ಈ ಅನುಭವ ಒಟ್ಟು ತಂಡದಲ್ಲಿ ಒಂದು ರೀತಿಯ ಅವ್ಯಕ್ತ ಭಯವನ್ನು, ಆತಂಕವನ್ನು ಹುಟ್ಟಿಸಿತ್ತು. ಪರಿಣಾಮ ಎರಡನೆಯ ದಿನ ಅವರು ಹೇಳಿದ ಸಮಯಕ್ಕೆ ತಂಡ ರೆಡಿ ಇರುತ್ತಿತ್ತು. ಒಟ್ಟು ಎಂಟು ದಿನದಲ್ಲಿ ಅವರು ರೂಪಿಸಿದ ಯೋಜನೆಯಲ್ಲಿ ಐದು ನಿಮಿಷಗಳ ವ್ಯತ್ಯಾಸವಾಗದಂತೆ ನೋಡಿಕೊಂಡಿದ್ದು ಆ ಸಮಾಜಗಳು ಸಮಯ ಪಾಲನೆಗೆ ಕೊಡುವ ಮಹತ್ವವನ್ನು ನಮಗೆ ಪರಿಚಯಿಸಿದ್ದವು. ಇದು ನಿಜಕ್ಕೂ ನಾನು ಕಲಿತ ಮಹತ್ವದ ಪಾಠ.

ನಮ್ಮ ಒಟ್ಟು ಶೈಕ್ಷಣಿಕ ಪ್ರವಾಸದಲ್ಲಿ ಜೊತೆಯಾದ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ಮತ್ತು ಪೊಲಿಟಿಕಲ್ ಸೈನ್ಸ್ ವಿಶ್ವವಿದ್ಯಾನಿಲಯದ ನಿರಂಜನ್ ಸರ್ಕಾರ್, ಪಾಲ್ಗುಣಿ, ಪ್ರಣವ್, ಸೋನಾಲಿ ಅವರುಗಳ ಸಾಂಗತ್ಯ ನನ್ನನ್ನು ಹೊಸ ಲೋಕಕ್ಕೆ ಕರೆದುಕೊಂಡು ಹೋಗಿತ್ತು. ಎಂ.ಎ. ಓದುತ್ತಿರುವ ಅವರಿಗೆ ಇರುವ ಬದ್ಧತೆ, ಓದಿನ ವಿಸ್ತಾರ, ಓದುವ ಕ್ರಮಗಳು ಕುರಿತ ತಿಳುವಳಿಕೆ ನನ್ನನ್ನು ನಿಜಕ್ಕೂ ಆಶ್ಚರ್ಯಕ್ಕೆ ನೂಕಿದ್ದವು. ಎಂಟು ದಿನಗಳು ಹೇಗೆ ಕಳೆದವು ಎಂಬುದೇ ಅರ್ಥವಾಗಲಿಲ್ಲ. ಒಂದು ವಿಶ್ವವಿದ್ಯಾನಿಲಯವು ವಿದ್ಯಾರ್ಥಿ ಕೇಂದ್ರಿತವಾಗಿ ಇದ್ದರೆ ಹೀಗೆ ಇರಬೇಕು ಅನ್ನಿಸುವಂತಿದ್ದು ವಿವಿಯ ವಾತಾವರಣ, ಶೈಕ್ಷಣಿಕ ಚಟುವಟಿಕೆ, ಅಧ್ಯಾಪಕರ ಕಾರ್ಯಶೈಲಿಗಳನ್ನು ನೋಡಿ ನಮ್ಮ ವಿವಿಗಳು ಇನ್ನೂ ೧೫೦ ವರ್ಷ ಹಿಂದಿವೆ ಅನ್ನಿಸಿದ್ದು ಸುಳ್ಳಲ್ಲ...!

ಆ ವಿವಿಯಲ್ಲಿ ಅಂಬೇಡ್ಕರ್ ಎಷ್ಟು ದೊಡ್ಡ ಸಂಗತಿ ಎಂದರೆ ಬಾಬಾ ಸಾಹೇಬರು ಅಲ್ಲಿ ಸೇರುವಾಗ ಮೊದಲು ಕೊಟ್ಟ ಅರ್ಜಿಯಿಂದ ಹಿಡಿದು ಅವರು ಬರೆದ ಪುಸ್ತಕ, ಹಾಸ್ಟೆಲ್ ಸೇರಲು ಸಲ್ಲಿಸಿದ ದಾಖಲೆಗಳು ಎಲ್ಲವನ್ನು ಜಾಗರೂಕವಾಗಿ ಇಡಲಾಗಿದೆ. ಹಾಗೆ ನೋಡಿದರೆ ಅಂಬೇಡ್ಕರ್ ಅಲ್ಲಿ ಕಳೆದ ದಿನಗಳನ್ನು ವಿವರಿಸುವ ಒಂದು ವಸ್ತುಸಂಗ್ರಹಾಲಯ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ಮತ್ತು ಪೊಲಿಟಿಕಲ್ ಸೈನ್ಸ್ ಸಂಸ್ಥೆಯ ಗ್ರಂಥಾಲಯದಲ್ಲಿದೆ. ಅವರ ಸ್ವಂತ ಬರಹದ ಪತ್ರಗಳು, ಅವರ ಸಹಿಯನ್ನು ಮುಟ್ಟಿ ನೋಡಿ ನಾನಂತೂ ಸಂಭ್ರಮಿಸಿದ್ದೇನೆ, ರೋಮಾಂಚನಗೊಂಡಿದ್ದೇನೆ.

ಇಷ್ಟೆ ಅಲ್ಲದೆ ಒಟ್ಟು ಪಯಣದಲ್ಲಿ Dr. Lisa McKenzie, Lord Meghnad Desai, and Prof. Javeed Majeed ಅವರುಗಳ ಉಪನ್ಯಾಸಗಳು ಬಾಬಾಸಾಹೇಬರ ಕುರಿತ ನಮ್ಮ ಗ್ರಹಿಕೆಗಳ ಮಟ್ಟವನ್ನು ನಾಚಿಸುವಂತಿದ್ದವು. ಭಾರತದಲ್ಲಿ ರಾಜಕೀಯ ಕಾರಣಕ್ಕೆ ಅಂಬೇಡ್ಕರ್ ಪಕ್ಷಗಳ ನಡುವೆ ಅವರನ್ನು ಹಂಚಿ ಕೊಂಡಂತೆ ವರ್ತಿಸುವ ನಮ್ಮಗಳ ಮೂರ್ಖತನ ಜಾಗತಿಕವಾಗಿ ಅವರಿಗೆ ಇರುವ ಮಹತ್ವವನ್ನು ಅವರು ಲೋಕದ ಅಸಮಾನತೆಯನ್ನು ತಿದ್ದಲು ನೀಡಿದ ಕಣ್ಣೋಟವನ್ನು ಗುರುತಿಸುವ ದಾರಿಯನ್ನೆ ಮರೆಸಿದೆ ಅನ್ನಿಸಿತು. ನಿಜವಾದ ಅರ್ಥದಲ್ಲಿ ೨೧ನೇ ಶತಮಾನದ ಭಾರತದಲ್ಲಿ ಬಾಬಾ ಸಾಹೇಬರ ಕುರಿತು ಓದುವ ಹೊಸ ಮಾದರಿಯೊಂದರ ಅಗತ್ಯತೆಯನ್ನು ನಾವು ಕಟ್ಟಿಕೊಳ್ಳಬೇಕಿದೆ ಎಂಬ ತಿಳಿವನ್ನು ಅವರ ಉಪನ್ಯಾಸಗಳು ಒದಗಿಸಿದ್ದವು. ಅಂಬೇಡ್ಕರ್ ಅಸಮಾನತೆಯನ್ನು, ಲಿಂಗ ರಾಜಕೀಯವನ್ನು ಜಾಗತಿಕ ಪಿಡುಗು ಎಂದು ಘೋಷಿಸಿದ್ದರು. ಅವರು ನನ್ನ ಹೋರಾಟದ ಸ್ಫೂರ್ತಿ ಎಂದು ಇಂಗ್ಲೆಂಡಿನಲ್ಲಿನ ಅಸಮಾನತೆಯ ಕುರಿತು




*ಕಿಂಗ್ ಹೆನ್ರಿಯಲ್ಲಿ ಅಂಬೇಡ್ಕರ್ ಅವರು ವಾಸವಾಗಿದ್ದ ಮನೆ*

ಕೆಲಸ ಮಾಡುತ್ತಿರುವ Dr. Lisa McKenzie ಹೇಳಿದಾಗ ಅಂಬೇಡ್ಕರ್ ಅವರನ್ನು ಜಾತಿ/ಪಕ್ಷ/ಪಂಥಗಳಿಗೆ ಸೀಮಿತಗೊಳಿಸಿ ಪ್ರತಿಮೆ ಮಾಡಿರುವ ಭಾರತೀಯ ಬೌದ್ಧಿಕತೆ ಕಣ್ಣೆದುರಿಗೆ ಹಾದುಹೋಗುತ್ತಿತ್ತು.

ಈ ಎಲ್ಲಾ ಅನುಭಗಳ ಜೊತೆ ನಾವು ಭೇಟಿ ನೀಡಿದ Westminster, the British Library, Oxford University, King Henry ರಸ್ತೆಯಲ್ಲಿ ಇರುವ ಅಂಬೇಡ್ಕರ್ ಅವರು ಇಲ್ಲಿ ಓದುವಾಗ ವಾಸಿಸುತ್ತಿದ್ದ ಮನೆಗೆ ಭೇಟಿ ನೀಡಿದ್ದೆವು. ಇವು ನನ್ನನ್ನು ರೋಮಾಂಚನಗೊಳಿಸಿದ ಅಂಶಗಳು. ನಾವು ೧೯೧೬ರಲ್ಲಿ ಬಾಬಾ ಸಾಹೇಬರು ತಮ್ಮ ವಕೀಲಿಕೆಯನ್ನು ದಾಖಲಿಸಿದ Gray's Inn ಸಂಸ್ಥೆಗೂ ಭೇಟಿ ನೀಡಿದ್ದೆವು. ಈ ಎಲ್ಲಾ ಅನುಭವಗಳು ನನ್ನೊಳಗೆ ಅಂಬೇಡ್ಕರ್ ಈ ದೇಶದಲ್ಲಿ ನಡೆಸಿದ ಪಯಣವನ್ನು ನಾವು ಮತ್ತೆ ನಡೆಸುತ್ತಿದ್ದೇವೆ ಎಂಬ ಭಾವವನ್ನು ತುಂಬುತ್ತಿದ್ದವು. ಈ ಎಲ್ಲಾ ನೆನಪುಗಳ ಹಿನ್ನೆಲೆಯಲ್ಲಿ ವಾಪಸ್ಸು ವಿಮಾನ ಹತ್ತಿ ಮಲಗಿದಾಗ ನನ್ನೊಳಗೆ "Ambedkar's Journey Re-Visited" ಎಂಬ ಲೇಖನ ಹರಳುಗಟ್ಟುತ್ತಿತ್ತು. ಅದರ ಪ್ರಮುಖ ಅಂಶಗಳನ್ನು ಕನ್ನಡದಲ್ಲಿ "ನೊಂದವರ ನೋವಿಗೊಂದು ಭಾಷೆ ಕಲಿಸಿದ ಅಂಬೇಡ್ಕರ್" ಎಂಬ ಶೀರ್ಷಿಕೆಯೊಂದಿಗೆ ನೀಡುತ್ತಿದ್ದೇನೆ, ಈ ಲೇಖನ ಶೈಕ್ಷಣಿಕ ಪ್ರಯಾಣದ ಉತ್ಪನ್ನ...!

೨೧ನೇ ಶತಮಾನದ ಈ ದಿನಗಳಲ್ಲಿ ನಾವು ನಾಗರಿಕತೆ, ಪ್ರಜಾಪ್ರಭುತ್ವ, ದೇಶ, ಜಾಗತೀಕರಣ, ಯುದ್ಧ, ಅಭಿವೃದ್ಧಿ ಇತ್ಯಾದಿ ಇತ್ಯಾದಿ ನೂರಾರು ನುಡಿಗಟ್ಟುಗಳನ್ನು ಕಟ್ಟಿಕೊಂಡಿದ್ದೇವೆ. ಒಂದು ಅರ್ಥದಲ್ಲಿ ಈ ಶತಮಾನದ ಬಹುಪಾಲು ಬೌದ್ಧಿಕ ವಲಯ ಈ ಪ್ರಯತ್ನದಲ್ಲಿಯೇ ಮುಳುಗಿಹೋಗಿದೆ. ಆದರೆ ಈ ಜಗತ್ತಿನ ವಾಸ್ತವ ಎಂದರೆ ಇಲ್ಲಿನ ಬಹುಪಾಲು ಜನರು ಬಡವರು, ನೋವಿನಿಂದ ಬದುಕುತ್ತಿರುವವರು. ಒಂದು ಅರ್ಥದಲ್ಲಿ ನಮ್ಮ ಕಾಲದ ಬಹುಜನರ ನಿಜವಾದ ಐಡೆಂಟಿಟಿಯೇ "ನಾವು ಬಡವರು" ಎಂಬುದಾಗಿದೆ! ಜಗತ್ತಿನ ಎಲ್ಲಾ ವಿದ್ಯಮಾನಗಳನ್ನು ವಿವರಿಸುವ ಭಾಷೆ ಕಂಡುಕೊಂಡ ಬುದ್ಧಿಜೀವಿಗಳು ನಮ್ಮ ನಡುವಿನ ಬಡವನ ನೋವುಗಳನ್ನು ವಿವರಿಸುವ ಭಾಷೆಯೊಂದನ್ನು, ಅವರ ನೋವಿಗೆ ಧ್ವನಿಯಾಗುವ ನುಡಿಗಟ್ಟೊಂದನ್ನು ಕಟ್ಟುವಲ್ಲಿ ಸೋತಿದ್ದಾರೆ ಅಥವಾ ಅದು ನಮ್ಮ ಆದ್ಯತೆಯ ಪ್ರಶ್ನೆಯಾಗಿ ರೂಪುಗೊಂಡಿಲ್ಲ. ಬಡವನ, ಶೋಷಿತನ ನೋವನ್ನು ವಿವರಿಸುವ ಭಾಷೆ ಎಲ್ಲಿದೆ? ಯಾವಾಗ ನಾವು ನೋವನ್ನು, ಹಿಂಸೆಯನ್ನು ವಿವರಿಸುವ ನುಡಿಗಟ್ಟೊಂದನ್ನು ಕಟ್ಟುವ ಕುರಿತು ತೀವ್ರವಾಗಿ ಆಲೋಚಿಸುತ್ತೇವೆಯೋ ಅಂದು ನಾವು ನಾಗರಿಕರಾಗುತ್ತೇವೆ ಎಂದು ಪ್ರಸಿದ್ಧ ಚಿಂತಕ ಶಿವ್ ವಿಶ್ವನಾಥನ್ ಒಮ್ಮೆ ಗಟ್ಟಿಯಾಗಿ ಮಾತನಾಡಿದ್ದರು. ಹಾಗೆ ಮಾತನಾಡುತ್ತಿದ್ದ ಅವರಿಗೆ ಭೂತ ಮತ್ತು ವರ್ತಮಾನಗಳ ಯಾರ ಪ್ರಯತ್ನಗಳ ಕುರಿತೂ ನಿರೀಕ್ಷೆಗಳು ಇದ್ದಂತೆ ಇರಲಿಲ್ಲ....

ಅವರ ಮಾತುಗಳನ್ನು ಕೇಳುತ್ತಿದ್ದ ನನಗೆ ಆ ತಕ್ಷಣಕ್ಕೆ ಅಂಬೇಡ್ಕರ್ ನೆನಪಾಗಿದ್ದರು. ಅರೆ! ಈ ದೇಶದ ನೊಂದವರಿಗೆ ಅವರ ನೋವನ್ನು ವ್ಯಕ್ತಪಡಿಸುವ ಭಾಷೆಯನ್ನು ಕಲಿಸುವ ಪ್ರಯತ್ನವೇ ಬಾಬಾ ಸಾಹೇಬರ ಬದುಕಲ್ಲವೆ? ಈ ಸಮಾಜದಲ್ಲಿ ಮನುಷ್ಯನಾಗಿ ಬಾಳುವುದಕ್ಕೆ ನೀವು ಅನರ್ಹ ಎಂಬ ಅವಮಾನ, ಅಪಮಾನಗಳನ್ನು ಸಹಿಸಿಕೊಂಡು ಅವರು ನಡೆಸಿದ ಹೋರಾಟ ನೊಂದವರ ನೋವಿಗಾಗಿಯೇ ಅಲ್ಲವೆ ಎನ್ನಿಸಿತ್ತು !

ಆದರೆ ಇಂದು ಇಂಗ್ಲೆಂಡಿನ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ಮತ್ತು ಪೊಲಿಟಿಕಲ್ ಸೈನ್ಸ್ ವಿದ್ಯಾರ್ಥಿಗಳು, ಅಧ್ಯಾಪಕರುಗಳು ಬಾಬಾ ಸಾಹೇಬರ ಚಿಂತನೆಗಳ ಕುರಿತು ನಡೆಸುತ್ತಿರುವ ಶೋಧನೆಗಳ ಗುಣಮಟ್ಟವನ್ನು ನೋಡಿದ ಮೇಲೆ ಭಾರತದಲ್ಲಿ ನಾವು ನಿಜವಾಗಿಯೂ ಅಂಬೇಡ್ಕರ್ ಅವರು ನಡೆಸಿದ ಪ್ರಯತ್ನವೇ ಅರ್ಥವಾಗದ ವಿಸ್ಮೃತಿಗೆ ನಾವು ಒಳಗಾಗಿದ್ದೇವೆ ಅನ್ನಿಸುತ್ತಿದೆ. ಅವರು ಕಲಿಸಲು ಆರಂಭಿಸಿದ್ದ ಹಸಿದವನ, ತುಳಿತಕ್ಕೆ ಒಳಗಾದವನ ನೋವನ್ನು ವಿವರಿಸುವ ಭಾಷೆಯೊಂದರ ಪದಗಳನ್ನು ಕ್ಷುಲ್ಲಕ ಕಾರಣಗಳಿಗೆ ಮರೆಯುತ್ತಿದ್ದೇವೆ ಎಂಬ ಭಾವ ಆವರಿಸುತ್ತಿದೆ. ಹೀಗಿದ್ದರೂ ಭರವಸೆ ಬಿಡುವ ಹಾಗಿಲ್ಲ. ಏಕೆಂದರೆ ನೊಂದವರು ಇನ್ನೂ ನಮ್ಮ ಸುತ್ತಲಿದ್ದಾರೆ. ಅಂಬೇಡ್ಕರ್ ಅವರ ೧೨೫ನೇ ಜನ್ಮದಿನಾಚರಣೆಯನ್ನು ಆಚರಿಸುತ್ತಿರುವ ಈ ಹೊತ್ತಿನಲ್ಲಾದರೂ ನಾವು ಬಾಬಾಸಾಹೇಬರ ಕುರಿತು ಸಕಾರಾತ್ಮಕವಾಗಿ ಯೋಚಿಸಬೇಕಿದೆ. ವಿಶ್ವಮಾನ್ಯ



ಲಂಡನ್ನಿನ ಭಾರತೀಯ ಕಚೇರಿಯಲ್ಲಿ ಸಂವಾದದಲ್ಲಿ ಲೇಖಕ ಮಾತನಾಡುತ್ತಿರುವುದು

ಆಗಬಹುದಾದ ಚಿಂತಕನನ್ನು ಜಾತಿಗೆ, ಪಕ್ಷಕ್ಕೆ ಸೀಮಿತಗೊಳಿಸಿ ಸಂಕುಚಿತವಾಗಿ ನೋಡುತ್ತಿರುವ ಮಾದರಿಗಳನ್ನು ಒಡೆಯಬೇಕಿದೆ. ನಿಜ ಅರ್ಥದಲ್ಲಿ ನಾವು ಅಂಬೇಡ್ಕರ್ ಅವರ ಚಿಂತನೆಗಳನ್ನು ಪುನರ್ ನಿರ್ವಚಿಸಬೇಕಿದೆ.

ಹಾಗೆ ನೋಡುವುದಾದರೆ ಸ್ವಾತಂತ್ರ್ಯದ ನಂತರದ ಭಾರತದ ರಾಜಕೀಯ, ಬೌದ್ಧಿಕ ಮತ್ತು ಸಾಂಸ್ಕೃತಿಕ ಜಗತ್ತು ಬಾಬಾಸಾಹೇಬರ ಕುರಿತು ಸಾಕಷ್ಟು ಚರ್ಚಿಸಿದೆ, ಅವರ ಚಿಂತನೆಗಳ ಕುರಿತು ಬಹಳಷ್ಟು ಪುಟಗಳ ಸಾಹಿತ್ಯ ರಚನೆಯಾಗಿದೆ, ಇಂದಿಗೂ ಹಲವು ಚಳುವಳಿಗಳು ಅವರ ಚಿಂತನೆಗಳನ್ನು ತಮ್ಮ ಹೋರಾಟದ ಬುನಾದಿ ಮಾಡಿಕೊಂಡಿವೆ. ಹೀಗಿದ್ದಾಗಲೂ ಈ ದೇಶದಲ್ಲಿ ಅತಿಹೆಚ್ಚಿನ ಚರ್ಚೆಗೆ, ವಿಮರ್ಶೆಗೆ, ಟೀಕೆಗೆ ಒಳಗಾದ ವ್ಯಕ್ತಿ ಮತ್ತು ಚಿಂತನೆಗಳು ಇದ್ದರೆ ಅವು ಅಂಬೇಡ್ಕರ್ ಚಿಂತನೆಗಳೇ ಅನ್ನಿಸುತ್ತದೆ. ಅರೆ! ಒಂದಿಡೀ ತಲೆಮಾರಿನ ಇತಿಹಾಸವನ್ನು ತಳಸಮುದಾಯಗಳ ನೆಲೆಯಿಂದ ನಿರೂಪಿಸಲು ಯತ್ನಿಸಿದ, ಆ ಕಾರಣಕ್ಕೆ ತಮ್ಮ ವೈಯಕ್ತಿಕ ಬದುಕನ್ನು ಮುಡಿಪಾಗಿಟ್ಟ ಪ್ರಾಮಾಣಿಕ ವ್ಯಕ್ತಿಯೊಬ್ಬರ ಚಿಂತನೆಗಳು ಏಕೆ ಇಷ್ಟೊಂದು ವಿಮರ್ಶೆಗೆ, ಟೀಕೆಗೆ ಒಳಗಾಗುತ್ತಿವೆ? ಏಕೆ ನಮ್ಮ ಸಮಾಜದ ಎಲ್ಲಾ ವರ್ಗಗಳು ಅಂಬೇಡ್ಕರ್ ಅವರನ್ನು ಮುಕ್ತವಾಗಿ ಒಳಗೊಳ್ಳಲು ಸಾಧ್ಯವಾಗುತ್ತಿಲ್ಲ? ಅದಕ್ಕಿರುವ ಅಡ್ಡಿಗಳೇನು? ಇಂತಹ ಪ್ರಶ್ನೆಗಳನ್ನು ರೂಪಿಸಿಕೊಂಡು ಯೋಚಿಸಿದರೆ ಅಂಬೇಡ್ಕರ್ ಚಿಂತನೆಗಳನ್ನು ನಿರ್ವಹಿಸುತ್ತಿರುವ ನಮ್ಮ ಬೌದ್ಧಿಕವಲಯ ಸಮಾನ ಸಮಾಜದ ಕುರಿತ ಬಾಬಾಸಾಹೇಬರ ಕಾಳಜಿಯನ್ನು ಪೀಳಿಗೆಗಳಿಗೆ ಸಕಾರಾತ್ಮಕವಾಗಿ ಹಸ್ತಾಂತರಿಸುವಲ್ಲಿ ಎಲ್ಲೋ ಎಡವಿದೆ ಅನ್ನಿಸುತ್ತಿದೆ. ಈ ಹಿನ್ನೆಲೆಯಲ್ಲಿ ಅವರ ಕುರಿತಾದ ಇದುವರೆಗಿನ ಚರ್ಚೆಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಭೀಮ್‌ರಾವ್ ಅಂಬೇಡ್ಕರ್ ಅವರ ಕುರಿತ ನಮ್ಮ ಕಾಲದ ಬಹುಪಾಲು ಚರ್ಚೆಗಳು ಸೀಮಿತ ಚೌಕಟ್ಟುಗಳಲ್ಲಿ ನಿರ್ವಹಿಸಲ್ಪಟ್ಟಿರುವುದನ್ನು ಗುರುತಿಸಬಹುದಾಗಿದೆ.

ಅದರಲ್ಲಿ ಮೊದಲನೆಯದು ಚಿಂತಕ ಆನಂದ್ ತೇಲ್‌ತುಂಬ್ಡೆ ಅವರು ವಿವರಿಸುವಂತೆ ನಮ್ಮ ನಡುವಿನ ವಿದ್ವಾಂಸರು ಇದುವರೆಗೂ ಚರ್ಚಿಸಿರುವ ಅಂಬೇಡ್ಕರರ ಚಿಂತನೆ ನಮಗೆ ಎರಡು ರೀತಿಯಾಗಿ ದಕ್ಕಿದೆ. ಒಂದು – ಅವರುಗಳು ಅಂಬೇಡ್ಕರ್ ಅಲೋಚನೆಗಳನ್ನು ನಮಗೆ ಬಹಳ ಪರಿಚಿತವಾಗಿರುವ ಇಂದು ಬಹಳ ಮೂಲಭೂತ ಪ್ರಶ್ನೆಗಳಿಗೆ ಒಳಗಾಗುತ್ತಿರುವ ಸಮಾಜವಿಜ್ಞಾನ ಶಾಖೆಗಳಾದ ಸಾಮಾಜಿಕ, ರಾಜಕೀಯ, ಧಾರ್ಮಿಕ ಎಂಬಿತ್ಯಾದಿ ಶಾಖೆಗಳಲ್ಲಿ ವಿಂಗಡಿಸಿ ವಿಶ್ಲೇಷಿಸಿದ್ದಾರೆ. ಈ ವಿಧಾನ ದಲ್ಲಿರುವ ಸಮಸ್ಯೆಯೆಂದರೆ ಅದು ಅಂಬೇಡ್ಕರ್‌ರ ಒಟ್ಟು ಚಿಂತನೆಯನ್ನು ಅಕಾಡೆಮಿಕ್ ಶಿಸ್ತುಗಳಲ್ಲಿ ನಮ್ಮದಲ್ಲದ ನೆಲೆಯಲ್ಲಿ ಕೃತಕವಾಗಿ ವಿವರಿಸುತ್ತದೆ.

ಇನ್ನೊಂದು ವಿಧಾನ ಸಾಹಿತ್ಯಿಕ ವಿಧಾನ. ಈ ವಿಧಾನ ಅಂಬೇಡ್ಕರ್ ಯೋಚನೆಗಳ ಕುರಿತಂತೆ ಯಾವುದೇ ವೈಜ್ಞಾನಿಕ ವಿಮರ್ಶೆ–ವಿಶ್ಲೇಷಣೆ ನಡೆಸದೆ ಒಂದು ಕಥನ ಮಾದರಿಯಲ್ಲಿ ವೈಭವೀಕರಣದ ನೆಲೆಯಲ್ಲಿ ಅವರನ್ನು



***ಬ್ರಿಟಿಷ್ ಲೈಬ್ರರಿಯಲ್ಲಿ ಭಾರತೀಯ ಸಂಶೋಧಕರ ತಂಡ***

ವಿಶ್ಲೇಷಿಸುತ್ತದೆ. ನಮ್ಮ ನಡುವೆ ಪ್ರಖ್ಯಾತವಾಗಿರುವ ಈ ಎರಡೂ ವಿಧಾನಗಳು ನಮ್ಮ ಸಮಾಜದ ಕುರಿತು ತರ್ಕಬದ್ಧವಾಗಿ ಅಂಬೇಡ್ಕರ್ ಒದಗಿಸಬಯಸಿದ್ದ ಪ್ರಬುದ್ಧ ಚಿಂತನಾ ಲೋಕದೃಷ್ಟಿಯನ್ನು ಯಥಾವತ್ತಾಗಿ ರೂಪಿಸಿಕೊಡಲು ವಿಫಲವಾಗುತ್ತವೆ.

ಇನ್ನು ತೇಲುತ್ತುಂಬ್ಡೆ ಗುರುತಿಸುವ ಎರಡನೆಯ ಮಿತಿ, ಅಂಬೇಡ್ಕರರ ನಂತರದ ಅವರ ಚಿಂತನೆಗಳ ಕುರಿತಾದ ನಮ್ಮ ಚಳುವಳಿಗಳು ಮತ್ತು ಬೌದ್ಧಿಕ ಚರ್ಚೆಗಳು ಮಾನವೀಯ ಸಮಾಜದ ಕನಸನ್ನು ಹೊತ್ತ ಅಂಬೇಡ್ಕರರ ಸುತ್ತ ಕೆಲವು ಪ್ರಜ್ಞಾಪೂರ್ವಕ ಪ್ರತಿಮೆಗಳನ್ನು ಕಟ್ಟಿಬಿಟ್ಟಿವೆ! ಈ ಪ್ರತಿಮೆಗಳು ಅಂಬೇಡ್ಕರರನ್ನು ಒಬ್ಬ ಸಂವಿಧಾನದ ಕರ್ತೃವೆಂದೂ, ಪ್ರಸ್ತುತ ವ್ಯವಸ್ಥೆಗೆ ಕಾರಣೀಭೂತರೆಂದೂ, ಒಬ್ಬ ದಲಿತರ ನಾಯಕನೆಂದೂ, ಒಬ್ಬ ದಲಿತ ರಕ್ಷಕನೆಂದೂ, ಒಬ್ಬ ಉದಾರವಾದಿ ಪ್ರಜಾಪ್ರಭುತ್ವವಾದಿಯೆಂದೂ ಬಣ್ಣಿಸುತ್ತವೆ. ಮೇಲ್ನೋಟಕ್ಕೆ ಇವು ಅವರ ಕುರಿತು ಉದಾತ್ತವಾಗಿ ಮಾತನಾಡುತ್ತಿರುವಂತೆ ತೋರುತ್ತವೆ. ಆದರೆ ವಾಸ್ತವದಲ್ಲಿ ಇವು ಅಂಬೇಡ್ಕರ್ ಅವರೊಳಗಿದ್ದ ಯಾವುದೇ ಬಗೆಯ ಶೋಷಣೆ, ಅನ್ಯಾಯ, ಕಪಟಗಳಿಲ್ಲದ ಮನುಷ್ಯನನ್ನು ಗುರುತಿಸಲು ಬಹಳ ದೊಡ್ಡ ತಡೆಗಳಾಗಿ ನಮ್ಮ ಮುಂದೆ ನಿಂತಿವೆ. ಬೇಸರದ ಸಂಗತಿ ಎಂದರೆ ಇಂದು ಇವೇ ಪ್ರತಿಮೆಗಳು ಅಂಬೇಡ್ಕರರನ್ನು ಜಾತಿವಾದಿಯೆಂದು, ಕೇವಲ ದಲಿತರ ನಾಯಕನೆಂದು, ಮೇಲ್ಜಾತಿ ವಿರೋಧಿ ಎಂದು ಟೀಕಿಸಲು ಬಳಕೆಯಾಗುತ್ತಿವೆ. ಅಂಬೇಡ್ಕರ್ ಕುರಿತ ಮೇಲಿನ ಪ್ರತಿಮೆಗಳನ್ನೇ ಅವರ ಪರ/ವಿರೋಧ ಗುಂಪುಗಳೆರಡೂ ಪರಸ್ಪರ ವಿರೋಧಕ್ಕಾಗಿ ಬಳಸಿಕೊಳ್ಳುತ್ತಿರುವುದರಿಂದ ಇವೇ ಇಂದು ಹೆಚ್ಚು ಚರ್ಚೆಗೆ ಬರುತ್ತಿವೆ ಮತ್ತು ನಕಾರಾತ್ಮಕವಾಗಿ ಜನಪ್ರಿಯಗೊಳ್ಳುತ್ತಿವೆ. ಇದರ ಪರಿಣಾಮವಾಗಿ ನಮಗೆ ವಾಸ್ತವದ ಅಂಬೇಡ್ಕರ್ ಮತ್ತು ಅವರ ಕಾಳಜಿ ಅರ್ಥವಾಗುತ್ತಿಲ್ಲ ಅಥವಾ ಆ ರೀತಿಯ ಪ್ರಯತ್ನಗಳಿಗೆ ಈ ಪ್ರತಿಮೆಗಳೇ ತಡೆಗಳಾಗಿವೆ. ಇದು ಅಂಬೇಡ್ಕರ್ ಅವರನ್ನು ಒಳಗೊಳ್ಳಲು ಇರುವ ಮತ್ತೊಂದು ಸೀಮಿತ ಚೌಕಟ್ಟು.

ಇನ್ನು ಮೂರನೆಯದು ಮತ್ತು ಅತಿ ಮುಖ್ಯವಾದದು ನಮ್ಮ ನಡುವಿನ ವಿದ್ವತ್ ವಲಯದ ಬಹುಪಾಲು ಚಿಂತಕರು ಇಂದಿಗೂ ಒಂದು ನಿರ್ದಿಷ್ಟ ಮತ್ತು ಸಂಕುಚಿತ ರಾಜಕೀಯ ಕಾರಣಕ್ಕಾಗಿ ಡಾ॥ ಅಂಬೇಡ್ಕರ್ ಮತ್ತು ಮಹಾತ್ಮ ಗಾಂಧಿ ಇಬ್ಬರನ್ನು ವಿರುದ್ಧ ದಿಕ್ಕಿನಲ್ಲಿ ಕಲ್ಪಿಸಿಕೊಂಡು ಪರಸ್ಪರ ದೋಷಾರೋಪಣೆ ಮಾಡುವುದನ್ನೇ ಬಹಳ ದೊಡ್ಡ ಬೌದ್ಧಿಕ ಜಿಜ್ಞಾಸೆ ಎಂಬಂತೆ ಚರ್ಚಿಸುತ್ತಿರುವುದು. ಇದರ ಪರಿಣಾಮ ಇಂದು ಬಹುಪಾಲು ಯುವಕರಿಗೆ ವಾಸ್ತವದ ಅಂಬೇಡ್ಕರ್‌ಗಿಂತ ಗಾಂಧಿಯವರೊಂದಿಗೆ ಈ ಸಮಾಜದ ಕುರಿತು ತಾತ್ವಿಕ ವಿರೋಧವಿದ್ದ ಅಂಬೇಡ್ಕರ್ ಹೆಚ್ಚು ಪರಿಚಿತನಿದ್ದಾನೆ. ಒಂದು ನಿರ್ದಿಷ್ಟ ಐತಿಹಾಸಿಕ ಸಂದರ್ಭದಲ್ಲಿ ಜನಿಸಿದ ಈ ಪರಸ್ಪರ ವಿರೋಧದ ನೆಲೆಯ ಈ ಚಿಂತನೆ ಈ ಸಮಾಜಕ್ಕೆ ಆ ಮೇರು ವ್ಯಕ್ತಿತ್ವಗಳು ನೀಡಿದ ಕಾಣಿಕೆ ಮತ್ತು ಮಹತ್ವವನ್ನು ಸಂಕುಚಿತಗೊಳಿಸಿ ಅವರನ್ನು ಪರ–ವಿರೋಧವೆಂಬ ಸಂಕುಚಿತ ಚೌಕಟ್ಟಿನಲ್ಲಿ ಗ್ರಹಿಸುತ್ತಿದೆ. ಇದು ನಮ್ಮ ಕಾಲದ ದುರಂತ ಮತ್ತು ಅಂಬೇಡ್ಕರ್ ಅವರನ್ನು ಒಳಗೊಳ್ಳಲು ಇರುವ ಪ್ರಮುಖ ತಡೆ.

ಅಂಬೇಡ್ಕರ್ ಚಿಂತನೆಗಳನ್ನು ಬಂಧಿಸಿರುವ ಚೌಕಟ್ಟುಗಳ ಆಚೆಗೆ ಅವರ ಚಿಂತನೆಗಳನ್ನು ಮರು ನಿರೂಪಿಸಬೇಕು ಎಂಬ ವಾದಗಳು ಪ್ರಭಾವಿಯಾಗುತ್ತಿರುವ ಈ ಹೊತ್ತಿನಲ್ಲಿ ಈ ಮೇಲಿನ ಎಲ್ಲಾ ಮಿತಿಗಳನ್ನು ಮೀರುವ ಪ್ರಾಮಾಣಿಕ ಪ್ರಯತ್ನ ನಡೆಯಬೇಕಿದೆ. ಭಾರತದ ಚಿಂತನಾ ಪರಂಪರೆಯ ಮುಂಚೂಣಿ ನಾಯಕರು, ಹೋರಾಟಗಾರರು ಮಾನವತಾವಾದಿಯನ್ನು ಮತ್ತು ಅವರ ವಾದಗಳನ್ನು ರಾಜಕೀಯ ಸರಿತನದ ಕಾರಣಕ್ಕೆ ಸಂಕುಚಿತವಾಗಿ/ರಕ್ಷಣಾತ್ಮಕವಾಗಿ ಬಳಸದೆ ವಿಶಾಲ ಅರ್ಥದಲ್ಲಿ ಒಳಗೊಳ್ಳಬೇಕಿದೆ.

ಮೇಲಿನ ಎಲ್ಲಾ ಮಿತಿಗಳ ಕುರಿತು ನಾವು ಮುಕ್ತವಾಗಿ ಚರ್ಚಿಸುವ, ಅಂಬೇಡ್ಕರ್ ಬರಹ ಮತ್ತು ಭಾಷಣಗಳಲ್ಲಿ ಚರ್ಚಿತವಾಗಿರುವ ಅವರ ವಿಚಾರಗಳನ್ನು ಭಾರತೀಯ ಸಮಾಜ, ಸಂಸ್ಕೃತಿ, ಪರಂಪರೆ ಮತ್ತು ಆರ್ಥಿಕತೆಯನ್ನು ಸಾಮುದಾಯಿಕ ನೆಲೆಯಲ್ಲಿ ವಿವರಿಸುವ ಸಿದ್ಧಾಂತವಾಗಿ ಓದುವ, ಬೆಳೆಸುವ ಕ್ರಮವನ್ನು ನಮ್ಮ ಬೌದ್ಧಿಕ ಪ್ರಪಂಚ ಮತ್ತು ವಿಶ್ವವಿದ್ಯಾನಿಲಯಗಳು ಮುಂದಿನ ಪೀಳಿಗೆಗಳಿಗೆ ರೂಪಿಸಿಕೊಡಬೇಕಿದೆ. ಆ ಮೂಲಕ ಶಿಕ್ಷಣ, ಸಂಘಟನೆ, ಹೋರಾಟ ಎಂಬ ಮೂರು ಶಕ್ತಿಗಳನ್ನು ನಂಬಿಕೊಂಡು ಈ ದೇಶದ ಇತಿಹಾಸವನ್ನು ತಿದ್ದಲು ಪ್ರಯತ್ನಿಸಿದ ಒಬ್ಬ ಮೇಧಾವಿಯನ್ನು ನಾವು ಗೌರವಿಸಬೇಕಿದೆ. ನಮಗೆ ಬೇಕಿರುವುದು ನೊಂದವರ ನೋವನ್ನು ವಿವರಿಸಲು ಹಕ್ಕುಗಳು ಎಂಬ ಭಾಷೆಯನ್ನು ರೂಪಿಸಿಕೊಟ್ಟ ಸ್ವಾಭಿಮಾನಿ, ಮಾನವತಾವಾದಿ ಅಂಬೇಡ್ಕರ್ ಹೊರತು ರಾಜಕೀಯ ಪ್ರತಿಮೆ ಅಂಬೇಡ್ಕರ್ ಅಲ್ಲ...! ನಾವು ಅಂಬೇಡ್ಕರ್ ಅವರನ್ನು ಭಾರತೀಯರನ್ನೂ ಒಳಗೊಂಡಂತೆ ಜಗತ್ತಿನ ಎಲ್ಲಾ ಶೋಷಿತರ ವಿಮೋಚಕನಾಗಿ ನೋಡಬೇಕಿದೆ. ಬಾಬಾಸಾಹೇಬರನ್ನು ಜಾಗತಿಕ ವಿಮೋಚಕರ ಸಾಲಿನಲ್ಲಿ ಗುರುತಿಸುವ ಹೊಸ ಮಾದರಿಯ ಓದುವ ಕ್ರಮವನ್ನು ನಾವು ಕಟ್ಟಿಕೊಳ್ಳಬೇಕಿದೆ ಅನ್ನಿಸುತ್ತಿದೆ. ನನ್ನ ಅನುಭವದಲ್ಲಿ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ಮತ್ತು ಪೊಲಿಟಿಕಲ್ ಸೈನ್ಸ್ ವಿಶ್ವವಿದ್ಯಾನಿಲಯದಲ್ಲಿ ನಡೆಯುತ್ತಿರುವ ಅಂಬೇಡ್ಕರ್ ಕುರಿತ ಅಧ್ಯಯನ ಮತ್ತು ಸಂಶೋಧನಾ ಕಾರ್ಯ ಆ ದಾರಿಯಲ್ಲಿ ಪಯಣ ಆರಂಭಿಸಿದೆ ಅನ್ನಿಸುತ್ತಿದೆ.

**ಡಾ॥ ಕಿರಣ್ ಎಂ ಗಾಜನೂರು**
ರಾಜ್ಯಶಾಸ್ತ್ರ ಅಧ್ಯಾಪಕರು, ಬೆಂಗಳೂರು ಕೇಂದ್ರ ವಿಶ್ವವಿದ್ಯಾನಿಲಯ
ಬೆಂಗಳೂರು

# ಭಾರತ ಸಂವಿಧಾನದ ಪಿತಾಮಹ – ಡಾ॥ ಅಂಬೇಡ್ಕರ್



ಬಾಬಾ ಸಾಹೇಬ್ ಅಂಬೇಡ್ಕರ್ ಸಂವಿಧಾನದ ಶಿಲ್ಪಿಗಳಲ್ಲೊಬ್ಬರು ಮಾತ್ರವಲ್ಲದೆ ಶ್ರೇಷ್ಠ ರಾಜಕೀಯ ಚಿಂತಕರೂ ಹಾಗೂ ಸಾಮಾಜಿಕ ಕ್ರಾಂತಿಕಾರರೂ ಆಗಿದ್ದ ಕಾರಣ ಭಾರತ ಸಮಾಜದಲ್ಲಿ ಬೇರೂರಿರುವ ವರ್ಣಾಶ್ರಮ ಪದ್ಧತಿಯ ವಿರುದ್ಧ ಸಮರ ಸಾರಿ, ತುಳಿತಕ್ಕೊಳಗಾದ ಶೋಷಿತ ಜನರ ಏಳಿಗೆಗಾಗಿ, ಅವರ ಮಾನವ ಹಕ್ಕುಗಳಿಗಾಗಿ ಹಗಲಿರುಳು ಶ್ರಮಿಸಿ, ಅವರ ನೋವಿಗೆ ಸ್ಪಂದಿಸಿ ಹೋರಾಟದ ಹೊಸ ಹಾಡಿಗೆ ಸಾಲುಗಳನ್ನು ಬರೆದು ಚರಿತ್ರೆಯ ದಿಕ್ಕನ್ನು ಬದಲಿಸಿದ್ದು ಅವರ ಬಹುಮುಖ ಪ್ರತಿಭೆ ಮತ್ತು ಮಾನವೀಯತೆಗೆ ಸಾಕ್ಷಿ.

**ಕಾ**ನೂನು ಜಗತ್ತು ಹಲವಾರು ಉದ್ದಾಮ ಸಂವಿಧಾನ ಪರಿಣತರನ್ನು ಕಂಡಿದೆ. ಆದರೆ ಒಂದು ಅದ್ಭುತ ಸಂವಿಧಾನವನ್ನು ರಚಿಸಿ, ದೇಶದ ಜನತೆಗೆ ನೀಡಿದ ಕೆಲವೇ ಕೆಲವರಲ್ಲಿ ಭಾರತರತ್ನ ಡಾ॥ ಬಾಬಾ ಸಾಹೇಬ್ ಅಂಬೇಡ್ಕರ್ ಅದ್ವಿತೀಯರು ಎಂಬುದು ಭಾರತ ಸಂವಿಧಾನದ ಮೌಲ್ಯಗಳು ಮತ್ತು ಆಶಯಗಳನ್ನು ಬಲ್ಲವರ ಸ್ಪಷ್ಟ ಅಭಿಪ್ರಾಯ. ಕಾನೂನು ವಿಷಯದಲ್ಲಿ ಅಮೆರಿಕದ ಪ್ರತಿಷ್ಠಿತ ಕೊಲಂಬಿಯ ವಿಶ್ವವಿದ್ಯಾಲಯದಿಂದ ಪಡೆದ ಡಾಕ್ಟರೇಟ್, ಆರ್ಥಿಕ ವಿಷಯದಲ್ಲಿ ಪ್ರತಿಷ್ಠಿತ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್' ಮತ್ತು ಸಾಮಾಜಿಕ ಹಾಗೂ ಆರ್ಥಿಕವಾಗಿ ಅತ್ಯಂತ ಶೋಷಣೆಗೊಳಗಾದ ಕೆಳವರ್ಗದ ಬಹುಜನರ ರಾಜಕೀಯ ಧ್ವನಿಯಾಗಿದ್ದ ಡಾ॥ ಅಂಬೇಡ್ಕರ್‌ರವರು ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗಿ ನೇಮಕಗೊಂಡದ್ದು ಸಹಜವೇ. ಅದು ಅವರ ಮಹಾನ್ ಪ್ರತಿಭೆಗೆ ಸಂದ ಗೌರವ ಕೂಡ. ಸಂವಿಧಾನಾತ್ಮಕ ಆಡಳಿತದಲ್ಲಿ ನಂಬಿಕೆ ಇಟ್ಟವರು ಅಂಬೇಡ್ಕರರ ಜನ್ಮದಿನ ಏಪ್ರಿಲ್ ೧೪ರಂದು ಜಯಂತಿ ಆಚರಿಸುವ ಮೂಲಕ ತಮ್ಮ ಗೌರವ ಸಲ್ಲಿಸುತ್ತಾರೆ. ಒಂದು ದೇಶ ಅಥವಾ ದೇಶಗಳ ಇತಿಹಾಸದ ದಿಕ್ಕನ್ನು ಬದಲಾಯಿಸಿದ ಮಹಾನುಭಾವರನ್ನು ನೆನಪಿಸಿಕೊಂಡಲ್ಲಿ ಕಾರ್ಲ್ ಮಾರ್ಕ್ಸ್, ಲೆನಿನ್, ಮಹಾತ್ಮ ಗಾಂಧಿ, ನೆಲ್ಸನ್ ಮಂಡೇಲ, ಚೆ ಗುವಾರ ಹೀಗೆ ಅನೇಕರು ನಮ್ಮ ಮನಃಪಟಲದಲ್ಲಿ ಹಾದುಹೋಗುತ್ತಾರೆ. ಈ ಸಾಲಿಗೆ ಡಾ॥ ಅಂಬೇಡ್ಕರ್ ಸೇರುವುದು ನಿರ್ವಿವಾದ.

**ಸಂವಿಧಾನ ಶಿಲ್ಪಿ – ಅಂಬೇಡ್ಕರ್**

ಬಾಬಾ ಸಾಹೇಬ್ ಅಂಬೇಡ್ಕರ್ ಸಂವಿಧಾನದ ಶಿಲ್ಪಿಗಳಲ್ಲೊಬ್ಬರು ಮಾತ್ರವಲ್ಲದೆ ಶ್ರೇಷ್ಠ ರಾಜಕೀಯ ಚಿಂತಕರೂ ಹಾಗೂ ಸಾಮಾಜಿಕ ಕ್ರಾಂತಿಕಾರರೂ ಆಗಿದ್ದ ಕಾರಣ ಭಾರತ ಸಮಾಜದಲ್ಲಿ ಬೇರೂರಿರುವ ವರ್ಣಾಶ್ರಮ ಪದ್ಧತಿಯ ವಿರುದ್ಧ ಸಮರ ಸಾರಿ, ತುಳಿತಕ್ಕೊಳಗಾದ ಶೋಷಿತ ಜನರ ಏಳಿಗೆಗಾಗಿ, ಅವರ ಮಾನವ ಹಕ್ಕುಗಳಿಗಾಗಿ ಹಗಲಿರುಳು ಶ್ರಮಿಸಿ, ಅವರ ನೋವಿಗೆ ಸ್ಪಂದಿಸಿ ಹೋರಾಟದ ಹೊಸ ಹಾಡಿಗೆ ಸಾಲುಗಳನ್ನು ಬರೆದು ಚರಿತ್ರೆಯ ದಿಕ್ಕನ್ನು ಬದಲಿಸಿದ್ದು ಅವರ ಬಹುಮುಖ ಪ್ರತಿಭೆ ಮತ್ತು ಮಾನವೀಯತೆಗೆ ಸಾಕ್ಷಿ. ೦೯-೧೨-೧೯೪೬ರಿಂದ ೨೬.೧೧.೧೯೪೯ರ ಅವಧಿಯಲ್ಲಿ ಭಾರತದ ಸಂವಿಧಾನ ರಚಿಸುವ ಸಂದರ್ಭದಲ್ಲಿ ಸಂಯುಕ್ತ ಸಭೆಗಳಲ್ಲಿ ನಡೆದ ಚರ್ಚೆಗಳನ್ನು ಅವಲೋಕಿಸಿದಲ್ಲಿ ಡಾ॥ ಅಂಬೇಡ್ಕರ್ ಅವರ ಪಾತ್ರ ಎಷ್ಟು ಮಹತ್ವವಾಗಿತ್ತೆಂಬುದು ವಿದಿತವಾಗುತ್ತದೆ ಮತ್ತು ಅವರು ತೋರಿದ ಬದ್ಧತೆಯ ಬಗ್ಗೆ ಅಭಿಮಾನ ಮೂಡುತ್ತದೆ. ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗಿ ಪ್ರತಿಯೊಂದು ಅನುಚ್ಛೇದವನ್ನೂ ಕೂಲಂಕುಶ ಚರ್ಚೆಗೊಳಪಡಿಸಿ, ಅದರ ಸಾಧಕ-ಬಾಧಕಗಳನ್ನು ವಿಮರ್ಶಿಸಿ ಜಗತ್ತಿನ ಒಂದು ದೀರ್ಘ ಹಾಗೂ ಶ್ರೇಷ್ಠ ಸಂವಿಧಾನವನ್ನು ರಚಿಸಿದ್ದು, ಅದು ಭಾರತದ ಆಳ್ವಿಕೆಗೆ ಮೂಲಗ್ರಂಥವಾಗಿರುವುದು ಅಂಬೇಡ್ಕರ್ ಮತ್ತು ಸಂವಿಧಾನ ರಚನಾ ಸಮಿತಿಯ ಇತರೆ ಸದಸ್ಯರ ಕಾಳಜಿ ಮತ್ತು ದೂರದರ್ಶಿತ್ವವನ್ನು ಪರಿಚಯಿಸುತ್ತದೆ.

**ಸಂವಿಧಾನದ ಕ್ರಿಯಾಶೀಲತೆ**

ದಿನಾಂಕ ೨೫-೧೧-೧೯೪೯ರಂದು ಸಂಯುಕ್ತ ಸಭೆಯಲ್ಲಿ ಡಾ॥ ಅಂಬೇಡ್ಕರ್ ಮಾಡಿದ ಕೊನೆಯ ಭಾಷಣ (ಸಂಯುಕ್ತ ಸಭೆಯ ಚರ್ಚೆ – ಸಂಪುಟ ೧೧) ವಿದ್ವತ್ಪೂರ್ಣ ಹಾಗೂ ಮನೋಜ್ಞವಾದದ್ದು. ಈ ಕೆಳಗಿನ ಭಾಷಣದ ತುಣುಕು ಅವರ ಅಗಾಧ ಪ್ರತಿಭೆಗೆ ಸಾಕ್ಷಿ.

"ನನ್ನ ಗೆಳೆಯರಾದ ಸರ್ ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್ ಮತ್ತು ಶ್ರೀ ಟಿ. ಟಿ. ಕೃಷ್ಣಮಾಚಾರಿಯವರು ಸಂವಿಧಾನದ ಪರವಾಗಿ ಎಷ್ಟು ಹೇಳಬಹುದೋ ಅಷ್ಟನ್ನೂ ಹೇಳಿರುವುದರಿಂದ ನಾನು ಅದರ ಶ್ರೇಷ್ಠತೆಯ ಬಗ್ಗೆ ಹೇಳಬೇಕಾದ್ದು ಏನೂ ಇಲ್ಲ. ಏಕೆಂದರೆ ನನ್ನ ಅಭಿಪ್ರಾಯದಲ್ಲಿ ಸಂವಿಧಾನ ಎಷ್ಟೇ ಶ್ರೇಷ್ಠವಾಗಿದ್ದರೂ ಕೂಡ ಅದನ್ನು ಕಾರ್ಯಗತ ಗೊಳಿಸ ಬೇಕಾದವರು ಕೆಡಕು ಜನರಾದರೆ ಆಗ ಸಂವಿಧಾನ ತನ್ನ ಗುಣ ಕಳೆದುಕೊಳ್ಳುತ್ತದೆ. ಆದರೆ ಸಂವಿಧಾನವನ್ನು ಕಾರ್ಯಗತಗೊಳಿಸುವವರು ಒಳ್ಳೆಯ ಜನಗಳಾದಲ್ಲಿ ಅದು ತನ್ನ ಗುಣವನ್ನು ಉಳಿಸಿಕೊಳ್ಳುತ್ತದೆ. ಪ್ರಭುತ್ವದ ಈ ಅಂಗಗಳ ಕ್ರಿಯಾಶೀಲತೆಗೆ ಅವಲಂಬಿತವಾಗಿರುವ ಅಂಶ ಗಳೆಂದರೆ ಜನತೆ ಹಾಗೂ ಅವರ ಆಶಯ ಮತ್ತು ರಾಜಕೀಯವನ್ನು ಸಾಧಿಸಲು ಅವರು ಹುಟ್ಟುಹಾಕುವ ಸಾಧನ-ರಾಜಕೀಯ ಪಕ್ಷ. ಜನತೆ ಮತ್ತು ಪಕ್ಷಗಳು ಯಾವ ರೀತಿಯಲ್ಲಿ ವರ್ತಿಸುತ್ತವೆ ಎಂದು ಹೇಳಲು ಯಾರಿಗೆ ಸಾಧ್ಯ? ಅವರು ಸಂವಿಧಾನಾತ್ಮಕ ಹಾದಿ ಅನುಸರಿಸಿ ತಮ್ಮ ಉದ್ದೇಶ ಸಾಧಿಸುತ್ತಾರೋ ಅಥವಾ ಅವರು ಕ್ರಾಂತಿಕಾರಿ ಮಾರ್ಗ ಆಯ್ದುಕೊಂಡು ತಮ್ಮ ಉದ್ದೇಶ ಸಾಧಿಸುತ್ತಾರೋ? ದೇವದೂತರಂತೆ ಸಂವಿಧಾನ ವಿಫಲವಾಗುವುದೆಂದು ಹೇಳಬಹುದು. ಜನತೆ ಮತ್ತು ಅವರ ಪಕ್ಷಗಳು ಯಾವ ಪಾತ್ರ ವಹಿಸಬಹುದು ಎಂಬುದನ್ನು ಆಧರಿಸದೆ, ಸಂವಿಧಾನದ ಬಗ್ಗೆ ತೀರ್ಪು ನೀಡುವುದು ವ್ಯರ್ಥ."

ಖಾಸಗಿ ಆಸ್ತಿಯನ್ನು ಸ್ವಾಧೀನಪಡಿಸಿಕೊಳ್ಳುವ

**ವಿಲಾಸ್ ಆರ್. ದಾತಾರ್**
**ಮುರಳಿಧರ ಚಿಕ್ಕಮಗಳೂರು**

ಬಗ್ಗೆ ನಡೆದ ಚರ್ಚೆಯಲ್ಲಿ ಡಾ॥ ಅಂಬೇಡ್ಕರ್ ಮಾತನಾಡುತ್ತಾ "... ಪಾರ್ಲಿಮೆಂಟರಿ ಪ್ರಜಾಪ್ರಭುತ್ವ ಪದ್ಧತಿಯೇ ರಾಜಕೀಯ ಪ್ರಜಾಪ್ರಭುತ್ವದ ಆದರ್ಶಪ್ರಾಯ ಪದ್ಧತಿಯೆಂದು ನಾನು ಹೇಳುತ್ತಿಲ್ಲ. ಪರಿಹಾರ ನೀಡದೆ ಖಾಸಗಿ ಆಸ್ತಿಯನ್ನು ಸ್ವಾಧೀನಪಡಿಸಿಕೊಳ್ಳುವುದು ಪವಿತ್ರ ಮಾರ್ಗವಲ್ಲ ಮತ್ತು ಅದರಿಂದ ಹೊರತಾಗುವ ಮಾರ್ಗವಿಲ್ಲ ಎಂಬುದೂ ನನ್ನ ಹೇಳಿಕೆಯಲ್ಲ. ಮೂಲಭೂತ ಹಕ್ಕು ಎಂದಿಗೂ ನಿರ್ಬಂಧಿತವಲ್ಲ ಮತ್ತು ಅದರ ಮೇಲೆ ಹಾಕಿರುವ ಮಿತಿಯನ್ನು ಎಂದಿಗೂ ತೆಗೆಯುವಂತಿಲ್ಲ ಎಂಬುದು ನನ್ನ ಅಭಿಪ್ರಾಯವಲ್ಲ, ಸಂವಿಧಾನದಲ್ಲಿ ಅಡಕಗೊಂಡಿರುವ ತತ್ವಗಳು ಈ ಕಾಲಘಟ್ಟದ ಜನರ ಅಭಿಪ್ರಾಯವಷ್ಟೆ. ಇನ್ನೂ ನಿಖರವಾಗಿ ಹೇಳಬೇಕೆಂದರೆ ಇವು ಸಂಯುಕ್ತ ಸಭೆ ಸದಸ್ಯರ ಅಭಿಪ್ರಾಯ."

**ಸಂವಿಧಾನ – ನಿಂತ ನೀರಲ್ಲ**

ಮುಂದುವರೆದು, ಅಮೆರಿಕದ ಖ್ಯಾತ ರಾಜಕಾರಣಿ ಮತ್ತು ಅಮೆರಿಕದ ಸಂವಿಧಾನ ರಚನೆಯಲ್ಲಿ ಬಹುಮುಖ್ಯ ಪಾತ್ರ ವಹಿಸಿದ್ದ ಥಾಮಸ್ ಜೆಫರ್‌ಸನ್‌ರವರ ಹೇಳಿಕೆಯನ್ನು ನೆನಪಿಸಿಕೊಳ್ಳುತ್ತಾ ಡಾ॥ ಅಂಬೇಡ್ಕರ್ ಪ್ರತಿಯೊಂದು ಕಾಲಘಟ್ಟದ ಜನತೆ ತೆಗೆದುಕೊಳ್ಳುವ ನಿರ್ಣಯಗಳು ಅವರನ್ನು ಬಂಧಿಸುತ್ತವೆಯೇ ಹೊರತು ಮುಂದಿನ ಪೀಳಿಗೆಯನ್ನಲ್ಲ ಎಂದು ಅಭಿಪ್ರಾಯ ಪಟ್ಟರು. ಈ ಕಾರಣದಿಂದಲೇ ಸಂವಿಧಾನಕ್ಕೆ ತಿದ್ದುಪಡಿ ತರುವ ಅಧಿಕಾರವನ್ನು ನೀಡಲಾಗಿದೆ ಎಂದು ವಾದಿಸಿದರು. ಅಂಬೇಡ್ಕರ್ 'ಸಂವಿಧಾನ ನಿಂತ ನೀರಲ್ಲ. ಅದು ಹರಿಯುವ ನದಿ' ಎಂಬ ಖಚಿತ ಅಭಿಪ್ರಾಯ ಹೊಂದಿದ್ದರೆಂಬುದರಲ್ಲಿ ಸಂಶಯವಿಲ್ಲ. ಒಂದು




ಜೀವಂತ ಸಂವಿಧಾನವನ್ನು ರಚಿಸಿ ದೇಶಕ್ಕೆ ಸಮರ್ಪಿಸಿದ್ದರೂ ಡಾ॥ ಅಂಬೇಡ್ಕರ್‌ರವರಿಗೆ ಅದು ಉಳಿಯುವುದೋ ಎಂಬ ಆತಂಕ ಅವರನ್ನು ಕಾಡುತ್ತಿತ್ತು. ತಮ್ಮ ಭಾಷಣಗಳಲ್ಲಿ ಅವರ ಅಂಜಿಕೆಯನ್ನು ಪ್ರಸ್ತಾಪಿಸುತ್ತಿದ್ದರು. ಸಂವಿಧಾನದ ಮೇಲೆ ಇಂದು ನಡೆಯುತ್ತಿರುವ ದಾಳಿಯನ್ನು ನೋಡಿದಲ್ಲಿ ಅಂಬೇಡ್ಕರ್‌ರವರ ಆತಂಕ ನಿರಾಧಾರವಾಗಿರಲಿಲ್ಲ ಎಂಬುದು ವೇದ್ಯವಾಗುತ್ತದೆ.

**ಸಂವಿಧಾನದ ಒಳ ಹೊಕ್ಕ ವಿಚಾರಧಾರೆ**

ಡಾ॥ ಅಂಬೇಡ್ಕರ್‌ರವರ ವಿಚಾರಧಾರೆ ಸ್ಪಷ್ಟವಾಗಿತ್ತು. ಅವರ ವಿಚಾರಧಾರೆ ಸಂವಿಧಾನದಲ್ಲಿ ಮೂರ್ತಗೊಂಡದ್ದು ಅವರಲ್ಲಿದ್ದ ಸಾಮಾಜಿಕ ಕಾಳಜಿಯ ಪ್ರತಿರೂಪವೆಂಬುದು ಅಷ್ಟೇ ಸ್ಪಷ್ಟ. ರಾಜಕೀಯ ಪ್ರಜಾಪ್ರಭುತ್ವದಿಂದ ಸಾಮಾಜಿಕ ಮತ್ತು ಆರ್ಥಿಕ ಪ್ರಜಾಪ್ರಭುತ್ವ ಅಸ್ತಿತ್ವಕ್ಕೆ ಬಂದಲ್ಲಿ ಮಾತ್ರ ಸಾಮಾಜಿಕ ನ್ಯಾಯ ಜನತೆಗೆ ದೊರೆಯುವುದೆಂಬುದು ಅವರ ಅಭಿಪ್ರಾಯ ವಾಗಿತ್ತು. ಹಾಗೆಯೇ ಸಂವಿಧಾನದ ಗುರಿಗಳ ನಿಜವಾದ ಪರೀಕ್ಷೆಯೆಂದರೆ ಅದು ಅಲ್ಪಸಂಖ್ಯಾತರಿಗೆ ನೀಡುವ ರಕ್ಷಣೆಯೆಂಬುದು ಕೂಡ ಅವರ ಸ್ಪಷ್ಟ ನಿಲುವಾಗಿತ್ತು. ಅವರ ಈ ಸ್ಪಷ್ಟ ಪರಿಕಲ್ಪನೆಗಳು ಸಂವಿಧಾನದಲ್ಲಿ ಅಡಕ ಗೊಂಡಿರುವುದು ಅಂಬೇಡ್ಕರ್‌ರವರ ಸಾಮಾಜಿಕ ಬದ್ಧತೆಯ ಪ್ರತೀಕ. ಡಾ॥ ಅಂಬೇಡ್ಕರ್ ಭಾರತದಲ್ಲಿ ಬಹುಸಂಖ್ಯಾತರು ಅಲ್ಪಸಂಖ್ಯಾತರ ಮೇಲೆ ನಡೆಸುವ ಹಿಂಸಾಚಾರದ ಬಗ್ಗೆಯೂ ತಮ್ಮ ತೀವ್ರ ಆತಂಕವನ್ನು ವ್ಯಕ್ತಪಡಿಸಿದ್ದರು.

**ಸಾಮಾಜಿಕ ನ್ಯಾಯದ ಹರಿಕಾರ**

ಮಹಾತ್ಮ ಗಾಂಧಿಯವರನ್ನು ಭಾರತದ ಪಿತಾಮಹ ಎಂದು ಬಣ್ಣಿಸಲಾಗಿದೆ. ಡಾ॥ ಅಂಬೇಡ್ಕರ್‌ರವರನ್ನು ಭಾರತ ಸಂವಿಧಾನದ ಪಿತಾಮಹ ಅಥವಾ ಸಾಮಾಜಿಕ ನ್ಯಾಯದ ಹರಿಕಾರನೆಂದೂ ಬಣ್ಣಿಸಿದಲ್ಲಿ ಅದು ಉತ್ಪ್ರೇಕ್ಷೆಯಲ್ಲ.

**ವಿಲಾಸ್ ಆರ್. ದಾತಾರ್, ಮುರಳಿಧರ ಚಿಕ್ಕಮಗಳೂರು**
ನ್ಯಾಯವಾದಿಗಳು
ನಂ.೩, ೨ನೇ ಮಹಡಿ, ಡೈಯಾಗೊನಲ್ ರಸ್ತೆ, ವಿ.ವಿ.ಪುರಂ
ಬೆಂಗಳೂರು – ೫೬೦ ೦೦೪

# ಶೋಷಣೆಯ ಬದುಕು



**ಸಾ**ಕಾಯಿತು ಜೀವನದ
ಕರ್ತವ್ಯ ಕೊಡಿಸಿರುವ ಹಲವು
ಯಜಮಾನಿಕೆಯ ಜವಾಬ್ದಾರಿಗಳು
ಆತಂಕವಿರಲಿಲ್ಲ ಭಯವಿರಲಿಲ್ಲ...
ತಲೆಯಿಂದ ಹೆಗಲಿಗೆ, ಅಲ್ಲಿಂದ
ನರನಾಡಿ ರಕುತ ಒಂದೂ ಬಿಡದೆ
ಅಯೋಮಯ ಅರ್ಧ ಸಂವತ್ಸರಕೇ...!
ಬೇಕೆನಿಸುತಿದೆ ವಿಶ್ರಾಂತಿಯ ಕ್ಷಣಗಳು
ಯಾರು ಕೊಡುವವರು?
ದೊಡ್ಡೆಜಮಾನರೇ... ಧಣಿಗಳೇ....
ಬಾಳ ಯಜಮಾಂತಿಯೇ ಅಥವಾ
ಹುಟ್ಟಿಸಿ ಬೆಳೆಯುತಿಹ ಪುಂಡಪೋಕರಿ
ಉಂಡಾಡಿ ತಿರುಗಾಡಿ ಜಾಡ್ಯ
ಮಕ್ಕಳೇ ......!?

ಇಲ್ಲ, ನಾನು ಎಲ್ಲರಂತೆ ಕಾಲಕೆ
ನಮಿಸಲು ಮುಂದಾಗೆನು
ಅದು ನನಗೇನೂ ಮಾಡಲಿಲ್ಲ...
ಕೊಡಲೂ ಇಲ್ಲ....
ಅದರ ಅಷ್ಟ ದಿಕ್ಕುಗಳಲ್ಲಿ ಸಿಕ್ಕಿದ್ದು
ಬರೇ ಶೋಷಣೆ ಮಾತ್ರ......
ನಾನುಳಿದ ಮಂದಿಗಳಿಗೆ, ಪ್ರಕೃತಿಗೆ
ಏನು ಮಾಡದಿದ್ದರೂ....
ಸಜ್ಜನಿಕೆ ಶಾಪವಾಗಿದೆ ನನಗೆ
ಊಹುಂ ಶಾಪ ಕೊಡಲಿಲ್ಲ ಯಾರೂ!?

**ವಿ. ಸುಬ್ರಹ್ಮಣ್ಯ ಭಟ್**
ತುಂಬೆ ಪದವಿ ಪೂರ್ವ ಕಾಲೇಜು
ತುಂಬೆ – ೫೭೪ ೧೪೩, ಬಂಟ್ವಾಳ



ಕೋಚೆ ಸಾಹಿತ್ಯ ಯಾವ ಪ್ರಕಾರದ್ದೇ ಇರಲಿ, ಅದರಲ್ಲಿರುವುದು ಜನ ಒಳ್ಳೆಯ ಬದುಕನ್ನು ಅನುಸರಿಸಬೇಕು ಎನ್ನುವ ಪುರೋಗಾಮಿ ಧೋರಣೆ. ಜನತೆಗೆ ಅರಿವು ಮೂಡಿಸುವಂಥ ದೃಷ್ಟಿ . ಮಾನವೀಯ ಕಾಳಜಿ ಅವರ ಸಾಹಿತ್ಯದ ಅಂತಃಸ್ರೋತ. ಪ್ರಜಾಸತ್ತೆಯಲ್ಲಿ ಯಾರೊಬ್ಬರೂ ಮೇಲೂ ಅಲ್ಲ, ಕೀಳೂ ಅಲ್ಲ ಎಂಬ ಸರ್ವ ಸಮಾನತೆಯ ಸೂತ್ರಕ್ಕೆ ಧಕ್ಕೆ ಬಂದಾಗಲೆಲ್ಲ ಕೋಚೆ ಸಿಡಿದಿದ್ದಾರೆ. ಕೋಮುವಾದಿ ವಿರೋಧಿ ನೆಲೆಯ ಹೋರಾಟಗಳಲ್ಲಿ ತೊಡಗಿಕೊಂಡಿದ್ದಾರೆ. ಎಲ್ಲ ಜನಾಂಗದವರು ಸಮಾನರಾಗಿ ಬದುಕಬೇಕು, ಎಲ್ಲರಿಗೂ ಸಮಾನವಾದ ಅವಕಾಶಗಳಿರಬೇಕು ಎಂಬ ಆದರ್ಶದ ಚಿಂತನೆಯನ್ನು ಕೋಚೆ ತಮ್ಮ ಬರಹಗಳಲ್ಲಿ ಹಿಡಿದಿಟ್ಟವರು.

# ನಿಷ್ಠುರ ಮಾನವತಾವಾದಿ ಕೋ. ಚೆನ್ನಬಸಪ್ಪ

**ಲಕ್ಷ್ಮಣ ಕೊಡಸೆ**

ಸ್ವಾತಂತ್ರ್ಯ ಹೋರಾಟಗಾರ, ಕರ್ನಾಟಕ ಏಕೀಕರಣಕ್ಕಾಗಿ ಶ್ರಮಿಸಿದ ಧೀಮಂತ, ಕವಿ, ಕತೆಗಾರ, ಕಾದಂಬರಿಕಾರ, ವಾಗ್ಮಿ, ವಿಮರ್ಶಕ, ಪ್ರಬಂಧಕಾರ, ರಾಷ್ಟ್ರೀಯವಾದಿ, ನಾಡಪ್ರೇಮಿ, ನ್ಯಾಯವಾದಿ, ನ್ಯಾಯಾಧೀಶ, ತತ್ವಜಿಜ್ಞಾಸು, ಪತ್ರಿಕೋದ್ಯಮಿ, ಸಮಸಮಾಜ ನಿರ್ಮಾಣಕ್ಕಾಗಿ ಆಶಿಸಿದ ಮಾನವತಾವಾದಿ – ಈ ಎಲ್ಲಾ ಅಂಶಗಳೂ ಮೇಳೈಸಿದ್ದ ವ್ಯಕ್ತಿತ್ವ ಕೋಣನ ಚೆನ್ನಬಸಪ್ಪ ಅವರದು. ಕೋಚೆ ಎಂದೇ ಜನಪ್ರಿಯರಾಗಿದ್ದ ಅವರು ತಮ್ಮ ೯೮ನೆಯ ವರ್ಷದಲ್ಲಿ ೨೦೧೯ರ ಫೆಬ್ರವರಿ ೨೩ರಂದು ನಮ್ಮನ್ನಗಲಿದರು. ಎಡಪಂಥೀಯ ಒಲವು ಇಟ್ಟುಕೊಂಡಿದ್ದರೂ ಯಾವುದಕ್ಕೂ ತಮ್ಮನ್ನು ಸೀಮಿತಗೊಳಿಸಿಕೊಂಡವರಲ್ಲ. ಎಲ್ಲ ಬಗೆಯ ಪ್ರಗತಿಪರ ಚಿಂತನೆಗಳಿಗೆ ಮುಕ್ತರಾಗಿದ್ದ ಕೋಚೆ ನಾಡಿನ ಸಾಕ್ಷಿಪ್ರಜ್ಞೆಯಂತೆ ಬದುಕಿದ್ದರು. ಕನ್ನಡ, ಕರ್ನಾಟಕ ಮತ್ತು ಕನ್ನಡಿಗರ ಹಿತಕ್ಕಾಗಿ ಸದಾ ತುಡಿಯುತ್ತಿದ್ದ ಕೋಚೆ ಸಂವಿಧಾನದ ಆಶಯಗಳಿಗೆ ಧಕ್ಕೆ ಬಂದಾಗ ಕನಲುತ್ತಿದ್ದರು. ಅಕ್ರಮ, ಅನ್ಯಾಯಗಳ ವಿರುದ್ಧ ಸಿಡಿಯುತ್ತಿದ್ದರು.

ತಮ್ಮ ವಕೀಲಿ ವೃತ್ತಿಯ ಪ್ರಾರಂಭದ ವರ್ಷಗಳಲ್ಲಿ ಹೊರಡಿಸುತ್ತಿದ್ದ 'ರೈತ' ಎಂಬ ವಾರಪತ್ರಿಕೆಯ ೧೯೫೦ರ ಏಪ್ರಿಲ್ ೯ರ ಸಂಚಿಕೆಯಲ್ಲಿಯೇ ಅನ್ಯಾಯಗಳ ವಿರುದ್ಧದ ತಮ್ಮ ಧೋರಣೆಯನ್ನು ಅವರು ಹೀಗೆ ದಾಖಲಿಸಿದ್ದಾರೆ :

'ನಮ್ಮ ಪತ್ರಿಕೆ ಯಾವಾಗಲೂ ಪ್ರಗತಿ ಮತ್ತು ಸುಧಾರಣೆಗಾಗಿಯೇ ಹೆಣಗುತ್ತದೆ. ಲಾಭಕೋರತನವನ್ನಾಗಲೀ, ಅನ್ಯಾಯವನ್ನಾಗಲೀ ಎಂದಿಗೂ ಸಹಿಸುವುದಿಲ್ಲ. ಎಲ್ಲ ಪಕ್ಷಗಳ ಬಾಯಿಬಡುಕ ವಾಚಾಲ ರಾಜಕಾರಣಿಗಳನ್ನು ಜಗ್ಗಿ ಬರೆಯುತ್ತದೆ. ಯಾವ ಪಕ್ಷಕ್ಕೂ ಸೇರಲಾರೆವು. ಆದರೆ ವಿಶೇಷ ಸೌಲಭ್ಯ ಪಡೆದ ಜಾಲವನ್ನು, ದರೋಡೆಕೋರರನ್ನು ಯಾವಾಗಲೂ ವಿರೋಧಿಸುತ್ತೇವೆ... ಈ ಆದರ್ಶಗಳಿಂದ 'ರೈತ' ದಾರಿ ತಪ್ಪಿದರೆ ನಮ್ಮ ಓದುಗರು ಸದಾ ಎಚ್ಚರಿಸುತ್ತಿರಬೇಕೆಂದು ನಮ್ಮ ಪ್ರಾರ್ಥನೆ.'

ತಮ್ಮ ಬದುಕಿನುದ್ದಕ್ಕೂ ಅವರು ಇದೇ ಆದರ್ಶಗಳಿಗಾಗಿ ಶ್ರಮಿಸಿದವರು. ಜನಪರವಾಗಿ ತುಡಿಯುತ್ತಿದ್ದ, ಜನಜೀವನ ಸುಧಾರಣೆಗಾಗಿ ಸಾಹಿತ್ಯ ಶ್ರಮಿಸಬೇಕು ಎಂದು ಪ್ರತಿಪಾದಿಸುತ್ತಿದ್ದ ಕೋಚೆ ಕವಿಯಾಗಿ ಸಾಹಿತ್ಯ ಕ್ಷೇತ್ರ ಪ್ರವೇಶಿಸಿದವರು. ಕತೆ, ಕಾದಂಬರಿ, ನಾಟಕ, ಜೀವನ ಚರಿತ್ರೆ, ವಿಮರ್ಶೆ, ಪ್ರಬಂಧ, ಅನುವಾದ ಮತ್ತು ವಿಚಾರ ಸಾಹಿತ್ಯಗಳಲ್ಲಿ ಕೃಷಿ ನಡೆಸಿ ಸಾರ್ಥಕತೆಯನ್ನು ಪಡೆದವರು. ಪತ್ರಕರ್ತರಾಗಿ ಸಾರ್ವಜನಿಕ ಸೇವಾರಂಗ ಪ್ರವೇಶಿಸಿದ ಅವರು ನ್ಯಾಯವಾದಿಯಾಗಿ, ನ್ಯಾಯಾಧೀಶರಾಗಿ ಕರ್ತವ್ಯ ನಿರ್ವಹಿಸಿದವರು. ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿ ಸೆರೆವಾಸ ಅನುಭವಿಸಿದ ಹೋರಾಟಗಾರ ಕೋಚೆ, ನಂತರದ ಕರ್ನಾಟಕ ಏಕೀಕರಣ ಚಳವಳಿಯಲ್ಲಿಯೂ ಹೋರಾಟದ ಮುಂಚೂಣಿಯಲ್ಲಿದ್ದವರು. ನ್ಯಾಯಾಧೀಶರಾಗಿ ನಿವೃತ್ತಿ ಹೊಂದಿದ ನಂತರವೂ ನಾಡಿನ ಹಲವಾರು ಜನಪರ ಹೋರಾಟಗಳಲ್ಲಿ ತೊಡಗಿಕೊಂಡವರು.

ಕೋ. ಚೆನ್ನಬಸಪ್ಪ (ಜನನ : ೧೯೨೨, ಫೆಬ್ರವರಿ ೨೭) ಅವರ ಪೂರ್ವಿಕರಾದ ಕೋಣನ ವೀರಣ್ಣ ಮೈಸೂರು ಸಂಸ್ಥಾನದಿಂದ (ಶಿವಮೊಗ್ಗ ಕಡೆಯಿಂದ) ಬಳ್ಳಾರಿ ಜಿಲ್ಲೆಗೆ ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ವಲಸೆ ಬಂದವರು (ಕೋಣಗಳ ಮೇಲೆ ಹೇರನ್ನು ಸಾಗಿಸುತ್ತಿದ್ದ ವ್ಯಾಪಾರಿ ಕುಟುಂಬವಾದ್ದರಿಂದ ಕೋಣನ ಎಂಬುದು ಮನೆತನದ ಅಡ್ಡಹೆಸರಾಗಿ ಬಳಕೆಗೆ ಬಂದಿತು). ಕೂಡ್ಲಿಗಿ ತಾಲ್ಲೂಕಿನ ಮಜರೆ ಗ್ರಾಮ ಕಾನಾಮಡುಗು ಎಂಬಲ್ಲಿ ನೆಲೆ ನಿಂತರು. ವೀರಣ್ಣ–ಬಸಮ್ಮ ದಂಪತಿಯ ಹಿರಿಯ ಪುತ್ರರಾಗಿ ಜನಿಸಿದ ಕೋಚೆ ಅವರ ಬಾಲ್ಯದ ವಿದ್ಯಾಭ್ಯಾಸ ತಾಯಿಯ ತವರೂರಿನಲ್ಲಿ ಆಯಿತು. ಹೈಸ್ಕೂಲು ಶಿಕ್ಷಣ ಬಳ್ಳಾರಿಯಲ್ಲಿ ಮತ್ತು ಕಾಲೇಜು ಶಿಕ್ಷಣ ಈಗಿನ ಆಂಧ್ರಪ್ರದೇಶದ ಅನಂತಪುರದಲ್ಲಾಯಿತು. ಬೆಳಗಾವಿಯ ರಾಜಾ ಲಖಮಗೌಡ ಕಾನೂನು ಮಹಾವಿದ್ಯಾಲಯದಲ್ಲಿ ಕಾನೂನು ಪದವಿ ಪಡೆದರು.

ಬಳ್ಳಾರಿಯಲ್ಲಿ ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗ ಪ್ರತಿವರ್ಷ ನವರಾತ್ರಿಯಲ್ಲಿ ಆಚರಿಸಲಾಗುತ್ತಿದ್ದ ನಾಡಹಬ್ಬ ಕೋಚೆ ಅವರಲ್ಲಿ ಸುಪ್ತವಾಗಿದ್ದ ಪ್ರತಿಭೆಯನ್ನು ಉದ್ದೀಪನಗೊಳಿಸಿತು. ನಾಡಹಬ್ಬದಲ್ಲಿ ನಾಡಿನ ಪ್ರಸಿದ್ಧ ಸಾಹಿತಿಗಳು ಸಾಹಿತ್ಯ ಸಂಸ್ಕೃತಿಯನ್ನು ಕುರಿತು ಸಾಮಾನ್ಯ ಜನರಿಗೆ, ವಿದ್ಯಾರ್ಥಿಗಳಿಗೆ, ವರ್ತಕರಿಗೆ, ವೈದ್ಯರಿಗೆ, ವಕೀಲರಿಗೆ ತಿಳಿಯುವಂತೆ ಗಹನ ವಿಚಾರಗಳನ್ನು ಪ್ರಾಚೀನ ಕನ್ನಡ ಕಾವ್ಯಗಳನ್ನು ಆಧರಿಸಿ ಉಪನ್ಯಾಸ ನೀಡುತ್ತಿದ್ದರು. ಬಳ್ಳಾರಿಯಲ್ಲಿದ್ದ ನಾಲ್ಕೂ ವರ್ಷ ಕೋಚೆ ಆ ಭಾಷಣಗಳನ್ನು ತಪ್ಪದೆ ಕೇಳುತ್ತಿದ್ದರು. ೧೯೩೮ರಲ್ಲಿ ಬಳ್ಳಾರಿಯಲ್ಲಿ ರಂಗನಾಥ ದಿವಾಕರ ಅವರ ಅಧ್ಯಕ್ಷತೆಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆದಾಗ ವಿದ್ಯಾರ್ಥಿ ಕೋಚೆ ಅವರು ತಾವಿದ್ದ ವಿದ್ಯಾರ್ಥಿನಿಲಯದಲ್ಲಿ ತಂಗಿದ್ದ ಗಣ್ಯ ಅತಿಥಿಗಳಿಗೆ ಸ್ವಯಂಸೇವಕರಾಗಿ ಕಾರ್ಯ ನಿರ್ವಹಿಸಿದರು. ಬಿ.ಎಂ.ಶ್ರೀ., ಫ. ಗು. ಹಳಕಟ್ಟಿ, ಟಿ. ಎಸ್. ವೆಂಕಣ್ಣಯ್ಯ, ಎ. ಆರ್. ಕೃಷ್ಣಶಾಸ್ತ್ರಿ, ಅ.ನ.ಕೃ, ಜಿ. ಪಿ. ರಾಜರತ್ನಂ ಮೊದಲಾದ ಸಾಹಿತಿಗಳನ್ನು ಹತ್ತಿರದಿಂದ ನೋಡುವ ಅವಕಾಶ. ಸಮ್ಮೇಳನಕ್ಕೆ ಬಂದಿದ್ದ ಸಾಹಿತಿಗಳನ್ನು ನೋಡಿ ಅವರ ಕೃತಿಗಳನ್ನು

ಇತ್ತೀಚೆಗೆ ನಮ್ಮನ್ನಗಲಿದ ಖ್ಯಾತ ನ್ಯಾಯಾಧೀಶರೂ, ಹಿರಿಯ ಸ್ವಾತಂತ್ರ್ಯ ಹೋರಾಟಗಾರರೂ, ಲೇಖಕರೂ, ಜನಪರ ಚಿಂತಕರೂ ಆಗಿದ್ದ ಶ್ರೀ ಕೋ. ಚೆನ್ನಬಸಪ್ಪ ಅವರ ಗೌರವಾರ್ಥ ಸಂತಾಪ ಸಭೆ ದಿನಾಂಕ ೦೫-೦೩-೨೦೧೯ರಂದು ನವಕರ್ನಾಟಕ ಪ್ರಕಾಶನದ ಪ್ರಧಾನ ಕಚೇರಿಯಲ್ಲಿ ನಡೆಯಿತು.

ಸಭೆಯಲ್ಲಿ ಅನೇಕ ಹಿರಿಯರು, ಚಿಂತಕರು ಹಾಗೂ ಕೋಚೆಯವರ ಕುಟುಂಬ ವರ್ಗದವರು ಭಾಗವಹಿಸಿ, ಅವರೊಂದಿಗಿನ ಒಡನಾಟದ ಕೆಲವು ಅಪೂರ್ವ ಕ್ಷಣಗಳನ್ನು ಹಂಚಿಕೊಂಡರು.

ಓದುವುದರ ಮೂಲಕ ತಮ್ಮ ಸಾಹಿತ್ಯ ಬದುಕಿಗೆ ಭದ್ರ ಬುನಾದಿಯನ್ನು ಹಾಕಿಕೊಂಡರು.

ಕೋಚೆ ಅವರು ಬರೆದ ಮೊದಲ ಕವಿತೆ ಆಗ ಇದ್ದ 'ಶರಣ ಸಂದೇಶ'ದಲ್ಲಿ ಪ್ರಕಟವಾದಾಗ ತಾನೂ ಬರೆಯಬಲ್ಲೆನೆಂಬ ವಿಶ್ವಾಸ ಮೂಡಿತು. ಆ ವೇಳೆಗೆ 'ಜನ ಬದುಕಬೇಕೆಂದು ಕಾವ್ಯಮುಖದಿಂ ಪೇಳ್ದೆನ್ ಅನಪೇಕ್ಷೆಯಿಂದ...' ಎಂಬ ರಾಘವಾಂಕನ ಕಾವ್ಯದೃಷ್ಟಿಯ ಪರಿಚಯವೂ ಕೋಚೆ ಅವರಿಗೆ ಆಗಿತ್ತು. ತಮ್ಮ ಬರವಣಿಗೆಯ ಆದರ್ಶವೇ 'ಕಡೆಗಾಣಲೀ ಜೀವ ದೀನರಿಗೆ ಮುಡಿಪಾಗಿ...' ಎಂಬುದಾಯಿತು.

ಈ ಸಂಕಲ್ಪದಿಂದ ಸಾಹಿತ್ಯಲೋಕಕ್ಕೆ ಕಾಲಿಟ್ಟ ಕೋಚೆ ಅನಂತಪುರ ಕಾಲೇಜಿನಲ್ಲಿ ಓದುತ್ತಿದ್ದಾಗ ಗೆಳೆಯರೊಬ್ಬರ ಮೂಲಕ ಕುವೆಂಪು ಅವರ 'ಸ್ವಾಮಿ ವಿವೇಕಾನಂದ' ಕೃತಿಯ ಪರಿಚಯವಾಯಿತು. ಅದು ಅವರಲ್ಲಿ ಸುಪ್ತವಾಗಿದ್ದ ಅಧ್ಯಾತ್ಮ ಚೇತನವನ್ನು ಜಾಗ್ರತಗೊಳಿಸಿತು. ಬಾಲ್ಯದಿಂದ ಬಂದಿದ್ದ ಶರಣಧರ್ಮದ ಸಂಸ್ಕಾರದ ಬುನಾದಿಯ ಮೇಲೆ ಶ್ರೀರಾಮಕೃಷ್ಣ, ವಿವೇಕಾನಂದರ ಅಧ್ಯಾತ್ಮ ದೃಷ್ಟಿ ಮೇಳೈಸಿತು. ಇದು ಚಿನ್ನಕ್ಕೆ ಪರಿಮಳ ಇಟ್ಟಂತಾಯಿತು. ಕೋಚೆ ಅವರ ಈ ಜೀವನದೃಷ್ಟಿಯೇ ಅವರ ವಿಪುಲ ಸಾಹಿತ್ಯದ ಹಿಂದಿದ್ದ ಪ್ರೇರಣೆ. ಸಾಹಿತ್ಯ ಮಾರ್ಗದಲ್ಲಿ ಒಂದೆಡೆ ಬೇಂದ್ರೆ, ಇನ್ನೊಂದೆಡೆ ಕುವೆಂಪು ಕೋಚೆ ಅವರನ್ನು ಪ್ರಭಾವಿಸಿದರು. ಬೇಂದ್ರೆಯವರಿಂದ ಅರವಿಂದರ ಸಾಹಿತ್ಯ ದರ್ಶನ ಲಾಭ ಪಡೆದ ಅವರು ಕುವೆಂಪು ಅವರಿಂದ ರಾಮಕೃಷ್ಣ ಮತ್ತು ವಿವೇಕಾನಂದರ ವೇದಾಂತ ದರ್ಶನದ ಸೆಳವಿಗೆ ಒಳಪಟ್ಟರು. ಕೋಚೆ ಅವರ ಬಹುಪಾಲು ಸಾಹಿತ್ಯಸೃಷ್ಟಿಯ ಮೂಲಸ್ಫೂರ್ತಿ ಕುವೆಂಪು. ಕಾಲಕ್ರಮೇಣ ಕುವೆಂಪು ಅವರ ನಿಕಟವರ್ತಿಯೂ ಆದರು ಕೋಚೆ. ಈ ಸಾಂಗತ್ಯದ ಫಲವೇ ಕುವೆಂಪು ಅವರ ಮೇರುಕೃತಿ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯಕ್ಕೆ ಪ್ರವೇಶಿಕೆಯಂತೆ ರಚಿತವಾಗಿರುವ ಕೋಚೆ ಅವರ 'ಶ್ರೀರಾಮಾಯಣ ದರ್ಶನಂ ಮಹಾಕಾವ್ಯ ಸಮೀಕ್ಷೆ'.

ಸುಮಾರು ಅರವತ್ತು ವರ್ಷಗಳಿಂದ ಸಾಹಿತ್ಯ ಕೃಷಿಯಲ್ಲಿ ತೊಡಗಿರುವ ಕೋಚೆ ಕನ್ನಡದ ಯಾವ ಅಕಡೆಮಿಕ್ ಸಾಹಿತಿಗೂ ಕಡಿಮೆ ಇಲ್ಲದಷ್ಟು ವೈವಿಧ್ಯಮಯ ಸಾಹಿತ್ಯ ರಚಿಸಿದ್ದಾರೆ. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಕೃಷಿ ಮಾಡಿದ್ದಾರೆ. ಗ್ರಂಥ ಸಂಪಾದನೆಯಂಥ ಕ್ಲಿಷ್ಟ ಕ್ಷೇತ್ರದಲ್ಲಿಯೂ ಪರಿಶ್ರಮ ಪಟ್ಟಿದ್ದಾರೆ. ಹರಿಹರ ಕವಿಯ 'ರಕ್ಷಾಶತಕಂ' ಕೋಚೆ ಅವರು ಸಂಪಾದಿಸಿದ ಹಳಗನ್ನಡ ಕಾವ್ಯ. ಅವರು ಕನ್ನಡ ಭಾಷೆಯನ್ನು ಶಾಸ್ತ್ರೀಯವಾಗಿ ಅಧ್ಯಯನ ನಡೆಸಿದವರಲ್ಲ. ಜೀವನ ನಿರ್ವಹಣೆಗೆ ವಕೀಲಿ ವೃತ್ತಿ ಹಿಡಿದಿದ್ದರು. ಕೆಲವು ವರ್ಷ ಸರ್ಕಾರಿ ವಕೀಲರಾಗಿ ಕಾರ್ಯ ನಿರ್ವಹಿಸಿದರು. ನಂತರ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿದ್ದು ಕಾರ್ಯ ನಿರ್ವಹಿಸಿದರು (೧೯೬೫ರಿಂದ ೧೯೭೭). ನ್ಯಾಯಾಧೀಶರಾಗಿದ್ದು ನಿವೃತ್ತಿ ಹೊಂದಿದ ನಂತರವೂ ವಕೀಲಿ ವೃತ್ತಿಯನ್ನು ಮುಂದುವರಿಸಿದರು. ಆದರೆ ವೃತ್ತಿಯ ಎಡೆಬಿಡದ ಒತ್ತಡದಲ್ಲಿಯೂ ಸೃಜನಶೀಲ ಸಾಹಿತ್ಯವನ್ನೂ, ಅನುವಾದ ಸಾಹಿತ್ಯವನ್ನೂ ವ್ರತದಂತೆ ಮುಂದುವರಿಸಿಕೊಂಡು ಬಂದರು.

ನ್ಯಾಯಾಧೀಶರಾಗಿದ್ದು ಸಾಹಿತಿಗಳಾದವರ ಪಟ್ಟಿ ಕನ್ನಡದಲ್ಲಿ ದೊಡ್ಡದೇನಲ್ಲ. ಕೆರೂರು ವಾಸುದೇವಾಚಾರ್ಯ, ವಚನಸಾಹಿತ್ಯ ಸಂಗ್ರಹದಲ್ಲಿ ಪಿತಾಮಹರೆಂಬ ಗೌರವಕ್ಕೆ ಪಾತ್ರರಾದ ಫ. ಗು. ಹಳಕಟ್ಟಿ, ಕನ್ನಡ ಕುಲಪುರೋಹಿತರೆಂದು ಮನ್ನಣೆ ಪಡೆದ ಆಲೂರು ವೆಂಕಟರಾಯರು, ಕಪಟರಾಳ ಕೃಷ್ಣರಾವ್, ದಿನಕರ ದೇಸಾಯಿ ಇಂಥ ಪ್ರಾತಃಸ್ಮರಣೀಯರ ಸಾಲಿಗೆ ಸೇರಿದವರು ಕೋಚೆ. ಇವರಲ್ಲಿ ದಿನಕರ ದೇಸಾಯಿ ರೈತ – ಕಾರ್ಮಿಕರ ಹೋರಾಟದಲ್ಲಿ ಮುಂಚೂಣಿಯಲ್ಲಿದ್ದರು. ಕೋಚೆ ಸ್ವಾತಂತ್ರ್ಯ ಹೋರಾಟದಲ್ಲಿ ನೇರವಾಗಿ ಭಾಗಿಯಾಗಿ ಸೆರೆವಾಸ ಅನುಭವಿಸಿದವರು. ನಂತರ ಕರ್ನಾಟಕ ಏಕೀಕರಣ ಚಳವಳಿಯಲ್ಲಿಯೂ ಮುಂದೆ ನಿಂತು ಆಗ ಮದ್ರಾಸ್ ಪ್ರಾಂತ್ಯದ ವಶದಲ್ಲಿದ್ದು, ನಂತರ ಆಂಧ್ರಪ್ರದೇಶಕ್ಕೆ ಸೇರ್ಪಡೆಯಾಗಲಿದ್ದ ಬಳ್ಳಾರಿಯನ್ನು ಕರ್ನಾಟಕದಲ್ಲಿ ಉಳಿಸಿಕೊಳ್ಳಲು ಕಾರಣರಾದರು.

ಕೋಚೆ ಸಾಹಿತ್ಯ ಯಾವ ಪ್ರಕಾರದ್ದೇ ಇರಲಿ, ಅದರಲ್ಲಿರುವುದು ಜನ ಒಳ್ಳೆಯ ಬದುಕನ್ನು ಅನುಸರಿಸಬೇಕು ಎನ್ನುವ ಪುರೋಗಾಮಿ ಧೋರಣೆ. ಜನತೆಗೆ ಅರಿವು ಮೂಡಿಸುವಂಥ ದೃಷ್ಟಿ. ಮಾನವೀಯ ಕಾಳಜಿ ಅವರ ಸಾಹಿತ್ಯದ ಅಂತಃಸ್ರೋತ. ಪ್ರಜಾಸತ್ತೆಯಲ್ಲಿ ಯಾರೊಬ್ಬರೂ ಮೇಲೂ ಅಲ್ಲ, ಕೀಳೂ ಅಲ್ಲ ಎಂಬ ಸರ್ವ ಸಮಾನತೆಯ ಸೂತ್ರಕ್ಕೆ ಧಕ್ಕೆ ಬಂದಾಗಲೆಲ್ಲ ಕೋಚೆ ಸಿಡಿದಿದ್ದಾರೆ. ಕೋಮುವಾದಿ ವಿರೋಧಿ ನೆಲೆಯ ಹೋರಾಟಗಳಲ್ಲಿ ತೊಡಗಿಕೊಂಡಿದ್ದಾರೆ. ಎಲ್ಲ ಜನಾಂಗದವರು ಸಮಾನರಾಗಿ ಬದುಕಬೇಕು, ಎಲ್ಲರಿಗೂ ಸಮಾನವಾದ ಅವಕಾಶಗಳಿರಬೇಕು ಎಂಬ ಆದರ್ಶದ ಚಿಂತನೆಯನ್ನು ಕೋಚೆ ತಮ್ಮ ಬರಹಗಳಲ್ಲಿ ಹಿಡಿದಿಟ್ಟವರು. ಅವರ ಮೂರು ಕವನ ಸಂಕಲನಗಳು (ಪ್ರಾಣಪಕ್ಷಿ, ಜೀವತೀರ್ಥ, ಹೃದಯ ನೈವೇದ್ಯ), ಆರು ಕಥಾಸಂಕಲನಗಳು (ಗಡೀಪಾರು, ನಮ್ಮೂರ ದೀಪ ಮತ್ತು ಇತರ ಕತೆಗಳು, ಆ ಮುಖ ಈ ಮುಖ, ಗಾಯಕನಿಲ್ಲದ ಸಂಗೀತ, ಉಂಡವನೇ ಜಾಣ, ನ್ಯಾಯಾಲಯದ ಸತ್ಯಕಥೆಗಳು), ಎಂಟು ಕಾದಂಬರಿಗಳು (ಹಿಂದಿರುಗಿ ಬರಲಿಲ್ಲ, ದಿವಾನ್ ಬಹದ್ದೂರ್, ನೊಗದ ನೇಣು, ವಿಜಯನಗರದ ಶ್ರೀಕೃಷ್ಣದೇವರಾಯ, ಪೂರ್ಣವತಿ, ರಕ್ತತರ್ಪಣ, ಬೆಳಕು ಹರಿಯಿತು, ಬೇಡಿ ಕಳಚಿತು ದೇಶ ಒಡೆಯಿತು), ಅಲ್ಲದೆ ಶ್ರೀ ಅರವಿಂದರು, ಶ್ರೀಮಾತೆ, ಶ್ರೀ ಮೃತ್ಯುಂಜಯ ಸ್ವಾಮಿಗಳು, ದೀನಬಂಧು ಬಸವಣ್ಣ, ಶ್ರೀ ನಿಜಲಿಂಗಪ್ಪ ಅವರ ಜೀವನಚರಿತ್ರೆ ಕೋಚೆ ಅವರ ಸಾಹಿತ್ಯ ಸಮೃದ್ಧಿಗೆ ನಿದರ್ಶನಗಳು. 'ಶ್ರೀರಾಮಾಯಣ ದರ್ಶನಂ ಮಹಾಕಾವ್ಯ ಸಮೀಕ್ಷೆ' ಕೋಚೆ ಅವರ ವಿಮರ್ಶಾ ಕೃತಿಗಳಲ್ಲಿ ಅತ್ಯುತ್ತಮವಾದುದು. ಅರವಿಂದರ 'ದಿವ್ಯಜೀವನ' ಮತ್ತು 'ಸಾವಿತ್ರಿ' ಮಹಾಕಾವ್ಯ ಸೇರಿದಂತೆ ಹದಿನಾರು ಅನುವಾದಿತ ಕೃತಿಗಳನ್ನು









ಕೋಚೆ ಪ್ರಕಟಿಸಿದ್ದಾರೆ. ಆಧ್ಯಾತ್ಮಿಕ ಶ್ರದ್ಧೆಗೆ ಒಳಪಟ್ಟ ಅವರ ಅನುವಾದಗಳು ತಾತ್ವಿಕ ಚಿಂತನೆಯಿಂದ ಕೂಡಿವೆ. ಕೋಚೆ ಅವರ ಅನುವಾದ ಕೃತಿಗಳಲ್ಲಿ ಅಧ್ಯಾತ್ಮ, ಇತಿಹಾಸ, ರಾಜಕೀಯದ ಪುನರ್ ಮೌಲ್ಯೀಕರಣ ಮುಖ್ಯ ವಿಷಯಗಳಾಗಿರುವುದು ಕಂಡುಬರುತ್ತದೆ.

ಕರ್ನಾಟಕ ಏಕೀಕರಣಕ್ಕಾಗಿ ಶ್ರಮಿಸಿದ, ಸ್ವಾತಂತ್ರ್ಯ ಹೋರಾಟಗಾರರಾಗಿ ಸೆರೆವಾಸ ಅನುಭವಿಸಿದ್ದ, ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಜನಪರವಾಗಿ ಚಿಂತನೆ ನಡೆಸಿದ ಹಿರಿಯ ಲೇಖಕ ಕೋಚೆ ಅವರನ್ನು ವಿಜಯಪುರದಲ್ಲಿ ನಡೆದ ೭೯ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರನ್ನಾಗಿ ಸರ್ವಾನುಮತದಿಂದ ಆಯ್ಕೆ ಮಾಡುವ ಮೂಲಕ ಕನ್ನಡ ಸಾಹಿತ್ಯ ಪರಿಷತ್ತು ಕೋಚೆ ಅವರ ಬಹುಮುಖ ಸಾಹಿತ್ಯ ಸೇವೆಗೆ ನಾಡವರ ಪರವಾಗಿ ಕೃತಜ್ಞತೆ ಸಲ್ಲಿಸಿದೆ. ಸಮ್ಮೇಳನದ ಅಧ್ಯಕ್ಷತೆಯನ್ನು ವಶೀಲಿ– ಪ್ರಭಾವಗಳು ನಿರ್ಧರಿಸುತ್ತಿರುವ ಈ ದಿನಗಳಲ್ಲಿಯೂ ವಯಸ್ಸೊಂದನ್ನು ಮಾತ್ರವೇ ಮಾನದಂಡವಾಗಿ ಪರಿಗಣಿಸದೆ ವೈವಿಧ್ಯಮಯ ಮೌಲಿಕ ಸಾಹಿತ್ಯ ಮತ್ತು ಸರ್ವಸಮಾನತೆಯ ಜೀವನದೃಷ್ಟಿಯನ್ನು ಪರಿಗಣಿಸಿ ಕೋಚೆ ಅವರನ್ನು ಆಯ್ಕೆ ಮಾಡಿರುವ ರೀತಿಯೇ ಶ್ಲಾಘನೀಯವಾದದ್ದು.

ಬಳ್ಳಾರಿಯಿಂದ ಪತ್ರವ್ಯವಹಾರಗಳ ಮೂಲಕ ಕುವೆಂಪು ಅವರ ಸಂಪರ್ಕಕ್ಕೆ ಬಂದಿದ್ದ ಕೋಚೆ ಕನ್ನಡ ಹಾಗೂ ಅಧ್ಯಾತ್ಮ ಚಿಂತನೆಯ ಸಮಾನತೆಯ ಕಾರಣ ಇನ್ನಷ್ಟು ನಿಕಟವಾದರು. ಕುವೆಂಪು ಅವರನ್ನು ಗುರುಭಾವದಿಂದ ಪರಿಭಾವಿಸಿದ್ದ ಕೋಚೆ ಸ್ವತಃ ಅವರನ್ನು ಸಂದರ್ಶಿಸಿ ಬರೆದ ಲೇಖನಗಳು ಈಗ ಐತಿಹಾಸಿಕ ಮಹತ್ವದ ದಾಖಲೆಗಳೆನಿಸಿವೆ. 'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯ ರಚನೆಯ ನಂತರ ಕುವೆಂಪು ಪ್ರಾರಂಭಿಸಿದ್ದ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಪ್ರಗತಿಯ ಕುರಿತಾಗಿ ಕೋಚೆ ಅವರೊಂದಿಗೆ ಪ್ರಸ್ತಾಪಿಸುತ್ತಾ ಇದ್ದುದು ಕೋಚೆ ಅವರಲ್ಲಿ ಕುವೆಂಪು ಇಟ್ಟುಕೊಂಡಿದ್ದ ವಿಶ್ವಾಸಕ್ಕೆ ನಿದರ್ಶನದಂತಿದೆ. ೧೮೫೭ರಿಂದ ೧೯೪೭ರವರೆಗೆ ದೇಶದ ಸ್ವಾತಂತ್ರ್ಯ ಹೋರಾಟದ ಇತಿಹಾಸವನ್ನು ಒಂದು ವಿಶಾಲ ಕಥಾಭಿತ್ತಿಯಲ್ಲಿ 'ಕಾಲೋಸ್ಮಿ' ಎಂಬ ಹೆಸರಿನ ಕಾದಂಬರಿಯನ್ನು ಬರೆಯುವ ಸಿದ್ಧತೆ ನಡೆಸಿದ್ದನ್ನು ಕುವೆಂಪು ಅವರು ಕೋಚೆ ಅವರಲ್ಲಿ ಮಾತ್ರವೇ ಹೇಳಿಕೊಂಡಿದ್ದನ್ನು ಪೂರ್ಣಚಂದ್ರ ತೇಜಸ್ವಿ ಅವರು ತಮ್ಮ ಬರಹವೊಂದರಲ್ಲಿ ದಾಖಲಿಸಿದ್ದಾರೆ.

ಸ್ವಾತಂತ್ರ್ಯ ಹೋರಾಟದ ಕಥೆಯನ್ನು ಕುವೆಂಪು ಬರೆಯಲಿಲ್ಲ. ಆದರೆ ಅದೇ ಎಳೆಯನ್ನು ಹಿಡಿದುಕೊಂಡು ಕೋಚೆ ಅವರು ಕನ್ನಡಕ್ಕೆ ಅಪರೂಪದ್ದೆನಿಸಿದ 'ಬೇಡಿ ಕಳಚಿತು, ದೇಶ ಒಡೆಯಿತು' (ನವಕರ್ನಾಟಕ ಪ್ರಕಾಶನ) ಎಂಬ ಬೃಹತ್ ಕಾದಂಬರಿಯನ್ನು ರಚಿಸಿದರು. ಸ್ವಾತಂತ್ರ್ಯ ಹೋರಾಟದಲ್ಲಿ ಮುಂಚೂಣಿಯ ನಾಯಕರೊಂದಿಗೆ ಜನಸಾಮಾನ್ಯರೂ ಹೇಗೆ ಕೈಜೋಡಿಸಿದರೆಂಬ ವಿವರಗಳನ್ನು ಅನೇಕ ಕಲ್ಪಿತ ಪಾತ್ರಗಳ ಮೂಲಕ ಕಟ್ಟಿಕೊಟ್ಟರು. ಒಂದು ಸಾವಿರ ಪುಟಗಳಷ್ಟು ವಿಸ್ತಾರವಾಗಿ ವ್ಯಾಪಿಸಿದ ಕೋಚೆ ಅವರ ಮಹತ್ವಾಕಾಂಕ್ಷೆಯ ಕಾದಂಬರಿ ಕನ್ನಡದಲ್ಲಿ ಸ್ವಾತಂತ್ರ್ಯ ಹೋರಾಟದ ಸಾಹಿತ್ಯ ಕೃತಿಗಳಲ್ಲಿಯೇ ಅನನ್ಯವಾದುದು. ಸ್ವಾತಂತ್ರ್ಯ ಹೋರಾಟ ಕಾಲದ ವಿವರಗಳನ್ನು ಅಧಿಕೃತ ದಾಖಲೆಗಳನ್ನು ಆಧರಿಸಿ ಬರೆದಿರುವುದನ್ನು ಗಣ್ಯ ವಿದ್ವಾಂಸರು ಶ್ಲಾಘಿಸಿದ್ದಾರೆ. ಅಧಿಕೃತ ದಾಖಲೆಗಳನ್ನು ಆಧರಿಸಿದ ಸ್ವಾತಂತ್ರ್ಯ ಹೋರಾಟ ಕಾಲದ ಮಹತ್ವದ ಸಾಹಿತ್ಯ ಕೃತಿ ಎಂದು ಜಿ. ಎಸ್. ಶಿವರುದ್ರಪ್ಪನವರು ಬಣ್ಣಿಸಿದ್ದನ್ನು ಕೋಚೆ ಅವರು ಆಗಾಗ ನೆನಪು ಮಾಡಿಕೊಳ್ಳುತ್ತಿದ್ದರು.

ಟೀಪು ಸುಲ್ತಾನನ ವಿರುದ್ಧ ಡಾ॥ ಚಿದಾನಂದಮೂರ್ತಿ ನೇತೃತ್ವದ ಸಂಘಪರಿವಾರ ಹರಿಹಾಯುತ್ತಾ ಅಪಪ್ರಚಾರದಲ್ಲಿ ತೊಡಗಿದ್ದಾಗ ನ್ಯಾಯನಿಷ್ಠುರಿಯಾಗಿದ್ದ ಕೋಚೆ ಇತಿಹಾಸದ ಪುಟಗಳಿಂದ ದಾಖಲೆಗಳನ್ನು ಹುಡುಕಿ ತೆಗೆದು 'ಹಿಂದೂ ಧರ್ಮರಕ್ಷಕ ಟೀಪು ಸುಲ್ತಾನ್' ಎಂಬ ಕೃತಿಯನ್ನೇ ಬರೆದರು. ಅಧಿಕೃತ ಸಾಕ್ಷ್ಯಗಳನ್ನು ಆಧರಿಸಿ ನ್ಯಾಯನಿರ್ಣಯ ಮಾಡುವ ನ್ಯಾಯಾಧೀಶರಾಗಿದ್ದ ಕೋಚೆ ಟೀಪೂ ಕುರಿತಾಗಿ ಬಂದ ಮಹತ್ವದ ದಾಖಲೆಗಳನ್ನು ಅಧ್ಯಯನ ಮಾಡಿ ಈ ಕೃತಿಯನ್ನು ರಚಿಸಿ ಟೀಕಾಕಾರರಿಗೆ ಉತ್ತರ ನೀಡಿದ್ದರು. ಅಲ್ಲದೆ, 'ಕೆಚ್ಚೆದೆಯ ಅಚ್ಚಕನ್ನಡಿಗ ಟೀಪು ಸುಲ್ತಾನ' ಎಂಬ ಇನ್ನೊಂದು ಕೃತಿಯನ್ನೂ ಸಂಪಾದಿಸಿ ಹೊರತರುವುದಕ್ಕೆ ಒತ್ತಾಸೆಯಾದರು. (ಈ ಎರಡೂ ಕೃತಿಗಳನ್ನು ನವಕರ್ನಾಟಕ ಸಂಸ್ಥೆ ಪ್ರಕಟಿಸಿದೆ).

ಕನ್ನಡ ಸಾಹಿತ್ಯ ಪರಿಷತ್ತು ತಮ್ಮನ್ನು ೭೯ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರನ್ನಾಗಿ ಆಯ್ಕೆಮಾಡಿದ ಕಾರಣಕ್ಕೆ ಸಾಹಿತ್ಯ ಪರಿಷತ್ತಿನ ಆಡಳಿತ ಮಂಡಲಿಯ ನಡವಳಿಕೆಯ ಬಗ್ಗೆ ಮೃದು ಧೋರಣೆಯನ್ನೇನೂ ಅವರು ತಾಳಿದವರಲ್ಲ. ಈಗಿನ (೨೦೧೯ರಲ್ಲಿ) ಆಡಳಿತ ಮಂಡಲಿ ಅಧ್ಯಕ್ಷರ ಸರ್ವಾಧಿಕಾರ ಧೋರಣೆಯಿಂದ ಅಧಿಕಾರದ ಅವಧಿಯನ್ನು ಮೂರು ವರ್ಷಗಳಿಂದ ಐದು ವರ್ಷಗಳಿಗೆ ವಿಸ್ತರಿಸಿಕೊಳ್ಳಲು ನಡೆಸಿದ ಹುನ್ನಾರದ ವಿರುದ್ಧ ಹೋರಾಟ ನಡೆಸುವುದಕ್ಕೆ ಕಾನೂನಿನಲ್ಲಿ ಅವಕಾಶ ಇರುವುದನ್ನು ತಮ್ಮನ್ನು ಭೇಟಿ ಮಾಡಿದ ಹಿರಿಕಿರಿಯ ಸಾಹಿತಿಗಳಲ್ಲಿ ತಿಳಿಸಿದ್ದರು. ಲಿಂಗಾಯತ ಪ್ರತ್ಯೇಕ ಧರ್ಮದ ವಿಚಾರ ವಿವಾದದ ಸ್ವರೂಪ ಪಡೆದಾಗಲೂ ತಮ್ಮ ಅಧ್ಯಯನದ ಮೂಲಕ ವಾಸ್ತವ ಸಂಗತಿಯನ್ನು ಕಿರುಹೊತ್ತಿಗೆಯ ಮೂಲಕ ಸಾರ್ವಜನಿಕಗೊಳಿಸಿದ್ದರು.

ಅನ್ಯಾಯಗಳನ್ನು ವಿರೋಧಿಸುವ ನಿಷ್ಠುರವಾದಿಗಳು ಪ್ರಶಸ್ತಿ ಪುರಸ್ಕಾರಗಳನ್ನು ನಿರೀಕ್ಷಿಸುವುದಿಲ್ಲ. ಆದರೂ ಕೋಚೆ ಅವರಿಗೆ ಕೆಲವು ಪ್ರಶಸ್ತಿಗಳು ಸಂದಿವೆ. ಅವುಗಳಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ, ಸುವರ್ಣ ಕರ್ನಾಟಕ ಏಕೀಕರಣ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಮುಕ್ತ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್, ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ನಾಡೋಜ... ಹೀಗೆ ಬಂದಿರುವ ಪ್ರಶಸ್ತಿಗಳನ್ನು ಇಲ್ಲಿ ಹೆಸರಿಸಬಹುದು.

ಎಲ್ಲರನ್ನೂ ಸಮಾನ ದೃಷ್ಟಿಯಲ್ಲಿ ಕಾಣುತ್ತಿದ್ದ ಕೋಚೆ ಕುಟುಂಬವತ್ಸಲರು. ತಮ್ಮ ೨೧ನೆಯ ವಯಸ್ಸಿನಲ್ಲಿ ಕೈಹಿಡಿದ ಸರೋಜಮ್ಮ ಅವರೊಂದಿಗೆ ಅವರದು ಅನುರೂಪ ದಾಂಪತ್ಯ. ಮೂವರು ಹೆಣ್ಣುಮಕ್ಕಳು ಮತ್ತು ಇಬ್ಬರು ಗಂಡುಮಕ್ಕಳ ತುಂಬು ಸಂಸಾರವನ್ನು ಸುಸಂಸ್ಕೃತ ಪರಿಸರದಲ್ಲಿ ಬೆಳೆಸಿದವರು. ಪತ್ನಿ ಸರೋಜಮ್ಮ ೨೦೧೧ರಲ್ಲಿ ಯಾವುದೇ ಪೂರ್ವಸೂಚನೆ ಇಲ್ಲದೆ ಶಾಂತವಾಗಿ ಅಗಲಿದಾಗ ಒಂಟಿತನವನ್ನು ಎದುರಿಸಿದರೂ ಹೆಣ್ಣುಮಕ್ಕಳಾದ ಶಾಂತಾ, ಮಂಜುಳಾ, ಪುಣ್ಯವತಿ, ಗಂಡುಮಕ್ಕಳಾದ ಗುರುದೇವ್, ಪ್ರಭುದೇವ್ ಅವರ ಆರೈಕೆಯಲ್ಲಿ ಯಾವುದೇ ಕೊರತೆಯಾಗದಂತೆ ಬದುಕನ್ನು ನಡೆಸಿ ೨೦೧೯ರ ಫೆಬ್ರವರಿ ೨೫ರಂದು ಬೆಳಗ್ಗೆ ೬.೫೦ರ ಸುಮಾರಿಗೆ ಇಹದ ವ್ಯಾಪಾರವನ್ನು ಮುಗಿಸಿದರು.

ಎಡಪಂಥೀಯ ಚಿಂತನೆಗಳನ್ನೂ ಹೊಂದಿದ್ದ ಕೋಚೆ ಗಾಂಧೀವಾದಿಯೂ ಆಗಿದ್ದವರು. ಬೇಂದ್ರೆ ಅವರಿಂದ ಅರವಿಂದರ ಪ್ರಭಾವಕ್ಕೆ ಬಂದರೂ ಕುವೆಂಪು ಅವರ ಆಧ್ಯಾತ್ಮಿಕತೆಗೆ ಹತ್ತಿರವಾದವರು. ಸರ್ವಸಮಭಾವದ ಸಂವಿಧಾನದ ಆಶಯವನ್ನು ಪ್ರತಿಪಾದಿಸುವ ಮಾನವತಾವಾದಿಯೂ ಆಗಿದ್ದರು. ೯೮ ವರ್ಷಗಳ ತುಂಬು ಜೀವನ ನಡೆಸಿದ ಕೋಚೆ ತಮ್ಮ ಸಾರ್ಥಕ ಬದುಕಿನಿಂದ ಕಿರಿಯ ಪೀಳಿಗೆಗೆ ಆದರ್ಶಪ್ರಾಯರಾಗಿದ್ದಾರೆ. ಅವರ ಎಂಬತ್ತಕ್ಕೂ ಹೆಚ್ಚಿನ ಸಾಹಿತ್ಯ ಕೃತಿಗಳ ಅಧ್ಯಯನವೇ ಅವರಿಗೆ ಸಲ್ಲಿಸುವ ಯೋಗ್ಯ ಶ್ರದ್ಧಾಂಜಲಿಯಾಗಿದೆ.

**ಲಕ್ಷ್ಮಣ ಕೊಡಸೆ**
ನಂ. ೪೫, ೨ನೇ ಅಡ್ಡರಸ್ತೆ, ನ್ಯೂ ಬ್ಯಾಂಕ್ ಕಾಲೊನಿ
ಕೋಣನಕುಂಟೆ, ಬೆಂಗಳೂರು – ೫೬೦ ೦೬೨



## ವಿಮರ್ಶಾತ್ಮಕ ಬೋಧನೆಯ ಪ್ರಪಂಚ



*ಡಾ॥ ಮಹಾಬಲೇಶ್ವರ ರಾವ್*

**ಪುಟ : ೫೬**

**ಬೆಲೆ : ರೂ. ೪೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೧

*ಭಾರತದಲ್ಲಿಂದು ಸಂಪೂರ್ಣ ಅಪಮೌಲ್ಯಗೊಂಡಿರುವ ಇಂದಿನ ಶಿಕ್ಷಣ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಬದಲಾಯಿಸುವ, ತನ್ಮೂಲಕ ವಿಮರ್ಶಾತ್ಮಕ ಬೋಧನಾ ವಿಧಾನವನ್ನು ಅಳವಡಿಸಿ ವಿದ್ಯಾರ್ಥಿಗಳಲ್ಲಿ ಅಂತಸ್ಥವಾಗಿರುವ ಪ್ರತಿಭೆಯನ್ನು ಹೊರಗೆಳೆಯುವ ದಿಕ್ಕಿನಲ್ಲಿ ಇಲ್ಲಿನ ಚಿಂತನೆ ಸಾಗಿದೆ. ಇಂದಿನ ಶಿಕ್ಷಣ ಪದ್ಧತಿ ತೀರಾ ಹದಗೆಟ್ಟಿರುವುದಲ್ಲದೆ ನಿಸ್ಸಾರವೂ ಆಗಿದ್ದು ಉತ್ತಮ ಮೌಲ್ಯಗಳನ್ನು ಮಕ್ಕಳಲ್ಲಿ ಬಿತ್ತುವಲ್ಲಿ ಸಂಪೂರ್ಣ ಸೋತಿದೆ. ಇಂದಿನ ಶಾಲಾ ಸಂದರ್ಭದಲ್ಲಿ ವಿದ್ಯಾರ್ಥಿ ಕೇವಲ ಕೇಳುಗ ಮಾತ್ರವಾಗಿದ್ದು ತನಗೆ ಅನಿಸಿದ್ದನ್ನು ಪ್ರಶ್ನಿಸುವ ಹಕ್ಕಿನಿಂದ ವಂಚಿತನಾಗಿದ್ದಾನೆ. ಕೇವಲ ಸಿದ್ಧಮಾದರಿಯ ಶೀತಲೀಕೃತ ಶಿಕ್ಷಣ ಪದ್ಧತಿಯು ಸರ್ವವ್ಯಾಪಿಯಾಗಿದೆ. ಶಾಲೆಗಳಿಂದ ಹೊರ ಬರುವ ವಿದ್ಯಾರ್ಥಿಗಳು ಒಂದೇ ರೀತಿಯ ಅಚ್ಚಿನಲ್ಲಿ ಬೆಂದು ಬಂದಂತಹ ಕೇಕ್ ಮಾದರಿಯ ನಿರ್ಮಾಣದಂತಿದ್ದಾರೆ. ವಿದ್ಯಾರ್ಥಿಯನ್ನು ಸರ್ವೋತ್ಕೃಷ್ಟ, ವಿಚಾರವಂತ ಪ್ರಜೆಯನ್ನಾಗಿಸಲು ವಿಮರ್ಶಾತ್ಮಕ ಬೋಧನಾಕ್ರಮ ಎಷ್ಟು ಅಗತ್ಯವೆಂದು ಇಲ್ಲಿ ಒತ್ತಿ ಹೇಳಲಾಗಿದೆ. ವಿಮರ್ಶಾತ್ಮಕ ಬೋಧಕರೂ ಅಷ್ಟೇ ಅವಶ್ಯವಾಗಿ ಬೇಕಾಗಿದ್ದಾರೆ. ಇಲ್ಲವಾದಲ್ಲಿ ವಿದ್ಯಾರ್ಥಿಯ ವಿಮರ್ಶಾತ್ಮಕ ಪ್ರಜ್ಞೆ ಸುಪ್ತ ನೆಲೆಗೆ ಸಾಗಿ ಆತ "ಮೂಕ ಪ್ರತಿಭಾವಂತ" ಆಗುವ ಅಪಾಯವನ್ನು ಸವಿಸ್ತಾರವಾಗಿ ತಿಳಿ ಹೇಳಿದ್ದಾರೆ ಲೇಖಕರು.*

## ಆ ಹದಿಮೂರು ವರುಷಗಳು (ನಕ್ಸಲೈಟ್‌ನ ಜೈಲು ಆತ್ಮಕಥನ)

*ಹಿಂದಿ ಮೂಲ : ರಾಮಚಂದ್ರ ಸಿಂಗ್, ಇಂಗ್ಲಿಷ್ : ಮಧು ಸಿಂಗ್*

*ಕನ್ನಡಕ್ಕೆ : ಡಾ॥ ಎಚ್. ಎಸ್. ಅನುಪಮಾ*

**ಪುಟ : ೧೮೨** **ಬೆಲೆ : ರೂ. ೧೪೦**

**ಲಡಾಯಿ ಪ್ರಕಾಶನ,** *೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧*

*ನಕ್ಸಲೈಟ್ ಚಳವಳಿ ಕುರಿತು ಸುದ್ದಿ ಮಾಧ್ಯಮಗಳಲ್ಲಿ ಆಗಾಗ ದೊಡ್ಡ ಸುದ್ದಿಯಾಗುತ್ತದೆ. ಕಮ್ಯುನಿಸ್ಟ್ ಪಾರ್ಟಿಯಲ್ಲಿ ಒಡಕುಂಟಾಗಿ ಅರ್ಧ ಶತಮಾನದ ಮೇಲಾಯಿತು. ಸಿಪಿಐ, ಸಿಪಿಎಂ, ಮುಖ್ಯವಾಹಿನಿಯಲ್ಲಿದ್ದರೆ ಛಿದ್ರಗೊಂಡ ಹಲವು ತಂಡಗಳು ದೇಶದ ನಾನಾ ಭಾಗಗಳಲ್ಲಿ ಸಶಸ್ತ್ರ ಹೋರಾಟದಲ್ಲಿ ನಿರತಗೊಂಡವು. ಸಶಸ್ತ್ರ ಹೋರಾಟ ಕಾಲಕ್ರಮೇಣ ವೈಯಕ್ತಿಕ ಸಾಹಸ ಚರ್ಯೆಗಳಾಗುತ್ತ ಬಂದಿವೆ. ಇದರಲ್ಲಿ ಡಕಾಯಿತರು, ದ್ವೇಷ ಸಾಧನೆಗಾಗಿ ಮುಂದೆ ಬಂದಿರುವವರು ಸೇರಿಕೊಂಡಿದ್ದಾರೆ. 'ಆ ಹದಿಮೂರು ವರ್ಷಗಳು' ಪುಸ್ತಕದ ಒಂದು ಅಧ್ಯಾಯದಲ್ಲಿ ಮಾತ್ರ ನಕ್ಸಲ್ ಚಳವಳಿಯ ಕುರಿತು ಪ್ರಸ್ತಾಪವಿದೆ, ಅಷ್ಟೆ. ದಿನೇ ದಿನೇ ಈ ಚಳವಳಿ ಶಿಥಿಲಗೊಳ್ಳುತ್ತಿರುವುದನ್ನು ಲೇಖಕರು ಚರ್ಚಿಸಿದ್ದಾರೆ. ವಿವರಗಳಿಗೆ ಹೋಗದಿದ್ದರೂ ಗೊಂದಲ ಇರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಉಳಿದಂತೆ ಎಲ್ಲವೂ ಜೈಲಿನಲ್ಲಿ ನಡೆಯುವ ದೌರ್ಜನ್ಯಗಳ ವಿವರ ಇದೆ. ನಕ್ಸಲರನ್ನು ರಾಜಕೀಯ ಖೈದಿಗಳಾಗಿ ನೋಡಿಕೊಳ್ಳುವುದಕ್ಕೆ ಪ್ರತಿಯಾಗಿ ಸಾಧಾರಣ ಕ್ರಿಮಿನಲ್‌ಗಳಂತೆ ನೋಡುತ್ತಿರುವುದು ಅಸಹನೀಯ. ಕೈಗೆ ಕೊಳ, ಕಾಲಿಗೆ ಸರಪಳಿ, ಕ್ರೌರ್ಯ, ದೌರ್ಜನ್ಯ ಇವುಗಳನ್ನು ಲೇಖಕರು ವಿವರಿಸಿದ್ದಾರೆ. ಜೈಲು ಅಧಿಕಾರಿಗಳ, ವಾರ್ಡರುಗಳ ಅಮಾನುಷ ವರ್ತನೆಯನ್ನು, ಭ್ರಷ್ಟಾಚಾರವನ್ನು ಬಯಲಿಗೆಳೆದಿದ್ದಾರೆ. ಡಾ॥ ಅನುಪಮಾ ಅವರ ಅನುವಾದ ಚೆನ್ನಾಗಿದ್ದು, ಓದಿಸಿಕೊಂಡು ಹೋಗುತ್ತದೆ.*



## ವಿದ್ಯಾಭೂಷಣರ ಜೀವನ ಕಥನ **ನೆನಪೇ ಸಂಗೀತ**

ವಿದ್ಯಾಭೂಷಣ

**ಪುಟ : ೧೫೨** **ಬೆಲೆ : ರೂ. ೧೮೦**

**ಪ್ರಕೃತಿ ಪ್ರಕಾಶನ,** *೨೨, ಇಎಟಿ ಬೀದಿ, ಗಾಂಧಿಬಜಾರ್, ಬೆಂಗಳೂರು – ೫೬೦ ೦೦೪*

*ಕುಕ್ಕೆ ಸುಬ್ರಹ್ಮಣ್ಯ ಮಠದ ಸಂನ್ಯಾಸಿ, ಪೀಠಾಧಿಪತಿಯಾಗಿದ್ದ ವಿದ್ಯಾಭೂಷಣರು ಪೀಠ ತ್ಯಾಗ ಮಾಡಿ, ಸಂನ್ಯಾಸಾಶ್ರಮ ತೊರೆದು ವಿವಾಹವಾಗಿ ಗೃಹಸ್ಥರಾಗಿದ್ದು ಒಂದು ಕಾಲದಲ್ಲಿ ದೊಡ್ಡ ಸುದ್ದಿ. ನಾನಾ ಬಗೆಯ ಊಹಾಪೋಹಗಳು, ಕಟ್ಟುಕತೆಗಳು ಬೇಕಾದಷ್ಟು ಹರಡಿದ್ದವು. ಈಗ ಅದಕ್ಕೆಲ್ಲ ಇತಿಶ್ರೀ ಹಾಡಿದ್ದಾರೆ. ದಾಸರ ಪದಗಳ ಹಾಡುಗಾರಿಕೆಯಲ್ಲಿ ಪ್ರಸಿದ್ಧರಾಗಿರುವ ವಿದ್ಯಾಭೂಷಣರು, ಚಿಕ್ಕಂದಿನಲ್ಲೇ ಹಾಡುಗಾರಿಕೆಯಲ್ಲಿ ತೊಡಗಿದ್ದರು. ಇವರು ಸಂಗೀತದಲ್ಲಿ ಆಸಕ್ತಿ ಹೊಂದಿ ಶಿಷ್ಯ ವೃತ್ತಿ ಮಾಡಿದ್ದು ಸಂನ್ಯಾಸ ಸ್ವೀಕರಿಸಿದ ನಂತರ ಹಲವು ವರ್ಷಗಳು ಕಳೆದ ಮೇಲೆ. ಕಾಲೇಜು ಶಿಕ್ಷಣ ಪಡೆದು ಉದ್ಯೋಗಸ್ಥನಾಗುವ ಕನಸು ಕಾಣುತ್ತಿದ್ದ ಬಾಲಕನ ಮೇಲೆ ಬಲವಂತವಾಗಿ ಸಂನ್ಯಾಸದ ಹೇರಿಕೆ. ಮೊದಲಿನಿಂದ ಇವರು ಬಾಲಸಂನ್ಯಾಸದ ವಿರೋಧಿ. ಇದು ಒಂದು ರೀತಿಯ ಬಲವಂತ ಮಾಘಸ್ನಾನ ಎಂದು ಹೇಳುವ ವಿದ್ಯಾಭೂಷಣ ಈ ಮಠಗಳ ಆಡಳಿತ ಕೈ ತಪ್ಪುವ ಭಯದಿಂದ ಮಕ್ಕಳ ಮೇಲೆ ಸಂನ್ಯಾಸ ಹೊರಿಸುತ್ತಾರೆ ಅನ್ನುತ್ತಾರೆ. ಅದಕ್ಕೆ ಉದಾಹರಣೆಗಳನ್ನೂ ಕೊಡುತ್ತಾರೆ. ಸಂಗೀತ ಕಾರ್ಯಕ್ರಮಗಳನ್ನು ನೀಡುತ್ತ ವಿವಿಧ ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಿಕೊಂಡಿದ್ದರು. ಸಂನ್ಯಾಸ ತ್ಯಜಿಸಿ ಗೃಹಸ್ಥರಾಗುವ ಅಭಿಲಾಷೆಯನ್ನು ಮುಚ್ಚಿರಿಸದೆ ಉಡುಪಿ ಮಠಗಳವರ ಜೊತೆ ಮುಕ್ತವಾಗಿಯೇ ಚರ್ಚಿಸಿದರು. ಅಂತಿಮವಾಗಿ ಪೀಠತ್ಯಾಗ ಮಾಡಿದ ಇವರು ಗೃಹಸ್ಥರಾಗಿ ಎರಡು ಮಕ್ಕಳ ತಂದೆ. ಸಂಗೀತ ಕಾರ್ಯಕ್ರಮಗಳನ್ನು ನೀಡುತ್ತ ಜನಪ್ರಿಯರಾಗಿದ್ದಾರೆ.*

– ಸಿ. **ಆರ್. ಕೃಷ್ಣರಾವ್,** *ಬೆಂಗಳೂರು – ೮೫*

## ಕಂಗಳ ಮುಂದಣ ಕತ್ತಲು

*ಡಾ॥ ಮೂಡ್ನಾಕೂಡು ಚಿನ್ನಸ್ವಾಮಿ*

**ಪುಟ : ೧೬೪** **ಬೆಲೆ : ರೂ. ೧೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೧

*ಭಾರತದಲ್ಲಿನ್ನೂ ಜೀವಂತವಾಗಿರುವ ಜಾತಿಪದ್ಧತಿ – ಅಸ್ಪೃಶ್ಯತೆಯ ವಿರಾಟ್ ದರ್ಶನ. ಬಲವಾಗಿ ಬೇರು ಬಿಟ್ಟಿರುವ ಈ ವ್ಯವಸ್ಥೆಯನ್ನು ಮೂಲೋತ್ಪಾಟನೆ ಮಾಡುವುದು ಅಂತಿರಲಿ, ಮೇಲ್ನೋಟಕ್ಕೆ ಖಂಡಿಸುತ್ತ ಒಡಲೊಳಗೆ ಭದ್ರವಾಗಿಟ್ಟು ಪೋಷಿಸುವ ವರ್ಣೀಯರು – ರಾಜಕಾರಣಿಗಳು ನಮ್ಮಲ್ಲಿರುವುದು ಆತಂಕದ ವಿಚಾರ. ವರ್ಣಾಶ್ರಮ – ಜಾತಿಪದ್ಧತಿ – ಅಸ್ಪೃಶ್ಯತೆಯನ್ನು ತೀರ ಇತ್ತೀಚಿನ ವಿಶ್ವಗ್ರಾಮ ಕಲ್ಪನೆಯ ಜಾಗತೀಕರಣ, ಖಾಸಗೀಕರಣದಂತಹ ಆಧುನಿಕ ವ್ಯವಸ್ಥೆಯೊಂದಿಗೆ ಮುಖಾಮುಖಿಯಾಗಿಸಿದ್ದು ಇಲ್ಲಿನ ವಿಶೇಷ. ನಮ್ಮಲ್ಲಿ ಲಿಖಿತ ಪ್ರಜಾಪ್ರಭುತ್ವ ಸಂವಿಧಾನ ವ್ಯವಸ್ಥೆಯಿದ್ದರೂ ಅಲಿಖಿತ ನಿಯಮಾವಳಿಗಳ ಸಂವಿಧಾನವೊಂದು ಮೇಲುಗೈ ಪಡೆದು ವರ್ಣೀಯ ಸಮಾಜದಲ್ಲಿ ವಿಜೃಂಭಿಸುತ್ತಿದೆ. ಪ್ರಜಾಪ್ರಭುತ್ವದ ಸಂವಿಧಾನ ಇದ್ದೂ ಇಲ್ಲದಂತಾಗಿದ್ದು ಜಾತಿಭೂತದ ಬಿಗಿ ಸರಪಳಿ ಸಾಮಾಜಿಕವಾಗಿ ಎಲ್ಲರನ್ನೂ ಕಟ್ಟಿ ಹಾಕಿದೆ. ನಮ್ಮದು ಸನಾತನ ಧರ್ಮವೆಂದು ಹಲವು ಮೌಢ್ಯಗಳನ್ನು – ಅಮಾನುಷ ಕ್ರಿಯೆಗಳನ್ನು ಇಂದಿಗೂ ಪಾಲಿಸುತ್ತಿರುವ ಮೇಲ್ವರ್ಗದ ಮನಸ್ಸುಗಳಲ್ಲಿ ಅಸ್ಪೃಶ್ಯತೆ – ಜಾತಿ ಪದ್ಧತಿ ಎಂದಿಗೂ ಅಳಿಯಲಾರದೇನೋ ಎನ್ನುವಂಥ ಸ್ಥಿತಿ ಇಂದು ವ್ಯಾಪಕವಾಗಿದೆ. ನಮ್ಮಲ್ಲಿ ರಾಜಕೀಯ ಧುರೀಣರಿರುವಂತೆ ಧಾರ್ಮಿಕ – ಸಾಂಸ್ಕೃತಿಕ ಧುರೀಣರಿದ್ದು ರಾಜಕೀಯ ವ್ಯವಸ್ಥೆಯನ್ನು ನಾಜೂಕಾಗಿ ನಿಯಂತ್ರಿಸುತ್ತಾರೆ. ಇನ್ನು ಆರ್ಥಿಕವಾಗಿ ಸಾಮಾಜಿಕವಾಗಿ ಹಿಂದುಳಿದವರ ಉದ್ಧಾರ ಹೇಗೆ ಸಾಧ್ಯ? – ಹೀಗೆ ಇಂದಿನ ನಮ್ಮ ದೇಶದ ಪರಿಸ್ಥಿತಿಯನ್ನು ವಿವರವಾಗಿ ವಿಶ್ಲೇಷಿಸಿ, ಸಂಶೋಧಿಸಿದ ಕೃತಿ ಇದು.*

– **ಇಂದಿರಾ ಕುಮಾರಿ,** *ಬೆಂಗಳೂರು*



# ಅಂಬೇಡ್ಕರ್ ಮತ್ತು ಮಾರ್ಕ್ಸ್



**ಕಾ**ರ್ಲ್ ಮಾರ್ಕ್ಸ್ ಮತ್ತು ಅಂಬೇಡ್ಕರ್ ಇವರಿಬ್ಬರೂ ಉನ್ನತ ಸ್ತರದ ಬುದ್ಧಿಜೀವಿಗಳು. ಇವರಿಬ್ಬರ ಮರಣಾನಂತರವೂ ಸಹ ಇವರ ತಾತ್ವಿಕ ಕೊಡುಗೆಗಳು ಕಾಲನ ನಾಗಾಲೋಟದ ಜೊತೆಯಲ್ಲೇ ಬೆಳೆಯುತ್ತಿವೆ, ಜನರನ್ನು ಆಕರ್ಷಿಸುತ್ತಿವೆ. ಸಮಸಮಾಜವನ್ನು ನಿರ್ಮಿಸಲು ಸಹಾಯಮಾಡಬಲ್ಲಂತಹ ಸಾಮಾಜಿಕ, ರಾಜಕೀಯ ಚಳುವಳಿಗಳ ಬಗ್ಗೆಯೇ ಇವರಿಬ್ಬರ ಚಿಂತನೆಗಳ ಬೇರುಗಳು ಇಳಿದಿದ್ದವು. ಮುಖ್ಯವಾಹಿನಿಯಲ್ಲಿರುವ ಬೂರ್ಷ್ವಾ ಬುದ್ಧಿಜೀವಿಗಳು ಹಾಗೂ ಅಕಾಡೆಮಿಕ್ ಪರಿಣತರು ಮಾರ್ಕ್ಸ್ ಹಾಗೂ ಅಂಬೇಡ್ಕರ್ ಅವರ ಆಲೋಚನೆಗಳನ್ನು ಉದ್ದೇಶಪೂರ್ವಕವಾಗಿ ನಿರ್ಲಕ್ಷಿಸಿದ್ದರೂ ಕೂಡ, ಸಾಮಾಜಿಕ ಚಳುವಳಿಗಳು ಕ್ರಾಂತಿಕಾರಿ ಉದ್ದೇಶಗಳಿಂದ ಕೂಡಿರುವುದರ ಪರಿಣಾಮವಾಗಿ ಇವರಿಬ್ಬರ ಆಲೋಚನೆಗಳು ಜನಸಾಮಾನ್ಯರ ನಡುವೆ, ಬದಲಾವಣೆಗಳಿಗೋಸ್ಕರ ಹೋರಾಡುತ್ತಿರುವವರ ಮಧ್ಯೆ ಇನ್ನೂ ಜೀವಂತವಾಗಿವೆ.

ಕಾಂಟ್, ಹೆಜೆಲ್, ಫ್ಯೂರ್‌ಬಾಕ್ ಮತ್ತು ಇತರ ಪಾಶ್ಚಿಮಾತ್ಯ ತತ್ವಶಾಸ್ತ್ರಜ್ಞರ ಸಮೃದ್ಧ ಕೋಶದಿಂದ ಮಾರ್ಕ್ಸ್‌ನು ತನ್ನ ನಿಲುವುಗಳನ್ನು, ಸಿದ್ಧಾಂತಗಳನ್ನು ಕಡೆದಿರುತ್ತಾನೆ. ಸಮಾಜದ ಕುಲೀನ ಜನವರ್ಗದ ಕೈಯಲ್ಲಿ ಜಡ್ಡುಗಟ್ಟಿದ್ದ ಭ್ರಾಮಕ "ಚಿಂತನಾ-ಪ್ರಧಾನ(Idealist)" ಭಾವನಾವಾದೀ ಸಿದ್ಧಾಂತಗಳಿಗಿಂತ ವಿಭಿನ್ನವಾದ ಹಾದಿಯನ್ನು ಮಾರ್ಕ್ಸ್ ಹಿಡಿಯುತ್ತಾನೆ ಹಾಗೂ ಅಲ್ಲಿಯವರೆಗೆ ಅಸ್ತಿತ್ವದಲ್ಲಿದ್ದ ಚಿಂತನಾ ಲಹರಿಗೆ ಹೊಸ ತಿರುವನ್ನು, ನೂತನ ಕಾಣ್ಕೆಗಳನ್ನು ನೀಡುತ್ತಾನೆ. ಮಾರ್ಕ್ಸ್‌ನ ಸಿದ್ಧಾಂತವು ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯದ ಕುರಿತು ಹೊಸ ವಿಚಾರಗಳಿಂದ ತುಂಬಿದ್ದ ಒಂದು ನೀಲನಕ್ಷೆಯಾಗಿತ್ತು. ಹೀಗಾಗಿ ಶಾಶ್ವತವಾಗಿ ಉಳಿಯಬಲ್ಲಂತಹ ಸಾಮಾಜಿಕ ಬದಲಾವಣೆಗಳ ಕುರಿತು ಹಂಬಲಿಸುವವರೆಲ್ಲರೂ, ಶೋಷಣೆಗೆ ಒಳಗಾದವರೆಲ್ಲರೂ ಮಾರ್ಕ್ಸ್‌ನ ಸಿದ್ಧಾಂತವನ್ನು ಒಪ್ಪಿಕೊಂಡು, ಅಪ್ಪಿಕೊಂಡು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಅದೇ ರೀತಿಯಲ್ಲಿ ಅಂಬೇಡ್ಕರ್ ಅವರ ವಿಚಾರಗಳು ಬಹುಮುಖಿಯಾದವು, ಆರ್ಥಿಕ, ಸಾಮಾಜಿಕ, ರಾಜಕೀಯಾತ್ಮಕ ಹಾಗೂ ಸಾಂಸ್ಕೃತಿಕ – ಈ ಎಲ್ಲ ಕ್ಷೇತ್ರಗಳಲ್ಲೂ ಅವಶ್ಯವಾದದ್ದಾಗಿವೆ.

**ಹೊಸತು-೨೦**
**ವಿಶೇಷ ಲೇಖನ**

ಮಾರ್ಕ್ಸ್ ಮತ್ತು ಅಂಬೇಡ್ಕರ್ ಈ ಇಬ್ಬರೂ ಕೂಡ ಅನೇಕ ವಿಭಿನ್ನ ವಿಚಾರಗಳಲ್ಲಿ, ಕ್ಷೇತ್ರಗಳಲ್ಲಿ ಆಸಕ್ತಿ ಮತ್ತು ಪರಿಣಿತಿಯನ್ನು ಪ್ರದರ್ಶಿಸಿರುತ್ತಾರೆ. ಹೊಸ ಭಾರತವನ್ನು ನಿರ್ಮಿಸುವಲ್ಲಿ ಪ್ರಮುಖ ಪಾತ್ರ ವಹಿಸಿರುವ ಎಲ್ಲರಿಗಿಂತ ಅಂಬೇಡ್ಕರ್ ಅವರು ಬಹು ದೊಡ್ಡ ವ್ಯಕ್ತಿಯಾಗಿ ಹೊರಹೊಮ್ಮಿರುವುದಂತೂ ಸತ್ಯ, ಪ್ರತಿಭಾನ್ವಿತರೂ, ಹೋರಾಟಗಾರರೂ ಆಗಿರುವ ಇವರಿಬ್ಬರ ನಡುವಿರುವ ಸಾಮಾನ್ಯ ಅಂಶಗಳನ್ನು ಹಾಗೂ ಅವರುಗಳ ಚಿಂತನೆ ಹಾಗೂ ಮಾರ್ಗಗಳಿದ್ದ ಭಿನ್ನತೆಗಳನ್ನು ಹೊರಗೆಡಹುವುದೇ ಈ ಒಂದು ಸಣ್ಣ ಲೇಖನದ ಉದ್ದೇಶವಾಗಿದೆ. ಇವರಿಬ್ಬರ ಚಿಂತನೆಗಳು ಈಗಿನ ಭಾರತಕ್ಕೆ ಎಷ್ಟು ಅಗತ್ಯವೆಂಬುದನ್ನೂ ಕೂಡ ಈ ಲೇಖನದಲ್ಲಿ ಅಭ್ಯಸಿಸಲಾಗಿದೆ.

**ಮೂಲ : ಎಂ. ಸತ್ಯಾನಂದ**
**ಅನುವಾದ : ಎಂ. ಸಿ. ಡೋಂಗ್ರೆ**

### ಅಂಬೇಡ್ಕರ್ ಮತ್ತು ಮಾರ್ಕ್ಸ್‌ರವರ ತಾತ್ವಿಕ ಬುನಾದಿಗಳು

ಅಂಬೇಡ್ಕರ್ ಹಾಗೂ ಮಾರ್ಕ್ಸ್ ಇವರಿಬ್ಬರೂ "ಭೌತವಾದಿ"ಗಳಾಗಿದ್ದು ಅವರ ಸಮಕಾಲೀನ "ಚಿಂತನಾ-ಪ್ರಧಾನ" ಭಾವನಾವಾದಿಗಳ ವಿರುದ್ಧ ತೀಕ್ಷ್ಣವಾದ ಸಮರವನ್ನೇ ಸಾರುತ್ತಾರೆ. "ಭೌತವಾದ"ದ ಪ್ರಕಾರ "ಭೌತವಸ್ತು" ಅಂದರೆ ಈ ನಿಸರ್ಗ, ಈ ನಿಸರ್ಗದಲ್ಲಿ ನಡೆವ ಘಟನೆಗಳು, ಎಲ್ಲ ಜೀವಿಗಳು, ಗ್ರಹ-ನಕ್ಷತ್ರಾದಿಗಳು ಇವುಗಳೇ ನಮ್ಮ ಅನುಭವಗಳಿಗೆ, ಗ್ರಹಿಕೆಗಳಿಗೆ ಎಲ್ಲಕ್ಕೂ ಮೂಲ, ಆದಿ ಅಥವಾ ಪ್ರಮುಖವಾದವುಗಳು. ಜೀವಿಗಳ ಬುದ್ಧಿ ಅಥವಾ ಪ್ರಜ್ಞೆಯ ಮೇಲೆ ಈ "ಭೌತವಸ್ತು" ಅವಲಂಬಿತವಾಗಿರದೇ ಸ್ವತಂತ್ರವಾಗಿರುತ್ತದೆ. "ಚಿಂತನಾ-ಪ್ರಧಾನ" ಭಾವನಾವಾದಿಗಳ ಪ್ರಕಾರ ಜೀವಿಗಳಲ್ಲಿರುವ ಪ್ರಜ್ಞೆ, ಯೋಚನಾ ಸಾಮರ್ಥ್ಯವೇ ಎಲ್ಲದಕ್ಕೂ ಮೂಲ. "ಭೌತವಸ್ತು" ಎನ್ನುವುದು ಬುದ್ಧಿಮತ್ತೆಯ ಉತ್ಪತ್ತಿ, ಪ್ರಜ್ಞೆಯ ಉತ್ಪತ್ತಿ. "ಭೌತವಾದ"ವು ಸುತ್ತಲಿನ ಪ್ರಪಂಚವನ್ನು "ಅದು ಹೇಗಿದೆಯೋ ಹಾಗೆ" ಅರ್ಥೈಸಿಕೊಂಡರೆ, "ಚಿಂತನಾ-ಪ್ರಧಾನ" ಭಾವನಾವಾದಿಗಳು ಈ ಪ್ರಪಂಚವನ್ನು "ಹೇಗಿರಬೇಕೋ ಹಾಗೆ" ಅರ್ಥೈಸಿಕೊಳ್ಳುತ್ತ ಹೋಗುತ್ತದೆ.

"ಭೌತವಾದ"ದ ಪ್ರಕಾರ "ನಮ್ಮ ಇರುವಿಕೆಯು ನಮ್ಮ ಪ್ರಜ್ಞೆಯನ್ನು ರೂಪಿಸುತ್ತದೆ". ನಮ್ಮ ದಿನನಿತ್ಯದ ವಾಸ್ತವತೆಗಳು, ನಮ್ಮ ಸಾಮಾಜಿಕ-ಆರ್ಥಿಕ ಸ್ಥಾನಮಾನಗಳು ಒಬ್ಬ ವ್ಯಕ್ತಿಯಾಗಿ ಈ ಸುತ್ತಲಿನ ಜಗತ್ತನ್ನು ಹೇಗೆ ಅರ್ಥೈಸಿಕೊಳ್ಳುತ್ತೇವೆ ಎಂಬುದನ್ನು ನಿರ್ಧರಿಸುತ್ತವೆ. ಒಬ್ಬ ಬಂಡವಾಳಶಾಹಿಯ ಅನುಭವವು ಒಬ್ಬ ಕೈಗಾಡಿ ಎಳೆವವನ ವಾಸ್ತವವು ಭಿನ್ನ ಭಿನ್ನವಾಗಿರುತ್ತದೆ. "ಚಿಂತನಾ – ಪ್ರಧಾನ" ಭಾವನಾವಾದದ ಪ್ರಕಾರ ನಾವು ಯೋಚನೆ ಮಾಡಿದ ರೀತಿಯಲ್ಲಿ ಈ ಪ್ರಪಂಚವಿರುತ್ತದೆ. ಅಂದರೆ ಭೌತವಾದಿಯೊಬ್ಬ ಈ ಸಮಾಜ ಅಥವಾ ಜಗತ್ತು ಹೇಗೆ ಕಾಣುತ್ತದೆಯೋ ಹಾಗೆ ಅರ್ಥೈಸಿದರೆ, "ಚಿಂತನಾ – ಪ್ರಧಾನ" ಭಾವನಾವಾದಿಯೊಬ್ಬ ಪ್ರತಿಯೊಬ್ಬನ ಅನಿಸಿಕೆಗಳ ಪ್ರಕಾರ ಅರ್ಥೈಸಿಸಲು, ಪ್ರಪಂಚವನ್ನು ಮುನ್ನಡೆಸಲು ಯೋಚಿಸುತ್ತಾನೆ.



ಈ ಒಂದು ವಿಶಾಲವಾದ ಚೌಕಟ್ಟಿನ ಹಿನ್ನೆಲೆಯಲ್ಲಿ ನೋಡಿದಾಗ ನನ್ನ ಪ್ರಕಾರ ಮಾರ್ಕ್ಸ್ ಮತ್ತು ಅಂಬೇಡ್ಕರ್ ಇವರಿಬ್ಬರೂ "ಭೌತವಾದಿಗಳೇ." ಬಂಡವಾಳಶಾಹೀ ವ್ಯವಸ್ಥೆಯೊಳಗಿನ ಅಸಮಾನತೆಯ ವಿರುದ್ಧ ಮಾರ್ಕ್ಸ್ ವ್ಯಾಪಕವಾಗಿ ಬರೆದಿರುವುದು ಎಲ್ಲರಿಗೂ ತಿಳಿದಿರುವಂತಹ ವಿಚಾರ. ಅದೇ ವೇಳೆಯಲ್ಲಿ ಮಾರ್ಕ್ಸ್‌ನು ಅವಾಸ್ತವವಾದೀ ಸಮಾಜವಾದಿಗಳ ವಿರುದ್ಧ, ರಮ್ಯ ಕಲ್ಪನೆಯ ಸಮಾಜವಾದಿಗಳ ವಿರುದ್ಧವೂ ಸಹ ತೀಕ್ಷ್ಣವಾಗಿ ವಾಕ್ಸಮರವನ್ನು ನಡೆಸಿರುತ್ತಾನೆ. ಆಗಿನ ಸಮಾಜವಾದೀ ಚಿಂತಕರಲ್ಲೊಬ್ಬರಾದ ಪ್ರೂಧೋನನ ವಿರುದ್ಧವಾಗಿ ಮಾರ್ಕ್ಸ್‌ನು ನಡೆಸಿರುವ ತಾತ್ವಿಕ ಸಮರಗಳು ಕಾಲ್ಪನಿಕ ಸಮಾಜವಾದದ(Utopian Socialism) ವಿರುದ್ಧ ನಡೆಸಿದ ತಾತ್ವಿಕ ಹೋರಾಟಗಳೇ ಆಗಿವೆ. ಕಾಲ್ಪನಿಕ ಸಮಾಜವಾದವು" ಒಳ್ಳೆಯ ಚಿಂತನೆಗಳ ಕುರಿತು ಅಥವಾ ನ್ಯಾಯ, ಸತ್ಯ ಇತ್ಯಾದಿಗಳ ಕುರಿತು ಹೇಳುತ್ತಿತ್ತೇ ವಿನಾ ಉತ್ಪಾದನಾ ವಿಧಾನಗಳು, ವಿತರಣೆ ಅಥವಾ ವಸ್ತುಗಳ ವಿನಿಮಯ ಇತ್ಯಾದಿ ವಾಸ್ತವ ಸತ್ಯಗಳ ಬಗ್ಗೆ ಏನೂ ಹೇಳುತ್ತಿರಲಿಲ್ಲ. ಹೀಗಾಗಿ ಮಾರ್ಕ್ಸ್‌ನು ಚಾರಿತ್ರಿಕ ಹಾಗೂ ದ್ವಂದ್ವಾತ್ಮಕ ಸಮಾಜವಾದಕ್ಕೆ ಅಸ್ತಿಭಾರವನ್ನು ಹಾಕುತ್ತಾನೆ. "ರಾಜಕೀಯ ಅರ್ಥಶಾಸ್ತ್ರದ ವಿಮರ್ಶೆ(Critique of political economy)" ಎಂಬ ತಮ್ಮ ಲೇಖನಕ್ಕೆ ಬರೆದ ಮುನ್ನುಡಿಯಲ್ಲಿ ಮಾರ್ಕ್ಸ್‌ನು ತನ್ನ ಭೌತವಾದೀ ವಿಚಾರಗಳನ್ನು ಕುರಿತು ಸ್ಪಷ್ಟವಾಗಿ ಹೀಗನ್ನುತ್ತಾನೆ: "ಭೌತವಾದಿ ಬದುಕಿನಲ್ಲಿ ಕಂಡುಬರುವ ಉತ್ಪಾದನಾ ವಿಧಾನವು ಸಾಮಾಜಿಕ, ರಾಜಕೀಯ ಮತ್ತು ಬೌದ್ಧಿಕ ಬದುಕಿನ ಪ್ರಕ್ರಿಯೆಗಳನ್ನು ನಿಯಂತ್ರಿಸುತ್ತದೆ(Conditions). ಮಾನವನ ಪ್ರಜ್ಞೆಯು ಅವನ ಇರುವಿಕೆಯನ್ನು ನಿರ್ಧರಿಸುವುದಿಲ್ಲ ಬದಲಿಗೆ ಮಾನವರ ಸಾಮಾಜಿಕ ಇರುವಿಕೆಯು ಅವರ ಪ್ರಜ್ಞೆಯನ್ನು ನಿರ್ಧರಿಸುತ್ತದೆ."

ಜರ್ಮನಿಯ ಫ್ಯೂರ್‌ಬಾಕ್‌ನ ಭೌತವಾದೀ ಸಿದ್ಧಾಂತದಲ್ಲಿ ಅಗೋಚರವಾಗಿ ಹುದುಗಿದ್ದ ಲೋಪದೋಷಗಳನ್ನು ಮಾರ್ಕ್ಸ್ ಗುರುತಿಸುತ್ತಾನೆ. ಫ್ಯೂರ್‌ಬಾಕ್‌ನ ಪ್ರಕಾರ ಮಾನವರು ಅವರ ಸುತ್ತಲಿನ ಪರಿಸರ/ವಾತಾವರಣ ಹಾಗೂ ಅವರನ್ನು ಬಾಲ್ಯದಲ್ಲಿ ಬೆಳೆಸುವ ರೀತಿ–ನೀತಿಗಳಿಂದ ಪ್ರಭಾವಿತರಾಗಿ ವ್ಯಕ್ತಿತ್ವವನ್ನು ಪಡೆದಿರುತ್ತಾರೆ. ಆದರೆ ಮಾರ್ಕ್ಸ್ ಹೇಳುತ್ತಾನೆ: "ಫ್ಯೂರ್‌ಬಾಕ್‌ನ ಈ ನಿಲುವನ್ನು ಒಪ್ಪಿಕೊಂಡಲ್ಲಿ ಈ ನಿಲುವು ಸಮಾಜವನ್ನು ಶ್ರೇಷ್ಠ ಹಾಗೂ ಕನಿಷ್ಠವೆಂದು ಎರಡು ಭಾಗಗಳಾಗಿ ವಿಂಗಡಿಸುತ್ತದೆ. ಇದರಿಂದ ಸಮಾಜದಲ್ಲಿ ಸಕಾರಾತ್ಮಕ ಬದಲಾವಣೆ ಸಾಧ್ಯವಿಲ್ಲ." ಹೀಗಾಗಿ ಮಾರ್ಕ್ಸ್‌ನು ಫ್ಯೂರ್‌ಬಾಕ್‌ನ ಆಲೋಚನೆಗಳ ಜೊತೆಗೆ ಹೆಜೆಲ್ಲನ ಚಾರಿತ್ರಿಕ ಚಲನೆ ಹಾಗೂ ದ್ವಂದ್ವಾತ್ಮಕತೆಯ(Dialectics) ವಿಚಾರಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಬೆಸೆದು "ಚಾರಿತ್ರಿಕ ಭೌತವಾದ"ವನ್ನು ಮುಂದಿಡುತ್ತಾನೆ. ಮಾರ್ಕ್ಸ್‌ನು ಈ ಬೆಸೆಯುವಿಕೆಯ ಕುರಿತು ಹೀಗನ್ನುತ್ತಾನೆ: "ಮಾನವರು ಅವರ ಚರಿತ್ರೆಯನ್ನು ಅವರೇ ನಿರ್ಮಿಸುತ್ತಾರೆ. ಆದರೆ ಅದು ಅವರು ಬಯಸಿದಂತಹ ರೂಪವನ್ನು ಪಡೆಯದು. ತಾವು ಆರಿಸಿದ ಸನ್ನಿವೇಶಗಳ ಅಡಿಯಲ್ಲಿ ಈ ಚರಿತ್ರೆ ನಿರ್ಮಾಣವಾಗದು, ಬದಲಿಗೆ ಈಗಾಗಲೇ ಅಸ್ತಿತ್ವದಲ್ಲಿರುವ ಸನ್ನಿವೇಶಗಳ ಮೇಲೆ ಅವಲಂಬಿಸಿ ಚರಿತ್ರೆಯನ್ನು ನಿರ್ಮಿಸುತ್ತಾರೆ. ಈಗ ಅಸ್ತಿತ್ವದಲ್ಲಿರುವ ಸನ್ನಿವೇಶಗಳು ಭೂತಕಾಲದ ಬಳುವಳಿಗಳಾಗಿರುತ್ತವೆ" ಮಾರ್ಕ್ಸ್‌ನ ಭೌತವಾದವು ಅಸ್ತಿತ್ವದಲ್ಲಿರುವ ಸಮಾಜದ ಬದಲಾವಣೆಗೆ ಮಾತ್ರ ಸೀಮಿತತೆಯನ್ನು ಪಡೆದಿಲ್ಲ. ಭೂತಕಾಲದ ಸಂಕೋಲೆಗಳಿಗೆ ಮೂಕವಾಗಿ ಅಥವಾ ನಿಸ್ಸಹಾಯಕವಾಗಿ ಮಾನವರು ಬಂದಿಯಾಗದೇ ಮಾರ್ಕ್ಸ್‌ನ ಭೌತವಾದೀ ಸಿದ್ಧಾಂತದಡಿಯಲ್ಲಿ ಮಾನವರು ಬದಲಾವಣೆಯ ಹರಿಕಾರರಾಗುತ್ತಾರೆ. ಮಾರ್ಕ್ಸ್‌ನ ಪ್ರಕಾರ; "ಕ್ರಾಂತಿಕಾರೀ ಚಟವಟಿಕೆ (Revolutionary Practice) ಎಂಬುದು ವ್ಯಕ್ತಿಗತ ಬದಲಾವಣೆ ಹಾಗೂ ಮಾನವನ ಚಟುವಟಿಕೆಗಳ ಮೂಲಕ ಸನ್ನಿವೇಶಗಳನ್ನು ಬದಲಾಯಿಸುವುದು ಇವೆರಡರಿಂದ ಕೂಡಿರುತ್ತದೆ.

ಅಂಬೇಡ್ಕರ್ ಅವರ ಬದುಕು ಹಾಗೂ ಅಭಿಪ್ರಾಯಗಳನ್ನು ಆಧರಿಸಿ ಅವರನ್ನು "ಭೌತವಾದಿ ಚಿಂತಕ" ಎಂದು ಬಹಳ ಕಟ್ಟುನಿಟ್ಟಾಗಿ ಹೇಳುವುದು ಕಷ್ಟಕರವಾಗಿದೆ. ಅವರ ಬದುಕು ಹಾಗೂ ಅಭಿಪ್ರಾಯಗಳು ಸರಳೀಕರಣಕ್ಕೆ ಒಗ್ಗದೇ ಬಹಳ ಸಂಕೀರ್ಣತೆಗೆ ಒಳಗಾಗಿವೆ. ಅನೇಕ ಬರಹಗಾರರು ಅಂಬೇಡ್ಕರ್ ಅವರನ್ನು "ಕೊಡುಗೈ ಪ್ರಜಾಪ್ರಭುತ್ವವಾದಿ(Liberal Democrat)" ಎಂದು ಕರೆದರೆ ಇನ್ನೂ ಕೆಲವರು "ಸಂಪ್ರದಾಯವಾದಿ (Conservative)" ಎಂತಲೂ ಕರೆದಿದ್ದಾರೆ! ಮಾರ್ಕ್ಸ್‌ನ ಭೌತವಾದಕ್ಕೆ ಅಂಬೇಡ್ಕರ್‌ವಾದವು ಕರಾರುವಾಕ್ಕಾಗಿ ಜೋಡಣೆಯಾಗುವುದಿಲ್ಲ ಎಂಬುದು ವಾಸ್ತವದ ಮಾತಾಗಿರುತ್ತದೆ. ಭಾರತದ ಜಾತಿಪೂರಿತ ಸಮಾಜದ ವಾಸ್ತವತೆಯು ಪಾಶ್ಚಿಮಾತ್ಯ ಸಮಾಜಗಳಿಗಿಂತ ಬಹಳವಾಗಿ ಭಿನ್ನವಾಗಿದೆ. ಭಾರತೀಯ ಸಮಾಜದ ಅಧ್ಯಯನವನ್ನು ಕೈಗೊಳ್ಳಬೇಕಾದರೆ ಅಲ್ಲಿಯ ಜಾತಿ ವ್ಯವಸ್ಥೆಯು ಭಾರತದ ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ವಾಸ್ತವತೆಗಳ ಮೇಲೆ ಬೀರುವ ಪ್ರಭಾವಗಳನ್ನು ಪರಿಗಣಿಸಿ ವಿಶಿಷ್ಟವಾದ ರೀತಿಯಲ್ಲೇ ಸಮಸ್ಯೆಗಳ ಅಧ್ಯಯನವನ್ನು ಕೈಗೆತ್ತಿಕೊಳ್ಳಬೇಕಾಗುತ್ತದೆ. ಹಿಂದೂ ಸಂಪ್ರದಾಯವಾದಿಗಳ ವಿರುದ್ಧ ಅಂಬೇಡ್ಕರ್ ಅವರು ನಡೆಸಿದ ಹೋರಾಟಗಳು, ಕರ್ಮಸಿದ್ಧಾಂತದ ನಿರಾಕರಣೆ, ಜನ್ಮಾಂತರಗಳ ನಿರಾಕರಣೆ – ಈ ವಿಚಾರಗಳು ಅಂಬೇಡ್ಕರ್ ಅವರನ್ನು ಒಬ್ಬ "ಭೌತವಾದಿ" ಎಂಬುದನ್ನು ನಿಚ್ಚಳಪಡಿಸುತ್ತದೆ. ಅಂಬೇಡ್ಕರ್ ಅವರು ಬರೆದ "ಬುದ್ಧ ಅಥವಾ ಮಾರ್ಕ್ಸ್" ಲೇಖನವನ್ನೇ ಗಮನಿಸಿ. ಈ ಬರಹದಲ್ಲಿ ಅಂಬೇಡ್ಕರ್ ಅವರು ಬುದ್ಧ ಮತ್ತು ಮಾರ್ಕ್ಸ್‌ರವರ ನಡುವಿರುವ ಹೋಲಿಕೆ ಹಾಗೂ ವೈರುಧ್ಯಗಳ ಕುರಿತು ಬರೆಯುತ್ತಾರೆ. ಹಾಗೇ ಬರೆಯುವಾಗ ಮಾರ್ಕ್ಸ್‌ವಾದಕ್ಕೆ ಪೂರಕವಾದ ಉದಾಹರಣೆಗಳನ್ನು ಬುದ್ಧನ ಭೌತವಾದೀ ಅಡಿಪಾಯದಿಂದ ಹೆಕ್ಕಿ ತೆಗೆಯುತ್ತಾರೆ. ಬಂಧಮುಕ್ತ ಸಮಾಜವೊಂದಕ್ಕೆ(Free society) ಧರ್ಮದ ಅವಶ್ಯಕತೆ ಬೇಕಾಗಿರುತ್ತದೆ ಎಂಬ ತಾತ್ವಿಕ ಅಡಿಪಾಯದಿಂದಲೇ (Premise) ಅಂಬೇಡ್ಕರ್ ಹೊರಡುತ್ತಾರೆ. ಆದರೆ ಅಂಬೇಡ್ಕರ್ ಅವರ "ಧರ್ಮ"ದ ಕಲ್ಪನೆಯು ಸಂಪೂರ್ಣವಾಗಿ ಭೌತವಾದೀ ಸಿದ್ಧಾಂತವೇ ಆಗಿದೆ ಎಂಬುದು ಗಮನಿಸಬೇಕಾದ ಅಂಶ. ಅಂಬೇಡ್ಕರ್ ಅವರ "ಧರ್ಮ"ವು "ಇಲ್ಲಿರುವ ಪ್ರಪಂಚ"ದ ಬಗ್ಗೆ ಮಾತಾಡುವ ಧರ್ಮವಾಗಿರುತ್ತದೆ!!

ಅಂಬೇಡ್ಕರ್ ಅವರು ೨೫ ನಿಯಮಗಳನ್ನು ಪ್ರತಿಪಾದಿಸುತ್ತಾರೆ. ಇವೆಲ್ಲವೂ ಭ್ರಾಮಕ ಲೋಕದ ಕಲ್ಪನೆಗಳನ್ನು ತಿರಸ್ಕರಿಸುವ ತತ್ವಗಳಾಗಿವೆ. ಈ ೨೫ ನಿಯಮಗಳಿಂದ ೬ ನಿಯಮಗಳನ್ನು ವಿಶೇಷ ನಿಯಮಗಳೆಂದು ಹೆಕ್ಕಿ ಅಂಬೇಡ್ಕರ್ ಅವರು ಅವುಗಳನ್ನು ಉಲ್ಲೇಖಿಸುತ್ತಾರೆ.

೧. ಧರ್ಮವೆಂಬುದು ಬದುಕಿನ ವಾಸ್ತವಗಳಿಗೆ ಸಂಬಂಧಿಸಿದ್ದಾಗಿರಬೇಕು. ದೇವರು, ಆತ್ಮ, ಸ್ವರ್ಗ, ಭೂಮಿ ಇತ್ಯಾದಿಗಳ ಕುರಿತು ಭ್ರಮಾತ್ಮಕ ಕಲ್ಪನೆಗಳು ಅಥವಾ ಸಿದ್ಧಾಂತಗಳಿಂದ ಧರ್ಮವು ಕೂಡಿರಬಾರದು.

೨. ನಿಜವಾದ ಧರ್ಮವು ಮಾನವನ ಹೃದಯದಲ್ಲಿರುತ್ತದೆಯೇ ವಿನಹ ಶಾಸ್ತ್ರಗಳಲ್ಲಿ ಅಲ್ಲ.

೩. ಧರ್ಮದ ಕೆಲಸ ಈ ಪ್ರಪಂಚವನ್ನು ಪುನರ್ನಿರ್ಮಿಸುವುದಾಗಿದೆ ಹಾಗೂ ಅದನ್ನು ಸಂತೋಷದಾಯಕವಾಗಿಸುವುದೇ ವಿನಹ ಪ್ರಪಂಚದ ಆದಿ ಅಥವಾ ಅಂತ್ಯಗಳನ್ನು ವಿವರಿಸುವುದಲ್ಲ.

೪. ಯಾವುದೂ ಶಾಶ್ವತವಲ್ಲ, ಯಾವುದೂ ಸಾರ್ವಕಾಲಿಕವಾಗಿ ಜೋಡಿಸುವುದಿಲ್ಲ. ಪ್ರತಿಯೊಂದು ವಿಚಾರ, ಘಟನೆಯು ಪರಿವೀಕ್ಷಣೆಗೆ ಹಾಗೂ ಪರೀಕ್ಷೆಗಳಿಗೆ ಒಳಪಟ್ಟಿರುತ್ತದೆ.

೫. ಯಾವುದೂ ಅಂತಿಮವಲ್ಲ. "ಇರುವುದು" ಅಂದರೆ "ಆಗುವುದು" ಎಂದರ್ಥ.

೬. ಎಲ್ಲದಕ್ಕೂ ಕಾರಣವಿರುತ್ತದೆ. ಈ ನಿಯಮಕ್ಕೆ ಎಲ್ಲವೂ ಒಳಗೊಂಡಿರಲೇಬೇಕು.

ಈ ಮೇಲಿನ ಆರು ಅಂಶಗಳ ಅಧ್ಯಯನದಿಂದ ಅಂಬೇಡ್ಕರ್ ಅವರ ಧರ್ಮವೆಂದರೆ ಸಮಾಜದಲ್ಲಿರುವ ಯಾತನೆ, ಶೋಷಣೆಗಳನ್ನು ಕುರಿತು ಮಾತನಾಡುವ ಧರ್ಮವಾಗಿದೆ. ಅಂಬೇಡ್ಕರ್ ಅವರ ಧರ್ಮವು ಸಮಾಜದ ರಚನೆಯ ಕುರಿತ ಅಂಶಗಳ ಬಗ್ಗೆ(Structural issues) ಪ್ರಾಮುಖ್ಯತೆಯನ್ನು ನೀಡುವಂತಹದ್ದಾಗಿದೆ. ಯಾತನೆ, ನೋವು, ದುಃಖ ಎನ್ನುವುದು ವಾಸ್ತವ. ಇದು ಪೂರ್ವಜನ್ಮದ ಪಾಪಗಳ ಪರಿಣಾಮವಲ್ಲ, ಸಾಮಾಜಿಕ ವಾಸ್ತವಗಳೇ ಇವುಗಳಿಗೆ ಕಾರಣ. ಬುದ್ಧನೂ ಸಹ ದುಃಖಕ್ಕೆ ಕಾರಣಗಳನ್ನು ಈ ವಾಸ್ತವದ ಇರುವಿಕೆಯಲ್ಲಿ

ಹುಡುಕಲು ಹೇಳುತ್ತಾನೆಯೇ ವಿನಹ ಧಾರ್ಮಿಕ ಪ್ರಪಂಚದಲ್ಲಿ ಅಲ್ಲ. ಬದಲಾವಣೆಯು ನಿತ್ಯವಾದದ್ದು ಎಂಬುದು ಬುದ್ಧನ ಹೇಳಿಕೆ. ಬುದ್ಧನ ಪ್ರಕಾರ ಇರುವುದು ಅಂದರೆ ಆಗುವುದು. ಆದರೆ ಸನಾತನ ಧರ್ಮದಲ್ಲಿ ಎಲ್ಲವೂ ನಿರಂತರವಾದದ್ದು ಹಾಗೂ ಬದಲಾವಣೆಗೆ ಒಳಗಾಗದಿರುವುದು. ಬುದ್ಧನ ಚಿಂತನೆಗಳಲ್ಲಿ ಸಾಮಾಜಿಕ ಹಾಗೂ ರಾಜಕೀಯ ಕ್ರಾಂತಿಗೆ ಬೇಕಾದ ಎಲ್ಲ ಅಂಶಗಳ ತಿರುಳು ಅಡಕವಾಗಿದೆ.

**ಧರ್ಮದ ಕುರಿತು**

ಮಾರ್ಕ್ಸ್‌ನ ಪ್ರಕಾರ "ಧರ್ಮವನ್ನು ವಿಮರ್ಶೆಗೆ ಒಳಪಡಿಸುವುದೇ" ವಿಮರ್ಶೆಯ ಆರಂಭ!! "ಮಾನವನು ಧರ್ಮವನ್ನು ಸೃಷ್ಟಿಸುತ್ತಾನೆ. ಧರ್ಮವೆಂಬುದು ಮಾನವನ ಪ್ರಪಂಚ. ಸಮಾಜ ಮತ್ತು ಪ್ರಭುತ್ವವು ಧರ್ಮವನ್ನು ಸೃಷ್ಟಿಸುತ್ತವೆ. ಪ್ರಪಂಚವನ್ನು ತಲೆಕೆಳಗಾಗಿ ಅಂದರೆ ಅದು ಹೇಗಿದೆಯೋ ಅದಕ್ಕೆ ವಿರುದ್ಧವಾಗಿ ಅರ್ಥೈಸುವುದೇ ಧರ್ಮದ ಕೆಲಸ ಅಥವಾ ಉದ್ದೇಶ. ಏಕೆಂದರೆ ಧರ್ಮ ಅಥವಾ ದೇವರು ಮಾನವನನ್ನು ತಯಾರಿಸಿಲ್ಲ ಬದಲಿಗೆ ಸಮಾಜ ಹಾಗೂ ಪ್ರಭುತ್ವದ ಮೂಲಕ ಮಾನವನು ಧರ್ಮ ಹಾಗೂ ದೇವರನ್ನು ತಯಾರಿಸಿದ್ದಾನೆ. ಧರ್ಮದ ಕುರಿತಾದ ಈ ಮಾರ್ಕ್ಸ್‌ವಾದೀ ನಿಲುವನ್ನು ಎಲ್ಲರೂ ತಿಳಿದುಕೊಳ್ಳಬೇಕಾಗಿದೆ. ಮಾರ್ಕ್ಸ್‌ನು ಧರ್ಮವನ್ನು ತಿರಸ್ಕರಿಸಿದ್ದಾನೆ ಹಾಗೂ ಧಾರ್ಮಿಕ ಭಾವನೆಗಳನ್ನು "ಜನಗಳಿಗೆ ನೀಡಲಾದ ಓಪಿಯಂ" ಎಂದು ಹೇಳಿ ಅವುಗಳನ್ನು ಸಾರಾಸಗಟಾಗಿ ತಳ್ಳಿಹಾಕಿದ್ದಾನೆ ಎಂಬ ಭಾವನೆಯೇ ಸಾಮಾನ್ಯವಾಗಿ ಹೆಚ್ಚು ಪ್ರಚಲಿತದಲ್ಲಿರುವುದು. ಧರ್ಮದ ಕುರಿತು ಇರುವ ಮಾರ್ಕ್ಸ್‌ವಾದೀ ನಿಲುವನ್ನು ಬಹಳ ಒರಟೊರಟಾಗಿ ತಿಳಿದುಕೊಳ್ಳುವ ಪರಿ ಇದಾಗಿದೆ. ಧರ್ಮದ ಬಗ್ಗೆ ಮಾರ್ಕ್ಸ್ ಹೇಳಿರುವ ಪ್ರಸಿದ್ಧ ಹೇಳಿಕೆಯ ಪೂರ್ಣ ಪಾಠ ಇಂತಿದೆ.

"ಧಾರ್ಮಿಕವಾಗಿ ಅನುಭವಿಸುವ ಯಾತನೆ, ನೋವುಗಳ ಆಚರಣೆಯು ನಿಜ ಜೀವನದಲ್ಲಿ ಅನುಭವಿಸುವ ಯಾತನೆಯ, ನೋವಿನ ಹಾಗೂ ವಿರೋಧ (ಆಕ್ರೋಶದ) ಪ್ರತಿಫಲನವಾಗಿರುತ್ತದೆ. ದಮನಕ್ಕೊಳಗಾದ ಜೀವಿಯ ನಿಟ್ಟುಸಿರೇ ಈ ಧರ್ಮ. ಹೃದಯಹೀನ ಪ್ರಪಂಚದ ಹೃದಯವೇ ಈ ಧರ್ಮ. ದಯೆ, ಕರುಣೆಗಳಿಲ್ಲದ ಜಗದಲ್ಲಿ ದಯೆ, ಕರುಣೆಯನ್ನು ನೀಡುವುದೇ ಧರ್ಮ. ಧರ್ಮವೆಂಬುದು ಜನರಿಗೆ ಒದಗಿಸಿದ ಓಪಿಯಂ".

ಮಾನವನ ಕಠಿಣ ಸಾಮಾಜಿಕ ವ್ಯವಸ್ಥೆಯು ಸಂಕಟ, ಯಾತನೆಗಳನ್ನು ತಂದೊಡ್ಡುತ್ತವೆ. ವಾಸ್ತವ ಲೋಕದ ಈ ಸಂಕಟ, ಯಾತನೆಗಳು ಧಾರ್ಮಿಕ ನೆಲೆಯಲ್ಲಿ ಸಂಕಟ, ಯಾತನೆಗಳಾಗಿ ಭ್ರಮಿಸಲ್ಪಡುತ್ತವೆ. ಮಾನವನ ವಾಸ್ತವ ಸಮಸ್ಯೆಗಳಿಗೆ ಧರ್ಮವು ಭ್ರಾಮಕ ಹಾಗೂ ಪೊಳ್ಳು ನಿವಾರಣೆಗಳನ್ನು ನೀಡುತ್ತದೆ. "ಧರ್ಮವನ್ನು ನಿಷೇಧಿಸಿ" ಎಂಬ ಮಾರ್ಕ್ಸ್‌ನ ಕರೆಯ ಹಿನ್ನೆಲೆಯು ಭ್ರಾಮಕ ಸಂತೋಷವನ್ನು ನಿರ್ಮೂಲನಗೊಳಿಸಿ ನಿಜವಾದ ಸಂತೋಷವನ್ನು ತರುವುದಾಗಿದೆ. ಧರ್ಮದ ಕುರಿತಾಗಿ ಇರುವ ಮಾರ್ಕ್ಸ್‌ವಾದಿ ವಿಮರ್ಶೆಯು ಧರ್ಮವನ್ನು ತಳ್ಳಿಹಾಕುವುದಲ್ಲ ಬದಲಾಗಿ ಅದು ವಿಶ್ಲೇಷಣಾತ್ಮಕ ಹಾಗೂ ಭೌತವಾದೀ ನಿಲುವಾಗಿರುತ್ತದೆ. ಮಾರ್ಕ್ಸ್‌ನ ಮಾತುಗಳಲ್ಲೇ ಹೇಳುವುದಾದರೆ, "ಸರಪಳಿಯಿಂದ (ಸಂಕೋಲೆಯಿಂದ) ಬಂಧಿಸಲ್ಪಡುವುದೇ ಧರ್ಮ. ವಿಮರ್ಶೆಯು(Criticism) ಈ ಸರಪಳಿಯ(ಸಂಕೋಲೆಯ) ಮೇಲಿರುವ ಭ್ರಾಮಕ ಹೂವುಗಳನ್ನು ಕಿತ್ತೆಸೆಯುತ್ತದೆ. ಆದರೆ ಇದರ ಉದ್ದೇಶ ಭ್ರಮೆಗಳು ಕಿತ್ತೆಸೆಯಲ್ಪಟ್ಟರೂ ಆ ಸರಪಳಿ (ಸಂಕೋಲೆ)ಯನ್ನು ಹಾಗೆಯೇ ಬಿಡುವುದಲ್ಲ. ಬದಲಿಗೆ ಆ ಸರಪಳಿಯನ್ನೇ ಕಿತ್ತೆಸೆದು ನಿಜವಾದ ಹೂವನ್ನು ತೆಗೆದುಕೊಳ್ಳುವುದಾಗಿದೆ. ಧರ್ಮವೆಂದರೆ ಒಂದು ಭ್ರಾಮಕ ಸೂರ್ಯ. ಎಲ್ಲಿಯವರೆಗೆ ಮಾನವನು ತನ್ನ ಸುತ್ತ ತಾನೇ ತಿರುಗುವುದಿಲ್ಲವೋ ಅಲ್ಲಿಯವರೆಗೆ ಈ ಸೂರ್ಯ ಮಾನವನ ಸುತ್ತ ಸುತ್ತುತ್ತಿರುತ್ತದೆ."

ಮಾರ್ಕ್ಸ್‌ವಾದೀ ವಿಮರ್ಶೆಯು ಧರ್ಮದಿಂದ ಉದ್ಭವಿಸುವ ಭ್ರಾಮಕ ಸಂತೋಷಗಳನ್ನು ಕಿತ್ತುಹಾಕಲು ಮಾತ್ರ ಸೀಮಿತವಾಗಿರದೆ ಸ್ವರ್ಗ–ನರಕಗಳಂತಹ ಇತರೇ ಲೋಕಗಳ ಕುರಿತಾಗಿರುವ ನಂಬಿಕೆಗಳನ್ನು ಕಿತ್ತುಹಾಕಿ ವಾಸ್ತವ ಜಗತ್ತಿನ ಬಗ್ಗೆ ತಿಳಿಹೇಳಲು ಅಗತ್ಯವಾದ ವಿಮರ್ಶೆಯಾಗಿರುತ್ತದೆ. ಧರ್ಮವನ್ನು ಕುರಿತು ಮಾಡುವ ವಿಮರ್ಶೆಯು ನಂತರದಲ್ಲಿ ಅಸ್ತಿತ್ವದಲ್ಲಿರುವ ಕಾನೂನುಗಳನ್ನೂ ಕೂಡ ವಿಮರ್ಶಿಸುವಂತಾಗಬೇಕು. ಹಾಗೂ ಇದು ಮುಂದುವರೆದು ರಾಜಕೀಯವನ್ನೂ ಸಹ ವಿಮರ್ಶಿಸುವಂತಾಗಬೇಕು. ಧಾರ್ಮಿಕತೆಯಿಂದ ವಿಮುಖತೆಯು (Estrangement) ಮಾನವನ ಪ್ರಜ್ಞಾ ಪ್ರಪಂಚದಲ್ಲಿ, ಮಾನವನ ಮನದಾಳದಲ್ಲಿ ಘಟಿಸುವ ಘಟನೆಯಾದರೆ, ಆರ್ಥಿಕತೆಯಿಂದ ವಿಮುಖತೆಯು ವಾಸ್ತವ



ಬದುಕಿನಲ್ಲಾಗುವ ಘಟನೆಯಾಗಿರುತ್ತದೆ. ಎಲ್ಲದರಿಂದಲೂ ಬೇರೆಯಾಗಿ, ಒಂಟಿಯಾಗಿ ಇರುವ ನಾಸ್ತಿಕತೆಯನ್ನು ಅದೊಂದು ಭ್ರಮಾತ್ಮಕ ಮಾನವೀಯತೆಯಿಂದ ಕೂಡಿರಬಹುದಾದ ಕೇವಲ ಸೈದ್ಧಾಂತಿಕ ನಿಲುವು ಎಂಬ ಕಾರಣಕ್ಕೆ ಮಾರ್ಕ್ಸ್ ಅದನ್ನು ತಿರಸ್ಕರಿಸುತ್ತಾನೆ. ಅದರ ಬದಲಿಗೆ ಕಮ್ಯುನಿಸ್ಟ್ ನಾಸ್ತಿಕತೆಯು ನಿಜವಾದದ್ದು ಹಾಗೂ ಕ್ರಿಯೆಗೆ ಚಾಲನೆ ಕೊಡುವಂತಹದ್ದು ಎಂದು ಹೇಳಿ ಅದನ್ನು ಸ್ವಾಗತಿಸುತ್ತಾನೆ.

ಹಿಂದೂ ಧರ್ಮದ ಕುರಿತು ಬಹಳ ತೀಕ್ಷ್ಣವಾದ, ಬಹಳ ಹರಿತವಾದ ವಿಶ್ಲೇಷಣೆಗಳನ್ನು ಅಂಬೇಡ್ಕರ್ ಅವರು ಮಾಡಿರುತ್ತಾರೆ. "ಭಾರತದಲ್ಲಿ ಜಾತಿಗಳು: ಅವುಗಳ ಕಾರ್ಯ, ಉಗಮ ಹಾಗೂ ಬೆಳವಣಿಗೆ(Castes in India: Their mechanism, genesis and development)" ಎಂಬ ಲೇಖನವು ಜಾತಿ ವ್ಯವಸ್ಥೆಯ ಉಗಮದ ಬಗ್ಗೆ ಹೊಸ ನೋಟಗಳನ್ನೂ, ಸತ್ಯಗಳನ್ನೂ ತೆರೆದಿಡುವ ಅಮೂಲ್ಯವಾದ ಲೇಖನವಾಗಿದೆ. ಅಂಬೇಡ್ಕರ್ ಅವರ ಪಾಂಡಿತ್ಯದ ಆಳ–ಹರವುಗಳ ಪರಿಚಯವನ್ನು ಈ ಲೇಖನ ಮಾಡಿಸುತ್ತದೆ. ಸಮಾಜಶಾಸ್ತ್ರ, ಮಾನವನ ಉಗಮದ ಶಾಸ್ತ್ರಗಳ ಕುರಿತು ಎಷ್ಟು ಸುಲಲಿತವಾಗಿ ಅನುಸಂಧಾನ ಮಾಡುತ್ತಾರೋ ಅಷ್ಟೇ ಸುಲಲಿತವಾಗಿ ಇತಿಹಾಸ, ಆರ್ಥಿಕಶಾಸ್ತ್ರದ ಬಗ್ಗೆ ಹೇಳುತ್ತಾರೆ. ಮಾರ್ಕ್ಸ್‌ನ ಹಾಗೇ ಅಂಬೇಡ್ಕರ್ ಸಹ ರಾಜಕೀಯ ಅರ್ಥಶಾಸ್ತ್ರದ ವಿದ್ಯಾರ್ಥಿಯೂ ಹೌದು, ಅದರಲ್ಲಿ ಪರಿಣತರೂ ಹೌದು.

ಸಪಿಂಡಕ ಮತ್ತು ಸಗೋತ್ರಗಳ ನಡುವಿರುವ ಬಾಹ್ಯವಿವಾಹದ (Exogamy) ಸಂಪ್ರದಾಯಗಳು ಹಾಗೂ ಇವುಗಳ ಮೇಲೆ ಒಳ ವಿವಾಹದ(Endogamy) ಹೇರಿಕೆಯು ಜಾತಿ ವ್ಯವಸ್ಥೆಯ ಮೂಲ ಆಧಾರ. ಈ ವಾದವನ್ನೇ ಮುಂದುವರೆಸುತ್ತ ಅಂಬೇಡ್ಕರ್ ಅವರು ಹೇಳುತ್ತಾರೆ : "ಜಾತಿ ವ್ಯವಸ್ಥೆಯನ್ನು ಮುಂದುವರೆಸಿಕೊಂಡು ಹೋಗುವುದೆಂದರೆ ಗಂಡು ಮತ್ತು ಹೆಣ್ಣುಗಳ ನಡುವಿನ ಸಂಖ್ಯಾಬಲವನ್ನು ಕಾಪಾಡಿಕೊಂಡು ಹೋಗುವುದು ಎಂದರ್ಥ. ಸ್ತ್ರೀಯರ ಸಂಖ್ಯೆಯು ಹೆಚ್ಚಾದಲ್ಲಿ ಅದನ್ನು ಸತಿಪದ್ಧತಿ, ವಿಧವಾ ವಿವಾಹಕ್ಕೆ ನಿರ್ಬಂಧ, ಇವುಗಳ ಮೂಲಕ ಸ್ತ್ರೀಯರ ಲಭ್ಯತೆಯನ್ನು ತಹಬಂದಿಗೆ ತರಲಾಗುವುದು. ಅದೇ ರೀತಿ ಪುರುಷರ ಸಂಖ್ಯೆಯು ಹೆಚ್ಚಾದಲ್ಲಿ ಆಗ ವಿಧುರರಿಗೆ ಬ್ರಹ್ಮಚರ್ಯದ ಕಟ್ಟುಪಾಡು ಅಥವಾ ಆತನಿಗಿಂತ ಅತಿ ಕಿರಿಯ ಹೆಣ್ಣಿನೊಂದಿಗೆ ವಿವಾಹ(ಬಾಲ್ಯ ವಿವಾಹ)ದ ಮೂಲಕ ಪುರುಷರ ಲಭ್ಯತೆಯನ್ನು ನಿಯಂತ್ರಿಸಲಾಗುತ್ತಿತ್ತು. ಅಂಬೇಡ್ಕರ್ ಅವರು ಗುರ್ತಿಸಿದಂತೆ "ಜಾತಿಯೆಂದರೆ ಒಳಗಿನಿಂದ ಆವೃತವಾದ ವರ್ಗ. ಇದು ಒಳ ವಿವಾಹ (Endogamy)ಪದ್ಧತಿಯಿಂದ ಆವೃತವಾಗಿದೆ. ಹೀಗಾಗಿ ಜಾತಿಪದ್ಧತಿಯ ನಿವಾರಣೆಗೆ ಸುಲಭೋಪಾಯವೆಂದರೆ "ಅಂತರ್ ಜಾತಿ ವಿವಾಹ"ಗಳನ್ನು ಉತ್ತೇಜಿಸುವುದು ಹಾಗೂ ಒಳವಿವಾಹದ ನಾಶ. ಜಾತಿಪದ್ಧತಿಯ ಕುರಿತು ಅಂಬೇಡ್ಕರ್ ಅವರು ಮಂಡಿಸಿರುವ ವಿಚಾರಗಳು ಈಗಲೂ ಪ್ರಸ್ತುತವಾಗಿವೆ. ನಮ್ಮ ದೇಶದಲ್ಲಿ ನಡೆವ ಮದುವೆಗಳಲ್ಲಿ ಕೇವಲ ಶೇ.೩ರಷ್ಟು ಮಾತ್ರ ಅಂತರ್‌ಜಾತಿ ವಿವಾಹಗಳಾಗಿವೆ. ಎಲ್ಲ ವೃತ್ತಪತ್ರಿಕೆಗಳಲ್ಲಿ ಸಜಾತೀಯ ವಧು–ವರರುಗಳೇ ಬೇಕೆಂಬ ಜಾಹಿರಾತುಗಳನ್ನೇ ಕಾಣುತ್ತಿರುವ ಸಂದರ್ಭ ಇದಾಗಿದೆ. "ಹಿಂದು ಧರ್ಮದೊಳಗಿನ ಒಗಟುಗಳು" ಎಂಬ ಅವರ ಲೇಖನವು ಧಾರ್ಮಿಕ ಪುರಾಣ ಕಥೆಗಳನ್ನು, ಸನಾತನ

ಧರ್ಮವೆಂಬ ಕಲ್ಪನೆಯನ್ನು ಪಾಂಡಿತ್ಯಪೂರ್ಣವಾಗಿ ವಿಮರ್ಶಿಸುತ್ತದೆ."

ಅಂಬೇಡ್ಕರ್ ಅವರು "ಜಾತಿ ವಿನಾಶ" ಎಂಬ ಲೇಖನದಲ್ಲೂ ಸಹ ಹಿಂದೂ ಧರ್ಮದಲ್ಲಿ ಅಡಕವಾಗಿರುವ ರಾಚನಿಕ ಅಸಮಾನತೆ (Structural inequality) ಕುರಿತು ವಿಶ್ಲೇಷಿಸಿದ್ದಾರೆ. ಸಮಾಜವಾದಿಗಳ ಜೊತೆ ಅಂಬೇಡ್ಕರ್ ಅವರು ನಡೆಸಿದ ಸೈದ್ಧಾಂತಿಕ ಹೋರಾಟಗಳು ಈಗಲೂ ಪ್ರಸ್ತುತವಾಗಿವೆ. ಅವರು ಹೇಳುತ್ತಾರೆ: "ಸಮಾಜವಾದ ಎನ್ನುವುದು ಒಂದು ವಾಸ್ತವಿಕ ನೆಲೆಗಟ್ಟಿನ ಕಾರ್ಯಸೂಚಿಯಾಗಿದ್ದು (Program) ಅದು ಅಗಮ್ಯ ಕಲ್ಪನೆಯಾಗದೇ ಇದ್ದಲ್ಲಿ ಆಗ ಆ ಸಮಾಜವಾದಿಯನ್ನು ನೀನು ಸಮಾನತೆಯನ್ನು ನಂಬುತ್ತೀಯೋ ಎಂದು ಕೇಳುವುದು ಸರಿಯಲ್ಲ. ಒಂದು ವರ್ಗವು ಇನ್ನೊಂದು ವರ್ಗವನ್ನು ತುಳಿಯುವುದನ್ನು, ಕೆಟ್ಟದ್ದಾಗಿ ನೋಡಿಕೊಳ್ಳುವುದನ್ನು ಒಂದು ವ್ಯವಸ್ಥೆಯಾಗಿ, ಸಿದ್ಧಾಂತವಾಗಿ ಒಪ್ಪುತ್ತಾನೋ ಇಲ್ಲವೋ ಎಂಬುದೇ ಅವನಿಗೆ ಹಾಕಬೇಕಾದ ಪ್ರಶ್ನೆಯಾಗಿರುತ್ತದೆ. ಕಾಲ್ಪನಿಕ ಸಮಾಜವಾದಿಗಳ ಕುರಿತು ಈ ಮೊದಲು ಮಾರ್ಕ್ಸ್ ಹೇಳಿರುವುದೂ ಸಹ ಇದೇನೇ. ದಮನಕ್ಕೆ ಒಳಗಾದವರ ಕುರಿತು ನೈಜ ಕಳಕಳಿಯನ್ನು ವ್ಯಕ್ತಪಡಿಸುವ ಅಂಬೇಡ್ಕರ್ ಕೇವಲ ತತ್ವ-ಸಿದ್ಧಾಂತಗಳ ಮೇಲೆ ನಿಂತಿರುವ ಸಮಾಜವಾದೀ ಕಾರ್ಯಸೂಚಿಯನ್ನು ವಿಶ್ಲೇಷಣೆಗೆ ಹಚ್ಚುತ್ತಾರೆ, ವಾಸ್ತವ ಸತ್ಯಗಳನ್ನು ಅರಿಯದೇ ಇರುವುದನ್ನು ಖಂಡಿಸುತ್ತಾರೆ. ಜಾತಿ-ತಾರತಮ್ಯದ ವಿಷಯಗಳನ್ನು ಕೈಗೆತ್ತಿಕೊಳ್ಳಲು ಸಮಾಜವಾದಿಗಳನ್ನು ಅಂಬೇಡ್ಕರ್ ಒತ್ತಾಯಿಸುತ್ತಾರೆ. ಜಾತಿಯೆಂಬ ರಾಕ್ಷಸನು ನಿಮ್ಮ ದಾರಿಗೆ ಅಡ್ಡ ಬರಲಿದ್ದಾನೆ. ಈ ರಾಕ್ಷಸನನ್ನು ಕೊಲ್ಲದೇ ರಾಜಕೀಯ ಕ್ರಾಂತಿ ಅಥವಾ ಆರ್ಥಿಕ ಕ್ರಾಂತಿ ಸಾಧ್ಯವಾಗದು" ಎಂಬುದೇ ಅಂಬೇಡ್ಕರ್ ಅವರ ನಿಲುವಾಗಿತ್ತು.

ಜಾತಿ ವ್ಯವಸ್ಥೆಯ ವಾಸ್ತವತೆಯನ್ನು ಉಪೇಕ್ಷಿಸುವುದರಿಂದಾಗುವ ಅಪಾಯಗಳ ಕಡೆ ಅಂಬೇಡ್ಕರ್ ಎಲ್ಲರ ಗಮನವನ್ನು ಸೆಳೆಯುತ್ತಾರೆ. "ಜಾತಿ ವ್ಯವಸ್ಥೆ ಎನ್ನುವುದು ಬರಿಯ ಶ್ರಮದ ವಿಭಜನೆಯಲ್ಲ, ಅದು ಶ್ರಮಜೀವಿಗಳ ವಿಭಜನೆ" ಎಂದು ಘೋಷಿಸುತ್ತಾರೆ. ಭಾರತೀಯ ಸಮಾಜದಲ್ಲಿರುವ ಜಾತಿ ಆಧಾರಿತ ವ್ಯವಸ್ಥೆಯು ಪಾಶ್ಚಿಮಾತ್ಯ ದೇಶಗಳ ಏಕವರ್ಗೀಯ ಗುಣಗಳಿಗಿಂತ ಬಹಳ ವಿಭಿನ್ನವಾಗಿರುವುದನ್ನು ತೋರಿಸುತ್ತದೆ. ಹಿಂದೂ ಸಮಾಜದ ಕುರಿತು ಅಂಬೇಡ್ಕರ್ ಅವರ ಹರಿತವಾದ ವಿಶ್ಲೇಷಣೆಗಳು ದಿನ ನಿತ್ಯದ ಅನುಭವಗಳ ಆಧಾರದಲ್ಲಿ ಇದ್ದು, ಒಳಿತು-ಕೆಡುಕು ಇತ್ಯಾದಿ ಭ್ರಾಮಕ ಕಲ್ಪನೆಗಳ ಆಧಾರದಲ್ಲಿ ಇರಲಿಲ್ಲ ಎಂಬುದನ್ನು ಗಮನಿಸಬೇಕು. ಅಂಬೇಡ್ಕರ್ ಅವರು ಬೌದ್ಧ ಮತವನ್ನು ಆಯ್ಕೆ ಮಾಡಿಕೊಳ್ಳಲು ಅದರೊಳಗೆ ಹುದುಗಿರುವ ಭೌತವಾದವೇ ಕಾರಣವಾಗಿರುತ್ತದೆ.

"ಬುದ್ಧ ಮತ್ತು ಮಾರ್ಕ್ಸ್" ಎಂಬ ತಮ್ಮ ಲೇಖನದಲ್ಲಿ ಬುದ್ಧ ಮತ್ತು ಮಾರ್ಕ್ಸ್‌ನ ತಾತ್ವಿಕ ಸಿದ್ಧಾಂತಗಳು ಒಂದೇ ಆಗಿದ್ದವು. ಇಬ್ಬರ ಉದ್ದೇಶಗಳು ಒಂದು ಸಮ ಸಮಾಜವನ್ನು, ಸಮಾನತೆಯ ವ್ಯವಸ್ಥೆಯನ್ನು ತರುವುದು ಆಗಿತ್ತು. ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ವ್ಯವಸ್ಥೆಯಲ್ಲಿ ಸಮಾನತೆ ಇವರಿಬ್ಬರ ಗುರಿಯಾಗಿತ್ತು. ಮಾರ್ಕ್ಸ್‌ವಾದೀ ಸಿದ್ಧಾಂತವನ್ನು ಅಂಬೇಡ್ಕರ್ ಅವರು ಕಟುವಾಗಿ ವಿಮರ್ಶಿಸುತ್ತಾರೆ. ಸಮಾಜವಾದವು ಅನಿವಾರ್ಯವಾಗಿದ್ದಲ್ಲಿ ಅದು ಎಲ್ಲೆಡೆ ಬೇರೂರಬೇಕಾಗಿತ್ತು ಆದರೆ ರಷ್ಯಾ ಮತ್ತು ಅದರ ಮಿತ್ರ ರಾಷ್ಟ್ರಗಳಲ್ಲಿ ಮಾತ್ರ ಏಕೆ ಕಾಣುತ್ತೇವೆ? ಎಂಬುದು ಅಂಬೇಡ್ಕರ್ ಅವರ ಪ್ರಶ್ನೆಯಾಗಿತ್ತು. ಆದರೆ ಅಂಬೇಡ್ಕರ್ ಅವರು ಇಲ್ಲಿ ಒಂದು ಬಹು ಮುಖ್ಯವಾದ ವಿಚಾರವನ್ನು ಪರಿಗಣಿಸದಿರುವುದು ಸ್ಪಷ್ಟ. ಬಂಡವಾಳಶಾಹೀ ಪದ್ಧತಿ ಎನ್ನುವುದು ಕೇವಲ ೨೫೦ ವರ್ಷಗಳ ಇತಿಹಾಸವಿರುವ ಯುವ ಆರ್ಥಿಕ ರೂಪವಾಗಿದೆ. ಮಾರ್ಕ್ಸ್‌ವಾದೀ ಚಿಂತನೆಗಳ ಐತಿಹಾಸಿಕತೆಯ ಮಹತ್ವವನ್ನು ಇಲ್ಲಿ ಅಂಬೇಡ್ಕರ್ ಉಪೇಕ್ಷಿಸುತ್ತಾರೆ. ಮಾನವನ ಮೂಲಕ ಇತಿಹಾಸವು ನಿರಂತರವಾಗಿ ಚಲಿಸುತ್ತದೆ. ಕೇವಲ ರಾಜರ, ಅವರ ಸಂತತಿಯ ಅಥವಾ ಚಕ್ರವರ್ತಿಗಳ ಕತೆ ಇದಲ್ಲ.

ಬಂಡವಾಳಶಾಹೀ ಪದ್ಧತಿಯ ಮಹಾ ವಿಮರ್ಶಕನಾಗಿದ್ದರೂ ಕೂಡ ಮಾರ್ಕ್ಸ್‌ನು ಬಂಡವಾಳಶಾಹೀ ಪದ್ಧತಿಯು ಪ್ರಗತಿಪರ ಹಾಗೂ ಕ್ರಾಂತಿಕಾರೀ ಬದಲಾವಣೆಗಳ ಹರಿಕಾರವಾಗಿತ್ತು ಎಂದು ಗುರ್ತಿಸಿರುತ್ತಾರೆ. ಬೂರ್ಷ್ವಾ ಆರ್ಥಿಕ ಇತಿಹಾಸಕಾರರು ಈ ಬಂಡವಾಳಶಾಹೀ ಪದ್ಧತಿಯು ಶಾಶ್ವತವಾಗಿರುತ್ತದೆ ಎಂದೇ ನಂಬಿದ್ದಾರೆ. ಆದರೆ ಇತಿಹಾಸ ಹಾಗೂ ದ್ವಂದ್ವಾತ್ಮಕತೆಯು ಬದಲಾವಣೆ ಎಂಬುದು ಮಾತ್ರ ಶಾಶ್ವತವೆಂದು ತೋರಿಸಿಕೊಟ್ಟಿದೆ. ಯಾರೂ ಸಹ ಒಂದೇ ನದಿಯನ್ನು ಎರಡು ಸಲ ದಾಟಲಾರರು. ಸಮಾಜವಾದವನ್ನು ತಪ್ಪಿಸಲು ಸಾಧ್ಯವಿಲ್ಲ ಎಂಬುದನ್ನು ಮಾರ್ಕ್ಸ್ ಎಲ್ಲೂ ಎಂದೂ ಹೇಳಿಲ್ಲ. ಹೊರಗಿನ ಸನ್ನಿವೇಶಗಳು ಹಾಗೂ ಮಾನವನ ಮನಸ್ಸುಗಳು ಕ್ರಾಂತಿಗೆ ಪೂರಕವಾಗಿದ್ದಾಗ ಹಾಗೂ ಕ್ರಾಂತಿಗೆ ಸನ್ನದ್ಧರಾಗಿರುವಾಗ ಮಾತ್ರ ಕ್ರಾಂತಿ ಸಾಧ್ಯ. ಮಾರ್ಕ್ಸ್‌ನ ಪ್ರಕಾರ "ಕ್ರಾಂತಿಕಾರಿ ಚಟುವಟಿಕೆ" ಎಂದರೆ ತನ್ನನ್ನು ತಾನು ಬದಲಾಗುವುದು ಹಾಗೂ ಹೊರಗಿನ ಸನ್ನಿವೇಶಗಳನ್ನು ಬದಲಾಯಿಸುವುದು. ಇವೆರಡನ್ನೂ ಅಂಬೇಡ್ಕರ್ ಅವರು ಮಾರ್ಕ್ಸ್‌ನನ್ನು ವಿಮರ್ಶಿಸುವಾಗ ಪರಿಗಣಿಸುವುದಿಲ್ಲ ಎಂಬುದು ನನ್ನ ಭಾವನೆ.

ಸಮಾಜವಾದದ ಅಂತಿಮ ಗುರಿ ಸರಿಯಾದದ್ದೆಂದು ಅಂಬೇಡ್ಕರ್ ಒಪ್ಪುತ್ತಾರೆ. "ಕಾರ್ಮಿಕ ವರ್ಗದ ಸರ್ವಾಧಿಕಾರ" ಎಂಬ ವಿಚಾರವನ್ನು ಕುರಿತು ಅಂಬೇಡ್ಕರ್ ಅವರು ಮಾರ್ಕ್ಸ್ ಜೊತೆ ವಾಗ್ವಾದಕ್ಕೆ ಇಳಿಯುತ್ತಾರೆ. ಅಂಬೇಡ್ಕರ್ ಅವರ ಪ್ರಕಾರ ಇದು ಕ್ರೌರ್ಯ, ಹಿಂಸೆಯ ವಿಧಾನ ಹಾಗೂ ಪ್ರತಿಯೊಂದು ಸರ್ವಾಧಿಕಾರವೂ ಸ್ವಾತಂತ್ರ್ಯವನ್ನು ಅಪಹರಿಸುತ್ತದೆ. ಆದರೆ ಮಾರ್ಕ್ಸ್‌ವಾದೀ "ಕಾರ್ಮಿಕ ವರ್ಗದ ಸರ್ವಾಧಿಕಾರ"ವು ಪ್ರಜಾಪ್ರಭುತ್ವದ ಮೌಲ್ಯಗಳನ್ನು ಹಾಗೂ ಮಾನವತಾವಾದಿ ಸಂಸ್ಥೆಗಳನ್ನು ನಿರಾಕರಿಸುವುದಿಲ್ಲ. ಕಮ್ಯುನಿಸಂ ಹಾಗೂ ಬೌದ್ಧ ಧರ್ಮ ಇವೆರಡರ ಗುರಿ, ಉದ್ದೇಶಗಳು ಒಂದೇ ಆಗಿವೆಯೆಂದು ಒಪ್ಪಿಕೊಂಡ ಅಂಬೇಡ್ಕರ್ ಅವರು ಈ ಗುರಿ, ಉದ್ದೇಶಗಳನ್ನು ನನಸಾಗಿಸುವ ದಾರಿ, ವಿಧಾನಗಳ ಕುರಿತು ಅಪಸ್ವರ ಎತ್ತಿರುತ್ತಾರೆ.

ಬುದ್ಧನು ಉಪದೇಶಿಸಿದ ಪಂಚಶೀಲ ಹಾಗೂ ಅಷ್ಟಾಂಗ ಮಾರ್ಗಗಳನ್ನು ಅಂಬೇಡ್ಕರ್ ಎತ್ತಿಹಿಡಿಯುತ್ತಾರೆ. ಪ್ರತಿಯೊಬ್ಬ ವ್ಯಕ್ತಿಯು ಅವನ ನೈತಿಕ ಮೌಲ್ಯಗಳಲ್ಲಿ ಬದಲಾವಣೆ ತರುವುದರ ಮೂಲಕ ಸಮಾಜವಾದೀ ಸಮಾಜ ಸಾಧ್ಯ ಎಂದು ಅಂಬೇಡ್ಕರ್ ಭಾವಿಸುತ್ತಾರೆ. ನನ್ನ ಪ್ರಕಾರ ಇದು ಅಂಬೇಡ್ಕರ್ ಅವರು ಭ್ರಾಮಕ ಭಾವನಾವಾದಕ್ಕೆ ಸಿಲುಕಿರುವುದಕ್ಕೆ ಉತ್ತಮ ಉದಾಹರಣೆಯಾಗಿರುತ್ತದೆ. ಸಮಾಜವೊಂದು ಇಡಿಯಾಗಿ ಅಂದರೆ ಶೋಷಕ ವರ್ಗವನ್ನೂ ಒಳಗೊಂಡು ನೈತಿಕವಾಗಿ ಪರಿಶುದ್ಧತೆಯನ್ನು ತನ್ನದಾಗಿಸಿವುದರ ಮೂಲಕ ಸಮಾಜವಾದವನ್ನು ಸ್ಥಾಪಿಸಬಹುದು ಎಂಬ ರಮ್ಯ ಕಲ್ಪನೆಗೆ ಚರಿತ್ರೆಯೇ ಉತ್ತರ ನೀಡಬೇಕು.

ಮಾರ್ಕ್ಸ್ ಮತ್ತು ಅಂಬೇಡ್ಕರ್ ಅವರ ನಡುವೆ ಈ ಭಿನ್ನಾಭಿಪ್ರಾಯಗಳು ಇದ್ದರೂ ಸಹ ಈ ಸಮಾಜವನ್ನು ವಾಸ್ತವದ ಕನ್ನಡಿಯಲ್ಲಿ ನೋಡುವತ್ತ ಇವರಿಬ್ಬರೂ ನಮ್ಮ ಸಹಾಯಕ್ಕೆ ಬರುತ್ತಾರೆ. ಒಂದು ನ್ಯಾಯಯುತ ಸಮಾಜದ ಕುರಿತು ಚಳುವಳಿ ನಡೆಸಲು ಇವರಿಬ್ಬರೂ ಚೌಕಟ್ಟನ್ನು ಒದಗಿಸಿದ್ದಾರೆ. ಭಾರತೀಯ ಸಮಾಜದ ಕುರಿತು ಸ್ಪಷ್ಟ ಹಾಗೂ ವಾಸ್ತವ ಅರಿವನ್ನು ಮೂಡಿಸುವಲ್ಲಿ ಇವರಿಬ್ಬರ ತತ್ವಗಳು ಪ್ರಯೋಜನಕಾರಿಯಾಗಿವೆ. ಕಮ್ಯುನಿಸಂ ಕುರಿತು ಕಟು ವಿಮರ್ಶೆಗಳನ್ನು ಅಂಬೇಡ್ಕರ್ ಕೈಗೆತ್ತಿಕೊಂಡಿದ್ದರೂ ಕೂಡ ಅವರು ಕೊನೆವರೆಗೂ ಮಾರ್ಕ್ಸ್‌ವಾದೀ ಚಿಂತನೆಗಳ ಜೊತೆಯಲ್ಲೇ ಇದ್ದರು. ಸಮಾಜವಾದೀ ಸಮಾಜದ ಸ್ಥಾಪನೆಯೇ ಇವರಿಬ್ಬರ ಗುರಿಯಾಗಿತ್ತು. ಈ ಇಬ್ಬರು ಚಿಂತಕರೂ ಅವರ ಕಾಲಘಟ್ಟದ ಹಾಗೂ ಹಿಂದಿನ ಕಾಲದ ಸಮಾಜದ ಸ್ಥಿತಿಗತಿಗಳನ್ನು ವಿಶ್ಲೇಷಣೆಗೆ ಒಡ್ಡಿ ಅದರ ಮೂಲಕ ಹೊಸ ವಿಚಾರಗಳನ್ನು, ಹೊಸ ಒಳನೋಟಗಳನ್ನು ಹೇಳಿರುತ್ತಾರೆ.

ಮಾರ್ಕ್ಸ್‌ವಾದಿಗಳು ಹಾಗೂ ಅಂಬೇಡ್ಕರ್‌ವಾದಿಗಳು ತಮ್ಮ ತಮ್ಮ ವಿಧಾನಗಳಿಗೆ ಕುರುಡಾಗಿ ಅಂಟಿಕೊಂಡು ಒಣ ಚರ್ಚೆಗಳಲ್ಲಿ ಮಗ್ನರಾಗಿದ್ದರೆ ಫ್ಯಾಸಿಸ್ಟ್ ಶಕ್ತಿಗಳು ತಮ್ಮ ಬಲವನ್ನು ವರ್ಧಿಸಿಕೊಳ್ಳುತ್ತಿವೆ. ಜನ ಸಮೂಹದಲ್ಲಿ ಹಿಡಿತವನ್ನು ತಮ್ಮ ಒರಟು ಸಿದ್ಧಾಂತಗಳ ಮೂಲಕ ಫ್ಯಾಸಿಸ್ಟರು ಸಾಧಿಸುತ್ತಿದ್ದಾರೆ. ಕೂದಲು ಸೀಳುವ ವಿಶ್ಲೇಷಣೆಗಳಲ್ಲಿ ತೊಡಗಿಸಿಕೊಳ್ಳುವ ಕಾಲವಿದಲ್ಲ. ಅಂಬೇಡ್ಕರ್‌ವಾದಿಗಳು ಹಾಗೂ ಕಮ್ಯುನಿಸ್ಟರು ತಮ್ಮ ಮಧ್ಯೆ ಇರುವ ಸಮಾನಾಂಶಗಳನ್ನು ಗುರ್ತಿಸಿಕೊಂಡು ಒಂದು ಐಕ್ಯ ಸಾಮಾಜಿಕ, ರಾಜಕೀಯ ಚಳುವಳಿಯನ್ನು ಹುಟ್ಟುಹಾಕುವಲ್ಲಿ ಪ್ರಯತ್ನಗಳು ನಡೆಯಬೇಕು.

ಆರ್ಥಿಕ ನೀತಿಗಳ ಕುರಿತು, ಸಮಾಜವಾದೀ ಹಾಗೂ ಪ್ರಜಾಪ್ರಭುತ್ವ ಕ್ರಾಂತಿಗಳ ಕುರಿತು ಮಾರ್ಕ್ಸ್‌ವಾದಿಗಳ ಹಾಗೂ ಅಂಬೇಡ್ಕರ್‌ವಾದಿಗಳ ನಿಲುವುಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು.

(ಮುಂದುವರೆಯುವುದು)

ಮೂಲ : ಎಂ. ಸತ್ಯಾನಂದ ಅನುವಾದ : ಎಂ. ಸಿ. ಡೋಂಗ್ರೆ
'ಆಶೀರ್ವಾದ' ೩ನೇ ತಿರುವು, ಎರಡನೇ ಮುಖ್ಯರಸ್ತೆ, ಆದರ್ಶನಗರ, ಹಾಸನ – ೫೭೩೨೦೧

# ವೆಜಿಟೇರಿಯನ್ಸ್ ಓನ್ಲಿ




ಬ್ರಾಹ್ಮಣರಿಗೆ ನಾನ್ ವೆಜಿಟೇರಿಯನ್ಸ್ ಎಲ್ಲರೂ ಅಸ್ಪೃಶ್ಯರೇ. ಶೂದ್ರರಿಗೆ ದೊಡ್ಡಬಾಡು ತಿನ್ನುವವರು ಅಸ್ಪೃಶ್ಯರು. ಮುಸ್ಲಿಮರಿಗೆ ಹಲಾಲ್ ತಿನ್ನದವರು ಅಸ್ಪೃಶ್ಯರು, ಘೋಷಾ ಪಾಲಿಸದವರು ಅಸ್ಪೃಶ್ಯರು. ಇನ್ನು ಉಳಿದವರು ಯಾರು? ನರ್ಸಮ್ಮಾಳ ಭಾಷೆಯಲ್ಲಿ 'ಹರಿಜನ್ಸ್' ಅಂದ್ರೆ ದಲಿತರು. ದಲಿತರಿಗೆ ಯಾರು ಅಸ್ಪೃಶ್ಯರು? ಓಹೋ! ದಲಿತರಿಗೆ ಯಾರೂ ಅಸ್ಪೃಶ್ಯರಿಲ್ಲ. ಅಂದ್ರೆ ದಲಿತರೇ ನಿಜವಾದ ಮನುಷ್ಯರು. ಉಳಿದವರೇ ಅಸ್ಪೃಶ್ಯರು ಅಲ್ಲವೇ!

ತೆಲುಗು ಮೂಲ : **ಸ್ಕೈಬಾಬ** ಕನ್ನಡಕ್ಕೆ : **ಕಾ. ಹು. ಚಾನ್‌ಪಾಷ**

ನಡೆದು ನಡೆದು ಕಾಲುಗಳು ನೋಯುತ್ತಿವೆ. ಪಾದಗಳು ಉರಿಯುತ್ತಿವೆ. ಈ ಬಡಾವಣೆಗೆ ಬೆಳಿಗ್ಗೆನೇ ಬಂದ್ವಿ. ಒಂದು ಕಡೆಯಿಂದ ಎಲ್ಲಾ ಬೀದಿಗಳಲ್ಲಿ ಅಲೆಯುತ್ತಿದ್ದೇವೆ. ಟುಲೆಟ್ ಬೋರ್ಡುಗಳು ಕಾಣಿಸುವ ಕಡೆಯೆಲ್ಲಾ ವಿಚಾರಿಸುತ್ತಿದ್ದೇವೆ.

ಇನ್ನೂ ಹಲವಾರು ಬೀದಿಗಳಿವೆ. ಅತ್ತ ಕಡೆಯ ಮೈನ್ ಬಜಾರಿನಿಂದ ಎಡಬಲ ಭಾಗದ ಬೀದಿಗಳನ್ನೆಲ್ಲಾ ಅಲೆದಾಗಿದೆ. ನೋಡಿದ ಮೂರು ಮನೆಗಳಲ್ಲಿ ಒಂದು ಮನೆ ತುಂಬ ಚೆನ್ನಾಗಿದೆ. ನಾವು ಅಂದುಕೊಂಡಂತೆ ಬಾಡಿಗೆ ಸಾವಿರದ ಐನೂರು. ಒಂದು ರೂಮು, ಒಂದು ಚಿಕ್ಕ ಅಡುಗೆ ಮನೆ. ಹೈದರಾಬಾದಿನಲ್ಲಿ ನಾವಿಬ್ಬರಿರಲು ಸಾಕು ಇಷ್ಟು. ಓನರ್ 'ಮೊದಲು ಎರಡು ತಿಂಗಳ ಅಡ್ವಾನ್ಸ್ ಕೊಡಬೇಕು' ಎಂದು ಕೇಳಿದ. 'ಮೊದಲು ಒಂದು ತಿಂಗಳ ಅಡ್ವಾನ್ಸ್ ಕೊಡ್ತೀನಿ ಸಾರ್. ಬಂದ ಮೇಲೆ ಇನ್ನೊಂದು ತಿಂಗಳದ್ದು ಕೊಡ್ತೀನಿ' ಅಂದಾಗ 'ಸರಿ' ಅಂದ ಓನರ್.

'ಅಮ್ಮಯ್ಯ!' ಅಂದುಕೊಂಡೆವು. 'ಈಗಲೇ ಮೂರು ಸಾವಿರ ಕೊಡಬೇಕೆಂದರೆ ಕಷ್ಟವಾಗುತ್ತೆ. ಜೇಬಿನಲ್ಲಿರೋದು ಒಂದೂವರೆ ಸಾವಿರ ಅಷ್ಟೇ. ಅವನೂ ಅಷ್ಟಕ್ಕೇ ಒಪ್ಪಿಕೊಂಡ. ಈಗಲೇ ಕೊಟ್ಟುಬಿಟ್ಟರೆ ಆಯ್ತಲ್ಲ. ಇಲ್ಲದಿದ್ದರೆ ಮತ್ತೆ ಯಾರೋ ಅಡ್ವಾನ್ಸ್ ಕೊಟ್ಟುಬಿಟ್ಟರೇ ನಾವು ಸತ್ವಿ' ಎಂದು ಇಬ್ಬರೂ ಅಂದುಕೊಂಡೆವು.

ಸಾವಿರದ ಐನೂರು ತೆಗೆದು ಕೊಟ್ಟೆ. ಓನರ್ ತೆಗೆದುಕೊಂಡು ಲೆಕ್ಕ ಹಾಕುತ್ತ "ಸರಿ ಕಣಯ್ಯ, ಯಾವಾಗ ಬರ್ತೀರ?" ಅಂದ.

"ಇವತ್ತೇ. ಸಾಯಂಕಾಲ ಸ್ವಲ್ಪ ಸಾಮಾನು ತರ್ತೀವಿ ಸಾರ್" ಅಂದೆ.

"ಆಯ್ತು" ಎಂದು ಮನೆಯೊಳಗೆ ಹೋಗುತ್ತ – "ಹೆಸರೇನು?" ಎಂದ.

ಸ್ವಲ್ಪ ಹೊತ್ತು ನಾನು ಚಡಪಡಿಸಿದೆ. ಇಬ್ಬರೂ ಮುಖಮುಖ ನೋಡಿಕೊಂಡೆವು.

ಏಕೋ ನನ್ನ ಮನಸ್ಸು ಮುದುಡಿತು. ಕೊಂಚ ಹೊತ್ತು ನನ್ನ ಹೆಸರು ರಮೇಶನೋ, ರಾಜೇಶನೋ ಆಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು. ತಪ್ಪದು–

"ಯೂಸುಫ್!" ಅಂದೆ.

ಮನೆಯವನು ಗರಬಡಿದಂತೆ ನಿಂತು ಬಿಟ್ಟ.

"ಏನು?" ಎಂದ.

"ಯೂಸುಫ್" ಅಂದೆ. ಈ ಮನೆಯೂ ಸಹ ಕ್ಯಾನ್ಸೆಲ್ ಅಂತ ಅರ್ಥವಾಯಿತು.

"ಮುಸ್ಲಿಂಸಾ?" ನಂಬಲಾಗದೆ ಇತ್ತ ತಿರುಗಿ ಅಂದ.

"ಹೌದು ರೀ... ಆದ್ರೆ ನಿಮಗೇನು ತೊಂದರೆ ಯಾಗೋದಿಲ್ಲ. ನಾನು ಕೆಲಸಕ್ಕೆ ಹೋಗ್ಬಿಡ್ತೀನಿ. ಇವಳು ತೆಲುಗಿನಲ್ಲೇ ಎಂ.ಫಿಲ್. ಮಾಡ್ತಿರೋದು..." ಇನ್ನು ಏನೋ ಹೇಳಬೇಕೆಂದು ಹುಡುಕುತ್ತಿದ್ದೆ. ಆದರೆ ನಾನು ಹೇಳಿದ್ದು ಮನೆಯವನಿಗೆ ತೃಪ್ತಿಯಾದಂತೆ ಕಾಣುತ್ತಿಲ್ಲ. ಇನ್ನು ತೃಪ್ತಿಯಾಗುವಂತೆ ಹೇಳಲಾರೆ ಅನಿಸಿತು.

"ತೆಲುಗು ತುಂಬ ಚೆನ್ನಾಗಿ ಮಾತಾಡೋದು ನೋಡಿ ನಮ್ಮವ್ರೇ ಅಂದುಕೊಂಡೆ. ಮುಸ್ಲಿಮರಾದ್ರೆ ಕೊಡೋದಿಲ್ಲಯ್ಯ! ಸಾರಿ!" ಎನ್ನುತ್ತ ಹಣವನ್ನು ವಾಪಸ್ ಕೊಡಲು ಬಂದ.

"ಸಾರ್! ನಿಮ್ಮ ಮನೆ ನಮಗೆ ತುಂಬ ಇಷ್ಟವಾಗಿದೆ ಸಾರ್. ಸುತ್ತಿ ಸುತ್ತಿ ಸಾಕಾಗಿದೆ. ನಮ್ಮಿಂದ ನಿಮಗೆ ತೊಂದರೆ ಏನೂ ಆಗಲ್ಲ. ಇಬ್ಬರೂ ಓದಿಕೊಂಡವರಲ್ವೇ ಸಾರ್. ಮನೇನ ನೀಟಾಗಿ ಇಟ್ಟುಕೊಳ್ತೀವಿ ಸಾರ್" ಶಾಹೀನ್ ದೀನಳಾಗಿ ನುಡಿದಳು.

"ಇಲ್ಲಮ್ಮ! ಮನೆಯಲ್ಲಿ ಒಪ್ಪೊಲ್ಲ."

"ಒಂದು ಸಾರಿ ಕೇಳಿ ನೋಡಿ ಸಾರ್. ನಮ್ಮ ಬಗ್ಗೆ ಹೇಳಿ. ನನ್ ಮಿಸಸ್ ಜೊತೆ ಮಾತಾಡೊಕ್ಕೆ ಹೇಳಿ" ಎಂದೆ ನಾನು.

ಓನರ್ ನನ್ನ ಕಡೆ ಒಂದು ವಿಚಿತ್ರ ನೋಟ ಬೀರಿದ.

"ಪ್ಲೀಸ್ ಸಾರ್" ಎಂದೆ.

"ಹೇಳಿ ನೋಡ್ತೀನಿ" ಎನ್ನುತ್ತ ಒಳಗೆ ಹೋದ.

ಅಮ್ಮಯ್ಯ! ಅಂದುಕೊಂಡೆ. ಒಪ್ಪಿಕೊಂಡರೆ ಚೆನ್ನಾಗಿರುತ್ತೆ ಅಂದುಕೊಂಡೆ. ಒಳಗಿನ ಮಾತುಗಳು ಸರಿಯಾಗಿ ಕೇಳಿಸುತ್ತಿಲ್ಲ. "ಜೋರು ಮಾತುಗಳೇನು ಕೇಳಿಸುತ್ತಿಲ್ಲ. ಬಹುಶಃ ಒಪ್ಪಿಕೊಂಡಿರಬಹುದು" ಮೆಲ್ಲಗೆ ಹೇಳಿದೆ ಶಾಹೀನ್‌ಗೆ.

ಓನರ್ ಆಚೆ ಬಂದ.

"ಸಾರಿ ಕಣಯ್ಯ! ಒಪ್ಪಿಕೊಳ್ಳುತ್ತಿಲ್ಲ" ಎನ್ನುತ್ತ ಹಣವನ್ನು ಹಿಂದಿರುಗಿಸಿದ. ಹಿಂತಿರುಗಿ ನೋಡದೆ ಒಳಕ್ಕೆ ಹೋಗಿಬಿಟ್ಟ.

ಮನಸ್ಸಿನಲ್ಲಿ ಇನ್ನೊಂದು ಸಲ ಮುಳ್ಳು ಚುಚ್ಚಿಕೊಂಡಿತು!

* * *

ಹಣವನ್ನು ಜೇಬಿನಲ್ಲಿ ಇಟ್ಟುಕೊಂಡು ಮತ್ತೆ ದಿಕ್ಕುಗಳನ್ನು ನೋಡುತ್ತ ಹೊರಟೆವು. ಆ ಬಜಾರೆಲ್ಲಾ ತಿರುಗಿದರೂ ಇಷ್ಟವಾದ ಮನೆ ಸಿಗಲಿಲ್ಲ.

ಇನ್ನೂ ಎರಡು ಮನೆ ನೋಡಿದ ಮೇಲೆ ಲಾಭವಿಲ್ಲವೆಂದು ಮುಸ್ಲಿಮರಿಗೆ ಮುಸ್ಲಿಮರೇ ಮನೆ ಕೊಡುವುದೆಂದುಕೊಂಡು ಮುಸ್ಲಿಮರಿರುವ ಕಡೆಗೆ ನಡೆದೆವು.

ಚಿಂತಲ್ ಬಸ್ತಿಯ ಪ್ರಾಮುಖ್ಯತೆಯ ಬಗ್ಗೆ ನನ್ನ ಗೆಳೆಯ ಶಂಕರ್ ಹೇಳಿದ ಮಾತುಗಳು ನೆನಪಿಗೆ ಬಂದವು. ಅಲ್ಲಿ ಎಲ್ಲಾ ಕುಲದವರೂ, ಎಲ್ಲಾ ಮತಸ್ಥರೂ ಇರುತ್ತಾರಂತೆ. ಅಲ್ಲದೆ ಪಕ್ಕಾ ಮಾಸ್. ಮುಸ್ಲಿಮರೇ ಅಲ್ಲದೆ ಕ್ರೈಸ್ತರು, ಜೈನರೂ ಸಹ ಕಾಣಿಸಿಕೊಳ್ಳುತ್ತಾರಂತೆ. ದೇಶದ ಎಲ್ಲಾ ರಾಜ್ಯಗಳಿಂದ ಬದುಕಲು ಹೈದರಾಬಾದಿಗೆ ಬಂದವರು ಇಲ್ಲಿದ್ದಾರೇನೋ... ನೇಪಾಳದವರು ಮಾತ್ರ ಹೆಚ್ಚಿಗೆ ಕಾಣಿಸಿಕೊಳ್ಳುತ್ತಾರಂತೆ.

ತರಕಾರಿಯ ಮಾರ್ಕೆಟ್ ಸಹ ಇರುವುದಲ್ಲದೆ ಅಲ್ಲಿ ಸಿಕ್ಕದ ವಸ್ತುಗಳಿಲ್ಲ. ಇಲ್ಲಿ ಸಂತೆ ಭಾನುವಾರವಂತೆ. ಎಲ್ಲಾ ರೀತಿಯ ಜನ, ಮುಖ್ಯವಾಗಿ ಕೂಲಿಕಾರರು ಸಂತೆಯ ಸಾಮಾನುಗಳನ್ನು ಕೊಳ್ಳಲು ಬಂದಾಗ ಸಂತೆ ಗಿಜಿಗುಟ್ಟುತ್ತದೆ.

ಆಲೋಚಿಸುತ್ತ ಮುಸ್ಲಿಮರ ಬಡಾವಣೆಗೆ ಬಂದುಬಿಟ್ಟೆವು. ಚಿಕ್ಕ ಮನೆಗಳು, ಬಡತನ ಎದ್ದು ಕಾಣಿಸುತ್ತಿವೆ. ಬಹಳಷ್ಟು ಬಾಗಿಲುಗಳು ಮುಚ್ಚಿವೆ. ಅಲ್ಲಲ್ಲಿ ಪರ್ದೆಗಳು. ಹೊಸದಾಗಿ ಕಟ್ಟದಂತಿರುವ ಒಂದು ಮನೆಗೆ 'ಟು ಲೆಟ್' ಬೋರ್ಡ್ ಕಾಣಿಸಿತು. ಪ್ರಾಣ ಎದ್ದು ಬಂತು.

ಹೋಗಿ ಬೆಲ್ ಹೊಡೆದೆ.

"ಯಾರದು?" ಮಧುರವಾದ ಧ್ವನಿ.

"ಟುಲೆಟ್ ಬೋರ್ಡ್ ನೋಡಿ ಬಂದ್ವಿ"

"ಸ್ವಲ್ಪ ಹೊತ್ತು ವೇಟ್ ಮಾಡಿ"

"ಸರಿ"

ಸ್ವಲ್ಪ ಹೊತ್ತಿಗೆ ಲುಂಗಿಯನ್ನು ಮೇಲಕ್ಕೆ ಕಟ್ಟಿಕೊಳ್ಳುತ್ತ ಓನರ್ ಬಂದ. ನಮ್ಮಿಬ್ಬರನ್ನು ಸ್ವಲ್ಪ ಆಶ್ಚರ್ಯದಿಂದ ನೋಡಿದ.

"ಏನ್ ಮಾಡ್ತಿದ್ದೀರಾ?" ಎಂದು ನನ್ನ ಕಡೆ ನೋಡುತ್ತ ಕೇಳಿದ.

"ನಾನು ಜರ್ನಲಿಸ್ಟು! ಇವ್ಳು ಓದುತ್ತಿದ್ದಾಳೆ. ನಾವಿಬ್ಬರೇ ಇರೋದು"

ಗುಡುಕಾಟ!

ವಿರಾಮವೆಲ್ಲಿ
ಕವಿಯ ಮನಕೆ?
ಕನಸಿನಲ್ಲಿಯೂ
ವಿಷಯಗಳ
ಗುದುಕಾಟ
ಕವನಕೆ!

"ನೀವು ಆಂಧ್ರದವರಾ?"

"ಇಲ್ಲ. ಯಾಕೆ ಹೀಗೆ ಕೇಳಿದ್ರಿ" ಅಂದೆ ನಾನು.

"ನೀವು ಪರ್ದಾ ಪಾಲಿಸೋದಿಲ್ವಾ?" ನನ್ನನ್ನು ಪರಿಗಣಿಸದೆ ಶಾಹೀನ್ ಕಡೆಗೆ ಸ್ವಲ್ಪ ಅಸಹನೆಯಿಂದ ನೋಡುತ್ತ ಕೇಳಿದ.

"ಇಲ್ಲ" ಅಂದಳು ಶಾಹೀನ್ ಸಹಜವಾಗಿ.

"ಯಾಕೆ?"

"ಹೀಗೇ..." ಅಂದಳು ಶಾಹೀನ್.

"ನಿಮ್ಮಂಥವರಿಗೆ ನಾವು ಮನೆ ಕೊಡೋದಿಲ್ಲ!" ಎಂದು ಹೇಳಿ ನಿರ್ಲಕ್ಷ್ಯದಿಂದ ಗೋಡೆಗೆ ಒರಗಿಕೊಂಡು ನಿಂತುಕೊಂಡ.

ಅಷ್ಟೇ ನಿರ್ಲಕ್ಷ್ಯದಿಂದ ಏನನ್ನಾದರೂ ಹೇಳ ಬೇಕೆನಿಸಿತು ನನಗೆ. ಮರುಕ್ಷಣವೇ ನಿಗ್ರಹಿಸಿಕೊಂಡೆ. ಶಾಹೀನ್ ತಡೆದುಕೊಳ್ಳದೆ ಏನೋ ಹೇಳಲು ಹೊರಟಾಗ ಬೇಡವೆಂಬಂತೆ ಅವಳ ಕೈ ಹಿಡಿದು, "ಹೋಗೋಣ ಬಾ" ಎಂದು ಹೇಳುತ್ತ ಮುಂದೆ ನಡೆದೆ.

ಅವನು ತುಂಬ ಅಲಕ್ಷ್ಯದಿಂದ ನೋಡುತ್ತಿದ್ದ. ಆ ಕಣ್ಣನ್ನು ಸುಟ್ಟುಬಿಡುವಷ್ಟು ಕೋಪವನ್ನು, ದುಃಖವನ್ನು ಎದೆಯಲ್ಲಿ ಅದುಮಿಟ್ಟುಕೊಂಡು ರಸ್ತೆಯ ಕಡೆಗೆ ಬಂದೆವು.

"ಪ್ರಯೋಜನವಿಲ್ಲ. ನಮಗೆ ಮುಸ್ಲಿಮರೂ ಸಹ ಮನೆ ಕೊಡೋದಿಲ್ಲ. ಮುಸ್ಲಿಮರಲ್ಲದವರ ಮನೆಗಳನ್ನೇ ಹುಡುಕಬೇಕು. ನೀನು ತುಂಬ ಸುಸ್ತಾಗಿದ್ದೀಯ. ರೂಮಿಗೆ ಹೊರಟುಹೋಗು. ನಾನು ಯಾವುದೋ ಒಂದು ನೋಡಿಕೊಂಡು ಬರ್ತೀನಿ" ಎಂದು ಹೇಳಿ ಶಾಹೀನಳನ್ನು ಕಳುಹಿಸಿದೆ.

ಮತ್ತೆ ಇನ್ನೊಂದು ದಿಕ್ಕಿನ ಕಡೆಗೆ ಹೊರಟೆ. ಇಂತಹದ್ದೇ ಇನ್ನೊಂದು ಘಟನೆ ನೆನಪಿಗೆ ಬಂತು –

ಹೈಸ್ಕೂಲಿನಲ್ಲಿ ನನ್ನ ಸಹಪಾಠಿ ಮತ್ತು ನನಗೆ ದೂರದ ಬಂಧುವೂ ಆದ ಇಬ್ರಾಹಿಂ ನಮ್ಮ ರೂಮಿಗೆ ಒಮ್ಮೆ ಬಂದಿದ್ದ. ಆಗ ಸೈದಾಬಾದಿನಲ್ಲಿ ಇದ್ದೆವು. ರಾತ್ರಿಯ ಊಟ ಮಾಡಿ ಮಾತಾಡುತ್ತಿದ್ದ ಸಂದರ್ಭದಲ್ಲಿ 'ಪಿಸಲ್‌ಬಂಡದಲ್ಲಿರುವ ಅವನ ಅತ್ತೆಯವರ ಮನೆಯಲ್ಲಿ ಒಂದು ಪೋರ್ಷನ್ ಖಾಲಿಯಿದೆ' ಎಂದ. 'ನಾವು ಬರ್ತೀವಿ ಕೇಳಿ ನೋಡು' ಅಂದೆ. ಅದಕ್ಕೆ ಅವನು ಹೇಳಿದ ಮಾತಿಗೆ ಶಾಕ್ ಆದೆವು. "ನಮ್ಮ ಅತ್ತೆಯವರು ಪರ್ದಾ, ಬುರ್ಖಾ ಹಾಕಿಕೊಳ್ಳದವರಿಗೆ ಕೊಡೋದಿಲ್ಲ."

ಅದು ನೆನಪಾಗಿ ಇನ್ನೂ ದುಃಖವಾಯಿತು.

* * *

ಬಜಾರಿನ ಎರಡನೇ ಮುಖ್ಯ ರಸ್ತೆಗೆ ಬಂದು ಮೊದಲನೇ ಬೀದಿಯ ಕಡೆಗೆ ಹೊರಟೆ. ಒಂದು ಬದಿಯಲ್ಲಿ ಮನೆಗಳೆಲ್ಲವೂ ಎರಡಂತಸ್ತು, ಮೂರಂತಸ್ತಿನವೇ. ಇನ್ನೊಂದು ಬದಿಯಲ್ಲಿ ಎಲ್ಲಾ ಗ್ರೌಂಡ್ ಫ್ಲೋರ್‌ಗಳೇ. ಇಂಥ ಗ್ರೌಂಡ್ ಫ್ಲೋರ್‌ಗಳಿರುವ ಮನೆಗಳೆಂದರೇನೇ ಬಾಡಿಗೆಗೆ ಕೊಡುವುದಿಲ್ಲವೆಂದು ಅರ್ಥ. ಈ ಮೊದಲ ದಿಕ್ಕಿನ ಕಡೆಗೆ ಮೇಲೆಲ್ಲಾ ನೋಡುತ್ತಾ ಹೋದೆ. ನಾಲ್ಕನೇ ಮನೆಯ ಎರಡನೇ ಅಂತಸ್ತಿಗೆ 'ಟು ಲೆಟ್' ಬೋರ್ಡು ಕಾಣಿಸಿದಾಗ ಉತ್ಸಾಹ ಬಂತು.

ಗೇಟ್ ಹತ್ತಿರ ನಿಂತು ಅತ್ತ ಇತ್ತ ನೋಡಿದೆ.

ಗೇಟ್ ತೆಗೆದು ಒಳಗೆ ಹೋದರೆ ಮೇಲೆ ಹತ್ತುವ ಮೆಟ್ಟಿಲಿನ ಹತ್ತಿರ ಕಾಲಿಂಗ್ ಬೆಲ್ ಕಾಣಿಸಿತು. ಬೆಲ್ ಹೊಡೆದು ಹಿಂದೆ ಬಂದು ಮೇಲೆ ನೋಡುತ್ತ ನಿಂತುಕೊಂಡೆ.

ಮೊದಲನೇ ಅಂತಸ್ತಿನಿಂದ ಒಬ್ಬ ಹೆಂಗಸು ಆಚೆ ಬಂದು "ಏನು?" ಅಂದಳು.

"ಟುಲೆಟ್ ಬಗ್ಗೆ ಮೇಡಂ" ಎನ್ನುತ್ತ ಬೋರ್ಡಿನ ಕಡೆ ತೋರಿಸಿದೆ.

"ನೀವು ವೆಜಿಟೇರಿಯನ್ನಾ? ನಾನ್ ವೆಜಿಟೇರಿಯನ್ನಾ?" ಎಂದು ಕೇಳಿದಳು.

ಶಾಕ್ ಹೊಡೆದಂತಾಯಿತು ನನಗೆ. ಅಷ್ಟು ನೇರವಾಗಿ ಅಂತಹ ಪ್ರಶ್ನೆ ಎದುರಾದದ್ದು ಅದೇ ಮೊದಲು. ಏನು ಹೇಳಬೇಕೆಂದು ಕೆಲವು ಕ್ಷಣಗಳು ಅರ್ಥವಾಗಲಿಲ್ಲ. ಸುಳ್ಳು ಹೇಗೆ ಹೇಳುವುದು? ಸತ್ಯ ಹರಿಶ್ಚಂದ್ರರಲ್ಲವೇ!

"ನಾನ್ ವೆಜಿಟೇರಿಯನ್ಸ್ ಮೇಡಂ" ಅಂದೆ.

"ಸಾರಿ!" ಆ ಕಡೆಯಿಂದ ಥಟ್ಟನೆ ಜವಾಬು ಬಂದುದಲ್ಲದೆ ಆಕೆ ಸಹ ಕೂಡಲೇ ಒಳಗೆ ಹೊರಟುಹೋದಳು.

ನಾಚಿಕೆಯಾಯಿತು... ನನ್ನ ಮೇಲೆ ನನಗೋ.... ಈ ಲೋಕದ ಮೇಲೋ....! ಸುತ್ತಲೂ ನೋಡಿದೆ. ಅಮ್ಮಯ್ಯ ಯಾರೂ ಇಲ್ಲ ಅಂದುಕೊಂಡು ಭಾರವಾಗಿ ಮುಂದಕ್ಕೆ ಹೊರಟೆ.

ಅಂದರೆ ಆಕೆಯ ಮಾತಿನ ಅರ್ಥವೇನು? ಮುಸ್ಲಿಮರಿಗೆ ಕೊಡೋದಿಲ್ಲವೆಂದೇ? ಇಲ್ಲ ಇಲ್ಲ... ಯಾರೇ ಆದರೂ ನಾನ್ ವೆಜಿಟೇರಿಯನ್ಸ್‌ಗೆ ಕೊಡುವುದಿಲ್ಲವೆಂದು. ಅಂದರೆ ಇವರು ಯಾರು ಆಗಿರ್ತಾರೆ? ಕೇವಲ ವೆಜಿಟೇರಿಯನ್ಸ್ ಯಾರಪ್ಪ? ತುಂಬ ಕಡಿಮೆ ಜನ ಇದ್ದಾರೆ! ಅಂದರೆ ಇವರೂ ಅವರೇನಾ? ಅಸಲಿಗೆ ನಾನ್ ವೆಜಿಟೇರಿಯನ್ಸ್ ಅಂದರೆ ಯಾರು ಯಾರು? ಮುಸ್ಲಿಮರು ಪಕ್ಕಾ ಮಾಂಸಾಹಾರಿಗಳು. ನಂತರ ಕ್ರೈಸ್ತರು, ದಲಿತರು, ಹಿಂದುಳಿದವರು... ಬಹುಪಾಲು ಎಲ್ಲರೂ. ಉಳಿದವರು ವೈಶ್ಯರು, ಬ್ರಾಹ್ಮಣರು! ಅಂದರೆ ಈ ಎರಡು ಕಮ್ಯೂನಿಟೀಸ್‌ನಲ್ಲಾಗಿರ್ತಾರೆ ಇಂಥವ್ರು ಅಂದರೆ ಇವ್ರು ಅವರಿಗೇ ಕೊಡ್ತಾರಾ? ಅಬ್ಬಾ! ಎಷ್ಟು ಜಾಣರಾಗಿಬಿಟ್ಟಿದ್ದಾರೆ ಜನ. ಒಂದು ಪ್ರಶ್ನೆಯಲ್ಲಿ ಎಷ್ಟು ಅರ್ಥಗಳೋ...! ಒಂದೇ ಒಂದು ಏಟಿಗೆ ಎಲ್ಲರನ್ನೂ ಹೊಡೆದುಹಾಕಬಹುದು. ಉಫ್!

ಇನ್ನೊಂದು 'ಟುಲೆಟ್' ಬೋರ್ಡ್ ಕಾಣಿಸಿತು. ಆಸೆಯಿಂದ ನೋಡಿದೆ. 'ಟುಲೆಟ್' ಕೆಳಗೆ ಇನ್ನೂ ಏನೋ ಬರೆದಿದೆ. ಏನಿರಬಹುದೆಂದು ಹತ್ತಿರಕ್ಕೆ ಹೋದೆ. 'ಓನ್ಲಿ ವೆಜಿಟೇರಿಯನ್ಸ್!' ಬಾಪ್‌ರೇ! ಇದು ಡೈರೆಕ್ಟ್ ಸ್ಪೀಚ್. ಕೇಳುವುದೂ ಸಹ ಇಲ್ಲ. 'ಚಲೇ ಜಾವ್' ಎನ್ನುತ್ತಿದೆಯಾ ಬೋರ್ಡು?

ಈ ಬೀದಿ ಪ್ರಯೋಜನವಿಲ್ಲವೆಂದು ಪಕ್ಕದ ಬೀದಿಯ ಕಡೆ ಹೊರಳಿದೆ.

* * *

ಅಲೆದು ಅಲೆದು ಒಂದು ಕಡೆ ಬೀದಿ ಬಿಟ್ಟು ಮನೆಗಳ ಗುಂಪುಗಳ ಮಧ್ಯಕ್ಕೆ ಬಂದೆ.

ಮನೆಗಳು ತುಂಬಾನೇ ಇವೆ. ಆದರೆ ಒಂದು ಬೋರ್ಡೂ ಸಹ ಕಾಣಿಸಲಿಲ್ಲ. ಒಂದು ಜಗಲಿಯ ಮೇಲೆ ಕುಳಿತು ಎಲೆ ಅಡಿಕೆ ಜಗಿಯುತ್ತಿದ್ದ ಅಜ್ಜಿ ಕಾಣಿಸಿದಾಗ ಹತ್ತಿರಕ್ಕೆ ಹೋಗಿ ಕೇಳಿದೆ:

"ಅಜ್ಜಿ! ಇಲ್ಲಿ ಬಾಡಿಗೆಗೆ ಮನೆ ಸಿಗುತ್ತಾ?"

"ಆ ಮನೆಯಲ್ಲಿ ಇದೆ ಮಗಾ" ಎಂದು ಸೊಗಸಾಗಿ ಹೇಳಿದಳು ಅಜ್ಜಿ.

ಆ ಮನೆಗೆ ಹೋಗಿ ಬಾಗಿಲು ತಟ್ಟಿದೆ. ಪಕ್ಕದಲ್ಲಿ ಚಿಕ್ಕ ಗೇಟಿದೆ. ಸ್ವಲ್ಪ ಹೊತ್ತು ನೋಡಿ ಮತ್ತೆ ಬಾಗಿಲು ತಟ್ಟಿದೆ. ಮನೆಯ ಮೂಲೆಗೆ ಬೋರ್‌ವೆಲ್ ಇದೆ. ಯಾರೋ ಒಬ್ಬಳು ಹುಡುಗಿ ಒಂದು ಪ್ಲಾಸ್ಟಿಕ್ ಬಿಂದಿಗೆ ಇಟ್ಟು ಬೋರ್ ಹೊಡೆಯುತ್ತ ನನ್ನ ಕಡೆಗೇ ನೋಡುತ್ತಿದ್ದಳು. ಕ್ರಾಪು ಸರಿಪಡಿಸಿಕೊಳ್ಳುತ್ತ ಅಸಹನೆಯಿಂದ ಬಾಗಿಲ ಕಡೆ ನೋಡಿದೆ.

ಬಾಗಿಲು ಇನ್ನೂ ತೆಗೆದಿಲ್ಲವಲ್ಲ ಎಂದುಕೊಂಡು ಮತ್ತೆ ತಟ್ಟಲು ಹೋದೆ. ಮಾಯಾ ಪೆಟ್ಟಿಗೆ ತೆರೆದುಕೊಂಡಂತೆ ಬಾಗಿಲು ತೆರೆದುಕೊಂಡಿತು. ಬೆಳ್ಳಗೆ ದಪ್ಪಗೆ ಇರುವ ಆ ಮನೆಯಾಕೆ 'ಏನು?' ಎಂಬಂತೆ ನೋಡಿದಳು.

"ಮನೆ ಬಾಡಿಗೆಗೆ ಇದೆಯಂತೆ ಹೌದೇನ್ರೀ?" ಕೇಳಿದೆ.

"ಹ್ಞಾ... ಇದೆ! ಬ್ಯಾಚುಲರ್ರಾ?" ಆಕೆಯ ಮಾರುತ್ತರ.

"ಅಲ್ಲಾರೀ... ಫ್ಯಾಮಿಲಿ. ಇಬ್ಬರೇ ಇರೋದು"

"ಜಾಬ್ ಮಾಡ್ತಿದ್ದೀರಾ?"

"ಹೌದ್ರೀ"

"ಗೇಟಿನಿಂದ ಬನ್ನಿ" ಎಂದು ಆಕೆ ಬಾಗಿಲು ಹಾಕಿದಳು.

ಅಮ್ಮಯ್ಯ.. ಈಕೆಗೆ ನಂಬಿಕೆ ಬಂದಿದೆ. ರೂಮ್ಸ್ ಚೆನ್ನಾಗಿದ್ದರೆ ಸಾಕೆಂದುಕೊಂಡು ಗೇಟಿನ ಕಡೆಗೆ ನಡೆದೆ. ಗೇಟು ತೆರೆದು ಒಳಗೆ ಹೋದಕೂಡಲೇ ಆಕೆ ಮೇಲಿನ ದಾರಿ ಹಿಡಿದಳು. ಆಕೆಯ ಹಿಂದೆ ಮೆಟ್ಟಿಲು ಹತ್ತಿದೆ.

"ಈಗೆಲ್ಲಿದ್ದೀರಾ?" ಕೇಳಿದಳು ಆಕೆ.

"ಎರ್ರಮಂಜಿಲ್ ಬಾಲಪುರದಲ್ಲಿ ಇದ್ದೀವಿ" ಅಂದೆ.

ಆಕೆ ಬೀಗ ತೆಗೆದು ಪಕ್ಕಕ್ಕೆ ಸರಿದು "ನೋಡಿ" ಅಂದಳು. ಒಳಗೆ ಹೋದೆ. ಒಂದೇ ಕೊಠಡಿ. ಸಿಂಕ್ ಬೇರೆ ಇಲ್ಲ. ಅದನ್ನೇ ಕೇಳಿದೆ. ಕೋಣೆಯ ಒಂದು ಮೂಲೆ ತೋರಿಸಿದಳಾಕೆ. ಕೆಳಗೆ ಮೋರಿ ಇದೆಯೆಂದು. ಅಲ್ಲಿ ಕೆಳಗೆ ಜಾಲರಿ ಇದೆ. ಅಲ್ಲಿ ತೊಳೆದುಕೊಳ್ಳಬೇಕೆಂದಳು. ಬಾಗಿಲು ಪಕ್ಕದಲ್ಲೇ ಬಾತ್‌ರೂಂ. ಅದರ ನಂತರ ಲೆಟ್ರಿನ್. ಪರವಾಗಿಲ್ಲ ಅಂದುಕೊಂಡೆ. ಮತ್ತೆ ಡೌಟು ಬಂದು – "ಇವು ನಮ್ಮೊಬ್ಬರಿಗೇ ತಾನೆ?" ಅಂದೆ.

"ಆಚೆ ಇನ್ನೂ ಎರಡು ಫ್ಯಾಮಿಲಿಗಳಿವೆ. ಎಲ್ಲರಿಗೂ ಸೇರಿ" ಅಂದಳು.

'ಬಾಪ್‌ರೇ' ಅಂದುಕೊಂಡೆ. ಆಚೆ ಇರುವವರು ಬಾತ್‌ರೂಮಿಗೆ, ಲೆಟ್ರಿನಿಗೆ ನಮ್ಮ ರೂಂ ಮುಂದೇನೇ ಬರುವುದೇನು... ಭರಿಸುವುದು ಕಷ್ಟವೇ ಅನ್ನಿಸಿತು. ಆದರೆ ಏನು ಮಾಡುವುದು. ಇವತ್ತು ಡೇಟ್ ಮುವತ್ತು. ಅಲ್ಲಿ ನಾಳೆ ಖಾಲಿ ಮಾಡಬೇಕು.

"ಸರೀ ಕಣ್ರೀ. ಬಾಡಿಗೆ ಎಷ್ಟು?" ಅಂದೆ.

"ಸಾವಿರದ ಐನೂರು" ಅಂದಳಾಕೆ.

ಇನ್ನೇನನ್ನಾದರೂ ಹೇಳಬಹುದೆಂದು ನೋಡಿದೆ. ಅಡ್ವಾನ್ಸ್ ಎರಡು ತಿಂಗಳಿನದ್ದು ಎನ್ನುತ್ತಿಲ್ಲ. ಖುಷಿ! ಖುಷಿ! ಹೇಗಾದರೂ ಹೊಂದಿಕೋಬೇಕು ಅಂದುಕೊಂಡೆ.

"ನಾಳೆ ಬರಬಹುದಾ?" ಅಂದೆ.

"ಯಾವ ಜನ ನೀವು?" ಅಂದಳಾಕೆ ಹಿಂದೆಮುಂದೆ ನೋಡದೆ.

ಎದೆಯಲ್ಲಿ ಕಲ್ಲು ಬಿತ್ತು. ಯಾವಜನ ಎಂದರೇನು?! ಯಾವಜನವಾದರೆ ಈ ಲೋಕಕ್ಕೇನಂತೆ? 'ನಾವು ಮನುಷ್ಯರು' ಎಂದು ಗಟ್ಟಿಯಾಗಿ ಅರಚಬೇಕೆನಿಸಿತು. ಆದರೆ ಆಕೆಗೆ ಅವೆಲ್ಲಾ ಅರ್ಥವಾಗದು. ಪಾಪ, ಈ ಮನೆಗೆ ಒಕ್ಕಲಿಗರು, ಬ್ರಾಹ್ಮಣರು ಬರುವುದಿಲ್ಲವೇ ಅಂದುಕೊಳ್ತೇನೆ. ನಾವು ಒಕ್ಕಲಿಗರು ಎನ್ನುವುದಕ್ಕೆ ಯಾವ ತೊಂದರೆಯೂ ಇರುವುದಿಲ್ಲ ಅಲ್ಲವೇ? 'ಮುಸ್ಲಿಂ' ಅನ್ನುವುದಕ್ಕೆ ಇಷ್ಟೊಂದು ಅಡ್ಡಿಯಾಗಿದಿಯಾ? ಮಾದಿಗರು, ಹೊಲೆಯರು, ಅಗಸರು ಎಂದು ಹೇಳಬೇಕಾಗಿ ಬಂದಾಗಲೂ ಇಷ್ಟೇಯೇನೋ....!

"ನಾವು ಮುಸ್ಲಿಮರು. ನನ್ನ ಹೆಂಡತಿ ತೆಲುಗಿನಲ್ಲೇ ಎಂ.ಎ. ಓದಿದ್ದಾಳೆ. ನಿಮಗೇನೂ ತೊಂದರೆ ಯಾಗೋದಿಲ್ಲ" ಇನ್ನು ಏನೋ ಹೇಳ ಹೊರಟೆ...

"ದೊಡ್ಡಬಾಡು ತಿನ್ತೀರಾ?"

ಮತ್ತೊಂದು ಬಾಂಬು ಸಿಡಿಸಿದಳಾಕೆ!

ಬಾಪ್‌ರೇ! ಇದಕ್ಕೆ ಉತ್ತರ ಹೇಳುವುದು ಕಷ್ಟ. ಆದರೂ ತಪ್ಪದು. ತಿನ್ನುತ್ತೀವಿ ಅಂದರೆ ಖಚಿತವಾಗಿ 'ನೋ' ಎನ್ನುತ್ತಾರೆ. ಈಗ ಹೇಗೆ? ಈಗಾಗಲೇ ಒಂದು ಸಾರಿ ತಪ್ಪಾದರೂ ಸರಿಯೆಂದು ಸುಳ್ಳು ಹೇಳಿದ್ದೇನೆ. ಇದಕ್ಕಿಂತ ಮುಂಚೆ ಇದ್ದ ಮನೆಯವರೂ ಹೀಗೇ ಕೇಳಿದಾಗ ಬೇರೆ ದಾರಿಯಿಲ್ಲದೆ ತಲೆ ಅಡ್ಡವಾಗಿ ಆಡಿಸಿದೆ. ತಿಂಗಳ ನಂತರ ದೊಡ್ಡಬಾಡು ತೆಗೆದುಕೊಳ್ಳುವಾಗ ಮನೆಯವನ ಕಣ್ಣಿಗೆ ಬಿದ್ದೆ ಏನು ಮಾಡುವುದು ಅದೇ ಕಡಿಮೆ ಬೆಲೆ! ಅವತ್ತು ಅವರು ಎಷ್ಟು ಬೈದರೋ... ತಕ್ಷಣ ಮನೆ ಖಾಲಿಮಾಡಿ ಯೆಂದರು. ಮಾನ ಹೋಯ್ತು. ಆ ಬಜಾರಿಗೆಲ್ಲಾ ಗೊತ್ತಾಗಿಹೋಯ್ತು. ಅವರು ಗೊಲ್ಲರು. ಒಬ್ಬನಂತೂ ಹೊಡೆಯಲೇ ಬಂದಿದ್ದ. ಏನಪ್ಪ ಈ ಕಷ್ಟಗಳೆಂದು ಕೂಡಲೇ ಸಿಕ್ಕಿದ ಯಾವುದೋ ಒಂದು ಮನೆಗೆ ದೂರವಾದರೂ ಬಾಡಿಗೆ ಹೆಚ್ಚಾದರೂ ಹೋಗಬೇಕಾಯಿತು.

ಈಗ ಮತ್ತೆ ಅದೇ ಪ್ರಶ್ನೆ. ಅಯ್! ಈ ಜಗತ್ತಿನಲ್ಲಿ ಹೊಂದಿಕೊಳ್ಳುವುದು ಕಷ್ಟ. ನಾವು ಏನು ತಿಂದರೆ ಇವರಿಗೇನು? ಛೇ! ಈಗೇನು ಮಾಡುವುದು?

"ದೊಡ್ಡಬಾಡು ಯಾವಾಗಲೋ ಒಂದು ಸಾರಿ ತಿನ್ತೀವಮ್ಮ. ನೀವು ತಿನ್ನಬೇಡಿ ಎಂದರೆ ತಿನ್ನೋದಿಲ್ಲ. ನಮಗೆ ಮನೆ ಬೇಕಮ್ಮ. ಬೆಳಿಗ್ಗೆಯಿಂದ ಅಲೆಯುತ್ತಿದ್ದೀನಿ..." ದೀನವಾಗಿ ಬೇಡಿಕೊಂಡೆ.

"ದೊಡ್ಡಬಾಡು ತಿನ್ನೋರ್ಗೆ ಕೊಡೊಲ್ಲ" ಎಂದು ರೂಮಿಗೆ ಬೀಗ ಹಾಕುತ್ತಿದ್ದಾಳೆ. ಇನ್ನೇನು ಹೇಳಬೇಕೋ ತಿಳಿಯದೆ ನಿಂತುಬಿಟ್ಟೆ. ಈಗಾಗಲೇ ಮನಸ್ಸನ್ನು ಕೊಂದುಕೊಂಡು 'ನೀವು ತಿನ್ನಬೇಡಿ

ಅಂದ್ರೆ ತಿನ್ನೋದಿಲ್ಲ' ಅಂದೆ. ಛೀ! ಅಷ್ಟು ಶರಣಾಗುವುದು ಬೇಕಿತ್ತೇ?! "ದನದ ಮಾಂಸವನ್ನ ಪ್ರಪಂಚದಾದ್ಯಂತ ತಿಂತಾರೆ ತಾಯಿ" ಎಂದು ಹೇಳಬೇಕೆನಿಸಿತು.

ಆಕೆ ನನ್ನತ್ತ ನೋಡದೆಯೇ ಮೆಟ್ಟಿಲ ಕಡೆ ನಡೆದಳು. ಬೇರೆ ದಾರಿಯಿಲ್ಲದೆ ನಾನೂ ಸಹ ನಡೆದೆ.

ಇನ್ನೂ ಆ ಮನೆಗಳೆಲ್ಲಾ ವ್ಯರ್ಥವೆನಿಸಿತು. ಆಗಲೇ ಇದ್ದ ಆ ಹುಡುಗಿ ಬೋರನ್ನು ಧನ್ನ ಧನ್ನ ಹೊಡೆಯುತ್ತಿದ್ದಾಳೆ. ನನ್ನನ್ನು ನೋಡಿದಳೇನೋ ಅನಿಸಿತು.

* * *

ರಸ್ತೆಗೆ ಬಂದೆ. ಅತ್ತ ಎದುರಿನಲ್ಲಿ ಬೀದಿ ಕಾಣಿಸಿತು. ಅತ್ತ ಕಡೆ ಹೊರಟೆ. ಎದುರಿಗೆ ಎರಡು ಅಂತಸ್ತಿನ ಮನೆಗೆ 'ಟುಲೆಟ್' ಬೋರ್ಡು! ಬಿರಬಿರ ಆ ಮನೆಯ ಬಾಗಿಲ ಬಳಿ ಹೋಗಿ ನೋಡಿದೆ. ಬಾಗಿಲು ತೆರೆದೇ ಇದೆ. ಪಕ್ಕದಲ್ಲೇ ಮೆಟ್ಟಿಲುಗಳಿವೆ. ಆಗಲೇ ಮೆಟ್ಟಿಲುಗಳಿಂದ ಇಳಿದು ಹೋಗುತ್ತಿದ್ದ ಒಬ್ಬ ಹೆಂಗಸು 'ಏನು?' ಎಂಬಂತೆ ನೋಡಿದಳು. "ಬಾಡಿಗೆಗೆ ಮನೆ ಇದೆಯೆಂದು ಬೋರ್ಡು ಇಟ್ಟಿದ್ದಾರಲ್ಲಾ" ಅಂದೆ. "ಮೇಲೆ ಓನರಿದ್ದಾರೆ. ಹೋಗಿ ಕೇಳಿ" ಎನ್ನುತ್ತ ಹೊರಟು ಹೋದಳು. ಮೆಟ್ಟಿಲು ಹತ್ತಿ ಮೇಲಕ್ಕೆ ಹೋದೆ. ಒಬ್ಬ ಭಾರಿ ಮನುಷ್ಯ ಎದುರಾದ. ವಿದ್ಯಾವಂತನಂತೆ ಕಾಣುತ್ತಿದ್ದಾನೆ.

"ಸಾರ್, ಬಾಡಿಗೆಗೆ ಮನೆ...?"

"ಎಷ್ಟು ಜನರಿದ್ದೀರಾ?"

"ಗಂಡ ಹೆಂಡತಿ ಇಬ್ಬರೇ ಸಾರ್"

"ಬಾಡಿಗೆ ಎರಡು ಸಾವಿರದ ಇನ್ನೂರು. ಅದರಲ್ಲೇ ಕರೆಂಟು, ನೀರಿನ ಬಿಲ್ಲು" ಎನ್ನುತ್ತ ಬೀಗ ತೆಗೆದು ತೋರಿಸಿದ. ಒಂದು ದೊಡ್ಡ ರೂಂ. ಒಂದು ಕಿಚನ್. ಅಟ್ಯಾಚ್ಡ್ ಬಾತ್‌ರೂಂ. ತುಂಬ ಚೆನ್ನಾಗಿದೆ ಎನಿಸಿತು. ಆದರೆ ಬಾಡಿಗೇನೇ ಎರಡು ಸಾವಿರದ ಇನ್ನೂರು ಅಂದರೆ ಕಷ್ಟ ಅಲ್ಲವೇ...

"ಸಾರ್! ಬಾಡಿಗೆ ಏನಾದ್ರೂ ಕಡಿಮೆ ಮಾಡಿ ಸಾರ್. ನನ್ ಮಿಸಸ್ ಇನ್ನೂ ಓತ್ತಿದ್ದಾಳೆ ಸಾರ್..."

"ಆ.... ಇಂಥ ಮನೆ ನಿನಗೆ ಎರಡು ಸಾವಿರದ ಐನೂರಕ್ಕೆ ಕಡಿಮೆ ಸಿಗೋದಿಲ್ಲಯ್ಯ ಈ ಏರಿಯಾದಲ್ಲಿ. ಅದೂ ಅಲ್ಲದೆ ನಾನು ಅಡ್ವಾನ್ಸ್ ಸಹ ಕೇಳುತ್ತಿಲ್ಲ. ಬೇರೆಯವರಾದ್ರೆ ಎರಡು ತಿಂಗಳ ಅಡ್ವಾನ್ಸ್ ಕೇಳ್ತಾರೆ"

"ನಿಜಾನೆ ಸಾರ್. ಆದ್ರೆ ನನ್ನ ಒಂದು ಸಂಬಳದಲ್ಲಿ ಕಷ್ಟವಾಗುತ್ತೆ ಸಾರ್. ಸಾವಿರದ ಎಂಟುನೂರಾದ್ರೂ ಮಾಡಿ. ಬೇಕಾದ್ರೆ ಮುಂದೆ ಹೆಚ್ಚಿಸುವಿರಂತೆ" ಅಂದೆ.

"ಹಾಗಂದ್ರೆ ಹೇಗಪ್ಪ?" ಎಂದು ಸ್ವಲ್ಪ ಆಲೋಚಿಸಿ "ಸರಿ, ಎರಡು ಸಾವಿರ ಕೊಡು ಹೋಗು. ಮನೆಯಾಕೆ ಓದುತ್ತಿದ್ದಾಳೆ ಎಂದೆಯಲ್ಲಾ.... ಈಗ ಇದಕ್ಕಿಂತ ಕಡಿಮೆ ನಿನಗೆ ಎಲ್ಲೂ ಸಿಗೋದಿಲ್ಲ."

ಹೇಗೆ? ಮನೆಯೇನೋ ಚೆನ್ನಾಗಿದೆ. ಓನರ್ ಸಹ ಒಳ್ಳೆಯವನಂತಿದ್ದಾನೆ. ಆದರೆ ಎರಡು ಸಾವಿರ ಕೊಡಬಲ್ಲೆನಾ? ಕೊಟ್ಟರೆ ಹೇಗೆ ಬದುಕುವುದು? ಕಷ್ಟವೇ. ಆದರೆ ತಪ್ಪದು. ಟೈಂ ಬೇರೆ ಇಲ್ಲ.

"ಸರಿ ಸಾರ್. ಆದ್ರೆ ಸದ್ಯಕ್ಕೆ ಸಾವಿರದ ಐನೂರು ಮಾತ್ರ ಜೇಬಿನಲ್ಲಿ ಇದೆ ಸಾರ್. ತಕ್ಕೊಳ್ಳಿ. ಉಳಿದ ಐನೂರು ಎರಡು ದಿನದಲ್ಲಿ ಕೊಡ್ತೀನಿ ಸಾರ್."

"ಓಕೆ. ಯಾವಾಗ ಬರ್ತೀರಾ?" ಅಂದ ಹಣ ತೆಗೆದುಕೊಂಡು ಎಣಿಸುತ್ತ...

ಜಿಗಿದು ಕುಣಿಯಬೇಕೆನಿಸಿತು ನನಗೆ. "ನಾಳೆ ಸಾರ್" ಅಂದೆ.

"ಓದಿದವರೆಂದರೆ ನನಗೆ ಇಷ್ಟ ಕಣಯ್ಯ. ಇಬ್ಬರೇ ಇರೋದ್ರಿಂದ ಮನೆಯನ್ನ ಸ್ವಲ್ಪ ಶುಭ್ರವಾಗಿ ಇಟ್ಟುಕೊಂಡ್ರೆ ಸಾಕು" ಅಂದ. ಇನ್ನೇನೂ ಕೇಳದಿದ್ದಾಗ ಆತ ನನಗಾಗಿಯೇ ಇಳಿದು ಬಂದ ಪ್ರವಾದಿಯಂತೆ ಕಾಣಿಸಿದ.

ಯಾವ ಜನ ಎಂದು ಕೇಳಲಿಲ್ಲ! ಯಾವ ಮತ ಅನ್ನಲಿಲ್ಲ! ಯಾವ ಮಾಂಸ ತಿನ್ತೀರಾ ಅಂತ ಕೇಳಲಿಲ್ಲ. ಎಷ್ಟು ಒಳ್ಳೆಯವನು! ಇಷ್ಟು ಒಳ್ಳೆಯವರೂ ಇರ್ತಾರಾ ಲೋಕದಲ್ಲಿ... ಆದರೆ ನಾವು ಮುಸ್ಲಿಮರೆಂದು ಹೇಳಬೇಕಲ್ಲವೇ?... 'ಮುಸ್ಲಿಂ' ಎಂದು ಹೇಳಿದ ಕೂಡಲೇ ಇವನು ಸಹ ಬೇಡವೆಂದರೆ? ಮತ್ತೆ ಅಲೆಯುವ ಸಹನೆ ಇಲ್ಲ. ಆದರೆ ಹೇಳದಿರುವುದು ಒಳ್ಳೆಯದಲ್ಲ. ನೋಡೋಣ...

"ಸಾರ್. ನನ್ ಮಿಸಸ್ ತೆಲುಗನ್ನೇ ಜಾಸ್ತಿ ಮಾತಾಡೋದು ಸಾರ್. ತೆಲುಗು ಎಂ.ಎ. ಮಾಡಿದ್ದಾಳೆ. ನಾನು ಸಹ ತೆಲುಗು ಪೇಪರಿನಲ್ಲೇ ಜರ್ನಲಿಸ್ಟಾಗಿ ಕೆಲ್ಸ ಮಾಡ್ತಿದ್ದೀನಿ ಸಾರ್. ನಾವು ಮುಸ್ಲಿಮರು ಸಾರ್. ಪರವಾಗಿಲ್ಲ ತಾನೇ..." ಅಂದೆ. ಹಿಂದು ಮುಂದು ನೋಡದೆ.

"ಮುಸ್ಲಿಮ್ಸಾ? ಅರೇ! ನೀನ್ಯಾಗೆ ಕಾಣಿಸುತ್ತಿಲ್ಲವಲ್ಲಯ್ಯ! ತೆಲುಗು ಎಷ್ಟು ಚೆನ್ನಾಗಿ ಮಾತಾಡುತ್ತಿದ್ದೀಯಾ?" ಅಂದ ಆಶ್ಚರ್ಯದಿಂದ.

ಮುಖದ ಮೇಲೆ ನಗು ತಂದುಕೊಂಡು ನಿಂತು ಕೊಂಡೆ. ತೆಲುಗು ರಾಜ್ಯದಲ್ಲಿದ್ದು ತೆಲುಗು ಬರುವುದರಲ್ಲಿ ಹೆಚ್ಚೇನಿದೆ? ಅದರಲ್ಲೂ ತೆಲುಗು ಇವರದೊಬ್ಬರದೇ ಸೊತ್ತೆಂಬಂತೆ ಮಾತಾಡುತ್ತಾರೇಕೆ? ಉರ್ದು ಮಾತ್ರ ಮುಸ್ಲಿಮರೊಬ್ಬರದ್ದೇ ಭಾಷೆಯೇ? ಇಲ್ವಲ್ಲ!

ಮುದುಕ ನನ್ನ ಭುಜ ತಟ್ಟಿ ಹೊರಟುಹೋದ.

* * *

ಒಂದು ವಾರವಾದರೂ ನಮ್ಮ ಓನರ್ ನನ್ನನ್ನು ಕೇಳದ ಆ ಮೂರು ಪ್ರಶ್ನೆಗಳ ಮಿಸ್ಟರಿ ಬಿಡಲಿಲ್ಲ. ಅದೇ ಮನಸ್ಸಿನಲ್ಲಿ ತಿರುಗುತ್ತಿದೆ.

ಪಕ್ಕದ ಪೋರ್ಷನಿನಲ್ಲಿ ಕೆಲಸ ಮಾಡುವ ಮನೆಗೆಲಸದಾಕೆ ನಮ್ಮ ಹತ್ತಿರವೂ ಕೆಲಸ ಮಾಡುತ್ತೀನೆಂದು ಕೇಳಿದಳು. ಆಕೆಯ ಪರಿಸ್ಥಿತಿ ಕೇಳಿ ಶಾಹೀನ್ ಒಪ್ಪಿಕೊಂಡಳು.

ಒಬ್ಬ ಮನೆಗೆಲಸದವರನ್ನು ಇಟ್ಟುಕೊಂಡಿದ್ದು ಇದೇ ಮೊದಲನೇ ಸಲ. ಪಾತ್ರೆ ತೊಳೆಯುವುದು, ಬಟ್ಟೆ ಒಗೆಯುವುದು, ಮನೆ ಗುಡಿಸಿ ಒದ್ದೆ ಬಟ್ಟೆಯಿಂದ ಒರೆಸುವುದು ಆಕೆಯ ಕೆಲಸ. ತಿಂಗಳಿಗೆ ಇನ್ನೂರು. ಕಡಿಮೆನೇ ಆದರೂ ನಮಗೆ ಕಷ್ಟವೇ.

ಒಂದು ದಿನ ಆಕೆ ಶಾಹೀನ್ ಜೊತೆ ಮಾತನಾಡುತ್ತ ನಮ್ಮ ಮನೆಯ ಓನರ್ ಬಗ್ಗೆ ಏನೋ ಹೇಳುತ್ತಿದ್ದಾಳೆ.

"ಓನರು ಯಾವ ಜನ ನರ್ಸಮ್ಮ" ಎಂದು ಕೇಳಿದೆ.

"ಹರಿಜನ್ಸ್" ಎಂದಳು.

ಮಿಸ್ಟರಿ ಮೆಲ್ಲಗೆ ಬಿಡಿಸಿಕೊಳ್ಳತೊಡಗಿತು. ಕುರ್ಚಿಯಲ್ಲಿ ಕುಸಿದುಬಿದ್ದೆ.

...ಅಂದ್ರೆ ಬ್ರಾಹ್ಮಣರಿಗೆ ನಾನ್ ವೆಜಿಟೇರಿಯನ್ಸ್ ಎಲ್ಲರೂ ಅಸ್ಪೃಶ್ಯರೇ. ಶೂದ್ರರಿಗೆ ದೊಡ್ಡಬಾಡು ತಿನ್ನುವವರು ಅಸ್ಪೃಶ್ಯರು. ಮುಸ್ಲಿಮರಿಗೆ ಹಲಾಲ್ ತಿನ್ನದವರು ಅಸ್ಪೃಶ್ಯರು, ಘೋಷಾ ಪಾಲಿಸದವರು ಅಸ್ಪೃಶ್ಯರು. ಇನ್ನು ಉಳಿದವರು ಯಾರು? ನರ್ಸಮ್ಮಾಳ ಭಾಷೆಯಲ್ಲಿ 'ಹರಿಜನ್ಸ್' ಅಂದ್ರೆ ದಲಿತರು. ದಲಿತರಿಗೆ ಯಾರು ಅಸ್ಪೃಶ್ಯರು? ಓಹೋ! ದಲಿತರಿಗೆ ಯಾರೂ ಅಸ್ಪೃಶ್ಯರಿಲ್ಲ. ಅಂದ್ರೆ ದಲಿತರೇ ನಿಜವಾದ ಮನುಷ್ಯರು. ಉಳಿದವರೇ ಅಸ್ಪೃಶ್ಯರು ಅಲ್ಲವೇ!

ಕಣ್ಣು ಮುಚ್ಚಿಕೊಂಡೆ. ನಮ್ಮೂರಿನ ಮಾದಿಗರು ತಮಟೆ ಬಡಿದುಕೊಂಡು ಬರುತ್ತಿದ್ದಾರೆ... 'ದೊಡ್ಡಹುಲಿ ಏಟುಗಳಿಂದ ನುಲಿಯುತ್ತ....'

ಹೌದು... ಎಲ್ಲರೂ ಅಸ್ಪೃಶ್ಯರೇ... ಒಂದು ದಲಿತರ ಹೊರತು. ಅದರಲ್ಲೂ ಮಾದಿಗರ ಹೊರತು!


ತೆಲುಗು ಮೂಲ : **ಸ್ಕೈಬಾಬ**
ಕನ್ನಡಕ್ಕೆ : **ಕಾ. ಹು. ಚಾನ್‌ಪಾಷ**
ನಂ. ೧೫, ಭಾರತ್ ಪಾಲಿಟೆಕ್ನಿಕ್ ಎದುರು, ಕೆ.ಜಿ.ಎಫ್. ಮುಖ್ಯರಸ್ತೆ, ಬಂಗಾರಪೇಟೆ – ೫೬೩ ೧೬೨, ಕೋಲಾರ ಜಿಲ್ಲೆ


## ಮಾ(ಗಾ)ಯಾ



ಹಳೆಯ
ನೆನಪುಗಳ
ಮುಂದೆ ಹೊಸ
ನೆನಪುಗಳೇ ಮಾಯ
ನೆನಪುಗಳೇ ಹಾಗೆ
ಅವು ಬರಿ "ಮಾಯಾ"
ಹಚ್ಚಿಕೊಂಡರೆ
ಮೈ ತುಂಬಾ ಗಾಯ.


**ಮರುಳಸಿದ್ದಪ್ಪ ದೊಡ್ಡಮನಿ**
ಹುಲಕೋಟೆ – ೫೮೨೨೦೫
ತಾ॥ ಜಿ॥ ಗದಗ

**ಪ್ರೊ॥ ಎಚ್. ಟಿ. ಪೋತೆ**

ಅದೊಂದು ದಿನ ನನ್ನ ಅಭಿರುಚಿಗೆ ತಕ್ಕ ಪುಸ್ತಕಗಳನ್ನು ಬೆಂಗಳೂರಿನ ಬುಕ್‌ಹೌಸ್ ಒಂದರಿಂದ ಖರೀದಿಸಿಕೊಂಡು ನಾನು ಉಳಿದುಕೊಂಡ ರೂಮಿನ ಕಡೆಗೆ ನಡೆದುಕೊಂಡು ಹೊರಟಿದ್ದೆ. ಅಲ್ಲಿಯೇ ರಸ್ತೆ ಬದಿಯಲ್ಲಿ ಸ್ಕಾರ್‌ಪಿಯೊ ಗಾಡಿಯೊಂದು ನಿಂತಿತ್ತು. ಆ ಗಾಡಿಯ ಹಿಂಬದಿಗೆ ಅಂಟಿಸಿದ್ದ ಚಿತ್ರಪಟದತ್ತ ನನ್ನ ಚಿತ್ತ ಹರಿಯಿತು. ಅದರ ಮೇಲೆ 'ಅಂಬೇಡ್ಕರ್ ಜನತಾ ಪಕ್ಷ' ಎಂದು ದಪ್ಪದಾದ ಬಹುವರ್ಣ ಅಕ್ಷರಗಳಿಂದ ಬರೆಯಲಾಗಿತ್ತು. ಅದೊಂದು ಹೊಸ ರಾಜಕೀಯ ಪಕ್ಷದ ಹೆಸರು. ಅದರ ನಡುವೆ ಇದ್ದ ಬಾಬಾಸಾಹೇಬರ ಮುಖ ಮುದ್ರಿಕೆಯ ಚಿತ್ರಪಟ ನನ್ನನ್ನು ಮತ್ತೆ ಮತ್ತೆ ಆ ಕಡೆಗೆ ನೋಡುವಂತೆ ಮಾಡಿತು. ಒಂದು ಕ್ಷಣ ಆಶ್ಚರ್ಯವೂ ಆಯಿತು. ಏನಿದು ಹೊಸ ಪಕ್ಷ, ಬಿಎಸ್‌ಪಿ, ಆರ್‌ಪಿಐ ಎಂದೆಲ್ಲ ಹೆಸರಿರುವ ಪಕ್ಷಗಳ ಚಿಹ್ನೆಗಳನ್ನು ನೋಡಿದ್ದರಿಂದ ಇದೊಂದಿಷ್ಟು ಆಶ್ಚರ್ಯವೆನಿಸಿತು. ಆದರೂ ಅನೇಕ ಪಕ್ಷಗಳ ಪೈಕಿ ಇದೂ ಒಂದು ಎಂದುಕೊಂಡು ಆ ಕುರಿತು ವಿಚಾರ ಮಾಡುತ್ತ ಮುಂದೆ ಹೆಜ್ಜೆ ಹಾಕುತ್ತಿದ್ದೆ. ನನ್ನ ಮುಂದು ಮುಂದೆ ವಯೋವೃದ್ಧರಿಬ್ಬರು ಅದೇ ವ್ಯಕ್ತಿಯ, ಆ ಪಕ್ಷದ ಗುರುತು, ಅಧ್ಯಕ್ಷನ ಕುರಿತು ಮಾತಾಡುತ್ತ ಸಾಗಿದ್ದರು. ಅವರ ಮಾತುಗಳನ್ನು ಕೇಳಲು ನನ್ನಲ್ಲಿ ಒಂದಿಷ್ಟು ಕುತೂಹಲ ಹೆಚ್ಚಾಯಿತು.

"ಏನ್ರಿ ಇದು!! ಅಂಬೇಡ್ಕರ್ ಜನತಾ ಪಕ್ಷ"!! ಎಂದು ಒಬ್ಬ ವೃದ್ಧರು ಆಶ್ಚರ್ಯ ವ್ಯಕ್ತಪಡಿಸಿದರು.

ಇನ್ನೊಬ್ಬರು "ಅದೇರಿ!! ಅವನು ಮೊದಲು ಒಂದು ಸಂಘಟನೆಯಲ್ಲಿದ್ದ. ಈಗ ಪಕ್ಷ ಕಟ್ಟಿಕೊಂಡಿದ್ದಾನೆ. ನಮ್ಮೂರಿನ ಪಕ್ಕದ ಹಳ್ಳಿ ಹುಡುಗಾರೀss ಆತ" ಎನ್ನುತ್ತಿದ್ದಂತೆ ಮೊದಲಿನವರು "ಅಯ್ಯೋ ಬಿಡ್ರಿ... ಅಂಬೇಡ್ಕರ್ ಎಂದರೆ ಯಾರಾದ್ರೂ ವೋಟ್ ಹಾಕ್ತಾರೇನ್ರಿ" ಎಂದು ತಾತ್ಸಾರ ತುಂಬಿದ ಮಾತುಗಳನ್ನಾಡಿದರು... ಇದೆಲ್ಲವನ್ನು ಕೇಳಿಸಿಕೊಂಡು ನಾನು ಸುಮ್ಮನಾದೆ. ಅವರಿಬ್ಬರು ಪಕ್ಕದ ಸರ್ಕಲ್‌ನಲ್ಲಿ ಸರಿದು ಮಾಯವಾದರು. ನಾನು ನನ್ನ ರೂಮಿನತ್ತ ಹೆಜ್ಜೆ ಹಾಕಿದೆ.

ಆ ಇಬ್ಬರ ನಡುವೆ ನಡೆದ ಮಾತುಗಳು ನನ್ನೊಳಗೆ ಮತ್ತೆ ಮತ್ತೆ ಜೀವ ತಳೆಯುತ್ತಿದ್ದವು. ಆ ಕುರಿತು ಚಿಂತಿಸಿ ಸುಮ್ಮನಾದೆ. ಸುಮ್ಮನೆ ಕೂತರೂ ಕೂಡಲಾಗಲಿಲ್ಲ; ಚಡಪಡಿಕೆ ಹತ್ತಿತು. ಮೂಲೆಯಲ್ಲಿ ಬಿದ್ದಿದ್ದ ದಿನ ಪತ್ರಿಕೆಯೊಂದರ ಮೇಲೆ ಕಣ್ಣಾಡಿಸಿದೆ. ಅಲ್ಲೂ ದಲಿತರ ಆತ್ಮಹತ್ಯಾ ಬೆದರಿಕೆ, ಅಂಬೇಡ್ಕರ್ ಮೂರ್ತಿ ಭಂಜನ... ಎಂದೆಲ್ಲ ಬರೆದಿದ್ದನ್ನು ನೋಡಿ 'ಛೇ' ಎಂದೆನಿಸಿತು. ಬೇಸರಿಸಿಕೊಂಡು ಸುಮ್ಮನಾದೆ.

ನಿದ್ದೆ ಮಾಡಿ ಎದ್ದಾದ ಮೇಲೆಯೂ ಮತ್ತದೆ ಚಿಂತೆ, ಚಡಪಡಿಕೆ... ಅಂಬೇಡ್ಕರ್ ಎಂದರೆ ಈ ಜನರಿಗ್ಯಾಕೆ ಇಷ್ಟೊಂದು ಬೇಸರ, ಅಸಹನೆ, ತಾತ್ಸಾರ. ಆ ಮಹಾನುಭಾವ ದೇಶಕ್ಕೆ ಸಂವಿಧಾನ ಬರೆದರೂ ಅವರು ಬರೆದಿಲ್ಲವೆಂದು ಊಹಾಪೋಹ ಹಬ್ಬಿಸುವುದು, ಇನ್ನೂ ಏನೇನೋ ಹುಟ್ಟಿಸುವುದು ನಡೆದೇ ಇದೇ. ಇವರೆಲ್ಲ ಹೀಗ್ಯಾಕೆ? ಈ ಕುರಿತಂತೆ ನನ್ನ

# ಕಂಗಳೊಳಗಣ ಕತ್ತಲೆ...




ದೇಶ ವಿಭಜನೆ ಹಾಳುಮೂಳು ಎಂದು ಸದಸ್ಯತ್ವದ ನೆಪವೊಡ್ಡಿ ಸಂವಿಧಾನ ಸಮಿತಿಯಿಂದ ಡಾ॥ ಅಂಬೇಡ್ಕರ್ ಅವರನ್ನು ಹೊರಗಿಡುವ ತಂತ್ರ ಕುತಂತ್ರಗಳು ನಡೆದವು. ಆದರೂ ಕೊನೆಗೆ ಈ ದೇಶದ ಹಣೆಬರಹ ಬರೆಯುವ ಕಾರ್ಯ ಡಾ॥ ಅಂಬೇಡ್ಕರ್ ಅವರಿಂದಲೇ ಆಯಿತು ಎನ್ನುವುದನ್ನು ನೆನಪಿಡಬೇಕು. ಆದರೂ ಅಂಬೇಡ್ಕರ್‌ರೆಂದರೆ ದಲಿತ, ಅವರು ಪರಕೀಯರು ಅನ್ನುವ ಭಾವನೆ ಬಹುಸಂಖ್ಯಾತರಲ್ಲಿ ಇನ್ನೂ ಬೇರೂರಿಬಿಟ್ಟಿದೆ. ಜೊತೆಗೆ ದಲಿತ ಸಮುದಾಯದ ಅನೇಕ ಗುಂಪುಗಳು ಉಳ್ಳವರ ತಂತ್ರ, ಕುತಂತ್ರಗಳಿಂದ ಇಂದಿಗೂ ಘಾಸಿಗೊಳ್ಳುತ್ತಿವೆ.

ಸಮಕಾಲೀನ ಅಧ್ಯಯನ ವೇದಿಕೆ, ಬೆಂಗಳೂರು ಇದರ ವತಿಯಿಂದ ದಿನಾಂಕ ೧೯-೦೩-೨೦೧೯ರಂದು ನವಕರ್ನಾಟಕ ಪ್ರಕಾಶನದ ಪ್ರಧಾನ ಕಚೇರಿಯಲ್ಲ 'ವಿಜಯನಗರದ ಅಂತ್ಯ' ಕುರಿತು ಡಾ|| ಎಚ್. ಎಸ್. ಗೋಪಾಲರಾವ್ ಅವರಿಂದ ಉಪನ್ಯಾಸ ಮತ್ತು ಸಂವಾದ ಕಾರ್ಯಕ್ರಮ ನಡೆಯಿತು.

ಅತ್ಯಂತ ಯಶಸ್ವಿಯಾಗಿ ನಡೆದ ಈ ಕಾರ್ಯಕ್ರಮದಲ್ಲ ಅನೇಕ ಹಿರಿಯ ಚಿಂತಕರು, ಇತಿಹಾಸಕಾರರು ಹಾಗೂ ವಿದ್ಯಾರ್ಥಿಗಳು ಭಾಗವಹಿಸಿದ್ದರು.

ಮನಸ್ಸು ನನ್ನ ಜೊತೆಗೇ ತಕರಾರು ಮಾಡಹತ್ತಿತು. 'ಅಂಬೇಡ್ಕರ್' ಎಂದರೆ ನಾನು ತಿಳಿದಹಾಗೆ ಅವರೊಬ್ಬ ಮಹಾಮೇಧಾವಿ, ಅಪ್ರತಿಮ ಮಾನವತಾವಾದಿ, ಪ್ರಕಾಂಡ ಪಂಡಿತರು. ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಕಾನೂನು, ಸಾಹಿತ್ಯ, ಸಂಸ್ಕೃತಿಯ ಶ್ರೇಷ್ಠ ಚಿಂತಕರು. ಸಂವಿಧಾನದ ಕರ್ತೃ. ಭಾರತಕ್ಕೊಂದು ಜಾತ್ಯತೀತ ಸಂವಿಧಾನ ಕಲ್ಪಿಸಿದವರು. ಸಾಮಾನ್ಯರು, ಶೋಷಿತರು, ಮಹಿಳೆಯರು ಇತರ ಪ್ರಜೆಗಳಂತೆ ಸರಿ ಸಮಾನವಾಗಿ ಬದುಕುವುದಕ್ಕೆ ಅವಕಾಶ ಕಲ್ಪಿಸಿಕೊಟ್ಟವರು. ಅಸ್ಪೃಶ್ಯರಷ್ಟೇ ಅವಮಾನ, ಶೋಷಣೆಗೊಳಗಾದ ಮಹಿಳೆಯರನ್ನು ಸಹ ಪುರುಷನ ಸಮಾನವಾಗಿ ಬದುಕಲು ಹಕ್ಕು ದೊರಕಿಸಿಕೊಟ್ಟವರು. ಈ ನೆಲದ ಬಹು ಧರ್ಮೀಯ, ಬಹು ಸಂಸ್ಕೃತಿಯ ಜನರೆಲ್ಲರೂ ಸೌಹಾರ್ದತೆಯಿಂದ ಬಾಳುವಂತೆ ನೆಲೆ ಒದಗಿಸಿದವರು. ಮತಾಂಧತೆ, ಹಿಂಸೆ, ಅಸಮಾನತೆ ಶೋಷಣೆಗಳನ್ನು ಶಮನಗೊಳಿಸಲು ಅವುಗಳ ಮೂಲಚೂಲವನ್ನು ಕೀಳಲು ಶ್ರಮಿಸಿದ್ದು ವ್ಯರ್ಥವಾಯಿತೇ? ಎಂದು ಒಂದು ಕ್ಷಣ ಅನ್ನಿಸಿತು. ಯಾಕೆಂದರೆ ಇಲ್ಲಿಯ ಉಪ್ಪರಿಗೆಯ ಮೇಲಿರುವವರು ದಲಿತರೆಂದರೆ ಮೂಗು ಮುರಿಯುತ್ತಾರೆ. ದಲಿತರು ತಮ್ಮ ಹಕ್ಕು ಪ್ರತಿಪಾದನೆ ಮಾಡಿದರೆ ಅಪಾರ್ಥ ಮಾಡಿಕೊಳ್ಳುತ್ತಾರೆ. ನ್ಯಾಯ ಕೇಳಿದರೆ ಭಂಡನೆಂದು ಜರೆಯುತ್ತಾರೆ. ಅವರಿಗೆ ತಿಳಿದಿಲ್ಲ, 'ದಲಿತ' ಅನ್ನುವುದು ಒಂದು ಜಾತಿ ಅಲ್ಲ, ಅದೊಂದು 'ಪ್ರಜ್ಞೆ' ಎಂದು. ಹಕ್ಕೊತ್ತಾಯದ ಪ್ರತೀಕ, ಸ್ವಾಭಿಮಾನದ ಸಂಕೇತ, ಮಾನವೀಯತೆ ಪ್ರತಿಪಾದನೆಯ ಪರಿಕಲ್ಪನೆ ಎಂದೆಲ್ಲ ನಮ್ಮ ಸಮಕಾಲೀನರು ಓದಿ ಅರ್ಥೈಸಿದರೂ ಆ ಜನವರ್ಗದ ಬಗ್ಗೆ, ಅವರ ತಳಮಳದ ಬಗ್ಗೆ ಅವರ ಬೆಳವಣಿಗೆಯ ಬಗ್ಗೆ ಹೀಗೇಕೆ ತಾತ್ಸಾರ? ದಲಿತರೆಂದರೆ ವಿರೋಧವೇಕೆ? ಅಸಹನೆಯೇಕೆ? ಅಷ್ಟೇ ಏಕೆ ಅಂಬೇಡ್ಕರ್ ಎಂದರೆ ಮೈಮೇಲೆ ಹಾವು ಹರಿದಂತೆ ಚೀರಾಡುತ್ತಾರೆ. ಈ ಜನವರ್ಗಕ್ಕೆ 'ಅಂಬೇಡ್ಕರ್' ಅವರೇ ಮತಹಾಕುವ ಹಕ್ಕು ದೊರಕಿಸಿಕೊಟ್ಟಿದ್ದು ಎನ್ನುವುದು ಮರೆತುಹೋಯಿತೆ? ಈ ಅಕ್ಷರವಂತರಲ್ಲಿ ಈ ಅಸಹನೆ ಯಾಕಾದರೂ ಹುಟ್ಟಿತೊ? ಛೇ ಇದು ನೋವಿನ, ಬೇಸರದ ಸಂಗತಿ. ಈ ಕುರಿತಂತೆ ಒಂದೆರಡು ಸಣ್ಣ ಘಟನೆಗಳನ್ನು ಈ ಸಂದರ್ಭದಲ್ಲಿ ತಮ್ಮ ಗಮನಕ್ಕೆ ತರಬಯಸುತ್ತೇನೆ.

ಕುಲಪತಿಯಾಗುವ ಆಕಾಂಕ್ಷೆಯಿಂದ ಪ್ರಾಧ್ಯಾಪಕರೊಬ್ಬರು ಮಂತ್ರಿಯೊಬ್ಬರನ್ನು ಭೇಟಿಯಾಗುತ್ತಾರೆ. ಆ ಮಂತ್ರಿ ಮಹಾಶಯರು ಮೇಲ್ಜಾತಿಗೆ ಸೇರಿದವರಾಗಿದ್ದರು. ಅವರನ್ನು ಸಂಧಿಸಿದ ಪ್ರಾಧ್ಯಾಪಕರು ತಮ್ಮ ಪರಿಚಯ ಪತ್ರವನ್ನು ನೀಡಿ ನಾನು ಇಷ್ಟೆಲ್ಲ ಸಾಧನೆ ಮಾಡಿದ್ದೇನೆ! ದಯಮಾಡಿ ನನ್ನನ್ನು ಕುಲಪತಿ ಹುದ್ದೆಗೆ ಶಿಫಾರಸ್ಸು ಮಾಡಬೇಕೆಂದು ವಿನಂತಿಸಿಕೊಂಡರು. ಪರಿಚಯ ಪತ್ರ ನೋಡಿದ ಸಚಿವರು 'ತುಂಬ ಸಾಧನೆ ಮಾಡಿದ್ದೀರಿ. ನಿಮ್ಮ ಅರ್ಜಿಯನ್ನು ಪರಿಗಣಿಸುತ್ತೇನೆ. ಆದರೆ ನೀವು ಯಾವ ಜಾತಿಗೆ ಸೇರಿದವರಾಗಿದ್ದೀರಿ ಎಂಬುದು ಬರೆದಿಲ್ಲವಲ್ಲ' ಎಂದು ಕೇಳಿದರು. ಅವರು ತಾನು ಎಸ್.ಸಿ. ವರ್ಗಕ್ಕೆ ಸೇರಿದವ ಎಂದಾಕ್ಷಣ ತಮ್ಮೆದುರಿಗಿದ್ದ ಅವರ ಪರಿಚಯ ಪತ್ರವನ್ನು ಮೂಲೆಗೆ ಸರಿಸಿ ಮುಖ ಸಿಂಡರಿಸಿಕೊಂಡು ಕುಳಿತರಂತೆ. ಪರಿಚಯ ಪತ್ರ ನೋಡಿದಾಗಿದ್ದ ಸಚಿವರ ಹಾವಭಾವ, ಜಾತಿ ಗೊತ್ತಾದಾಗ ಬದಲಾಗಿ ಹೋಗಿದ್ದು ಕಂಡು ಆ ಪ್ರಾಧ್ಯಾಪಕರು ತುಂಬ ಮುಜುಗರಕ್ಕೆ ಒಳಗಾದರು. ಯಾಕೆ ಹೀಗೆ? ಎಂದು ಯೋಚನೆ ಮಾಡ್ತಾ ಹೊರ ಬಂದರು. ಆಮೇಲೆ ಅವರಿಗೆ ಗೊತ್ತಾಗಿದ್ದುದು ಓಹೋ ನನ್ನ ಹೆಸರಿನ ಕೊನೆಯಲ್ಲಿ 'ಅಯ್ಯ' ಎಂದಿದ್ದುದನ್ನು ನೋಡಿದ ಆ ಸಚಿವರು ಇವರು ಮೇಲ್ಜಾತಿಯವರೇ ಇರಬಹುದೆಂದು ತಿಳಿದುಕೊಂಡು ಖುಷಿಪಟ್ಟಿರುತ್ತಾರೆ'. ಅದೇ ಅವರ ಜಾತಿ ಗೊತ್ತಾದಾಗ ಆ ಮಂತ್ರಿಗಳ ಮುಖ ಕಳವಳಿಕೆಗಳು ಬದಲಾಗಿಹೋಗಿದ್ದವು. ಇಂಥ ಅನುಭವ ಹೊಂದಿದವರೊಬ್ಬರು ವೇದಿಕೆಯೊಂದರಲ್ಲಿ ತಮ್ಮ ಅಳಲನ್ನು ತೋಡಿಕೊಂಡರು. ಇಂತಹ ಅವಮಾನ, ಹಿಂಸೆಗಳನ್ನು ಬಲ್ಲವನೆ ಬಲ್ಲ.

ಈ ಮೇಲಿನ ಘಟನೆಗೆ ಪೂರಕವಾಗಿ ಇನ್ನೊಂದು ಮಾತು ಸೇರಿಸಬಹುದು. ಇದು ಸುಮಾರು ಹದಿನೆಂಟು ವರ್ಷಗಳ ಹಿಂದಿನ ಮಾತು. ನಾನಾಗ ಮಹಾರಾಷ್ಟ್ರದ ಅಕ್ಕಲಕೋಟೆಯ ಮಹಾವಿದ್ಯಾಲಯದಲ್ಲಿ ಅಧ್ಯಾಪಕನಾಗಿ ಅದೇ ಆಗ ಕೆಲಸಕ್ಕೆ ಸೇರಿದ್ದೆ. ಸೋಲಾಪುರದಿಂದ ಅಕ್ಕಲಕೋಟೆಗೆ ದಿನಾಲು ಬಂದು ಹೋಗಿ ಮಾಡುತ್ತಿದ್ದೆ. ಒಂದು ದಿನ ನಾನು ಹತ್ತಿದ ಬಸ್ಸಿಗೆ ಕಾವಿಧಾರಿ ಸನ್ಯಾಸಿಯೊಬ್ಬರು (ಅವರು ತಮ್ಮನ್ನು ಕರೆದುಕೊಳ್ಳುವುದು ಶರಣರೆಂದು...?) ಹತ್ತಿದರು. ಇಬ್ಬರೂ ಅಕ್ಕಪಕ್ಕದಲ್ಲಿ ಕುಳಿತೆವು. ನನ್ನ ಕೈಯಲ್ಲಿ ನಾಲ್ಕಾರು ಸಾಹಿತ್ಯ ಕೃತಿಗಳಿದ್ದವು. ಅವುಗಳನ್ನು ನೋಡಿದ ಸ್ವಯಂ ಘೋಷಿತ ಶರಣರು "ನೀವು..." ಎಂದು ನನ್ನತ್ತ ನೋಡಿ ಮಾತಿಗಿಳಿದರು. "ಇಲ್ಲೇ ಅಕ್ಕಲಕೋಟೆ ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದೇನೆ" ಎಂದೆ. ಶರಣರು ತಾವೇ ಮಾತು ಮುಂದುವರಿಸಿದರು. ಅಧ್ಯಯನ... ಅಧ್ಯಾಪಕರು.... ವಿದ್ಯಾರ್ಥಿಗಳು... ಹೀಗೆಲ್ಲ ಮಾತಾಡಿದ ಮೇಲೆ ನನ್ನನ್ನೇ ನೋಡುತ್ತ ಮುಖ್ಯ ವಿಷಯಕ್ಕೆ ಬಂದರು. ಹಿಂದುಮುಂದು ನೋಡದೆ ತಮ್ಮದು ಯಾವ ಮಾರ್ಗ (ಜಾತಿ) ಎಂದರು. ತಕ್ಷಣಕ್ಕೆ ಏನು ಹೇಳಬೇಕೋ ತೋಚಲಿಲ್ಲ. ಮನುಷ್ಯನ ಯೋಗ್ಯತೆಯನ್ನು ಜಾತಿ ಮೇಲೆಯೇ ಗುರುತಿಸುವ ಈ ಸಮಾಜದಲ್ಲಿ ಜಾತಿ ಹೇಳುವುದು ಅನಿವಾರ್ಯ; ನನ್ನ ಜಾತಿಯನ್ನು ಹೇಳಲೇಬೇಕಾಯಿತು. ಅವರಿಗೆ ನಾನು 'ಅಸ್ಪೃಶ್ಯ' ಎಂದೆ. ಹೀಗೆ ಹೇಳಿದಾಕ್ಷಣಕ್ಕೆ ಮೈಮೇಲೆ ಹಾವು ಬಿದ್ದವರಂತೆ ವೇಷಧಾರಿ ಶರಣರು ಒಂದಿಷ್ಟು ದೂರ ಸರಿದು, ಮುಖ ಗಂಟು ಮಾಡಿಕೊಂಡು ಕುಳಿತರು. ಮೊದಲಲ್ಲಿ ತೋರಿದ ಆದರ, ಗೌರವ, ಪ್ರೀತಿ ಭಾವಗಳನ್ನೆಲ್ಲ ದೂರ ತಳ್ಳಿ ಒಮ್ಮೆಲೇ ಏಕವಚನಕ್ಕಿಳಿದರು. ಹೋಗು, ಬಾ ಎಂದು ಸುರುವು ಮಾಡಿಕೊಂಡರು. ಏನಪ್ಪ ಇದು! ಜಾತಿ ಇಂಥ ಭಯಂಕರವೇ? ನಾನೊಬ್ಬ ಕಾಲೇಜು ಅಧ್ಯಾಪಕ ಅನ್ನುವುದನ್ನೂ ಮರೆತು ಬಿಟ್ರಾ ಈ ಶರಣರು? ಅವರು ಹಾಕಿಕೊಂಡಿದ್ದು ಕಾವಿ, ಹಚ್ಚಿಕೊಂಡದ್ದು ವಿಭೂತಿ!!

ಈ ಮೇಲೆ ಹೇಳಿದ ಕಾವಿಧಾರಿ ಶರಣರು ಅಪ್ರಬುದ್ಧರು, ಶರಣರನ್ನು ಅರೆಬರೆಯಾಗಿ ಓದಿದವರು. ಅಂತಹವರ ವರ್ತನೆಯನ್ನು ಕಂಡು ಮರುಕ ಪಡಬಹುದು. ಆದರೆ ನಮ್ಮ ವಿವಿಗಳ ಪ್ರಾಧ್ಯಾಪಕರನೇಕರು ನಾನೊಬ್ಬ ಶರಣರ ಅಪ್ಪಟ ಅನುಯಾಯಿ ಎಂದು ಹೇಳಿಕೊಳ್ಳುತ್ತಲೇ, ದಲಿತ ಶರಣರ ಪಠ್ಯಗಳನ್ನು ಪಾಠ ಮಾಡುವುದಕ್ಕೆ ಮನಸ್ಸು ಮಾಡದಿರುವುದು ಇದಕ್ಕಿಂತ ಘೋರ ದುರಂತವಲ್ಲವೆ? ದಲಿತ ಸಾಹಿತ್ಯದ ಕೃತಿಗಳನ್ನು ಓದುವುದಿಲ್ಲ. ಅದು ಬಿಡಿ!! ಮುಟ್ಟಲು ಮನಸ್ಸು ಮಾಡುವುದಿಲ್ಲ. ದಲಿತ ವಿದ್ಯಾರ್ಥಿಗಳೆಂದರೆ ಸಾಕು ಮೈಮೇಲೆ ಇರುವೆ ಬಿಟ್ಟುಕೊಂಡಂತೆ ಆಡುತ್ತಾರೆ. ಕೆಲವರು ಶರಣರ ಹೆಸರಿನ ಮೇಲೆ ಸಮ್ಮೇಳನಗಳನ್ನು ನಡೆಸುತ್ತಾರೆ. ಆದರೆ ಇಲ್ಲಿಯವರೆಗೆ ಒಬ್ಬ ದಲಿತ ವ್ಯಕ್ತಿಯನ್ನೂ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿಲ್ಲ, ಮಾಡುವುದೂ ಇಲ್ಲ.

ಬಸವಣ್ಣ-ಬಸವಾದಿ ಶರಣರು ಎನ್ನುವದು ಅದೊಂದು ಕಾಲದ ಪ್ರಜ್ಞೆ! ಮಾನವೀಯ ಚಿಂತನೆ ಕಾಯಕ ಶ್ರೇಷ್ಠತೆಯನ್ನು ಎತ್ತಿ ತೋರಿದ ನೆಲೆ. ಅಂತಹದೊಂದು ಪ್ರಮುಖ ಚಳವಳಿ, ಚಿಂತನೆಯನ್ನು ಒಂದು ಜಾತಿಗೆ ಸೀಮಿತ ಗೊಳಿಸಿರುವುದು ಖೇದದ ಸಂಗತಿ. ಬುದ್ಧ-ಬಸವ ಹಾಗೂ ಅಂಬೇಡ್ಕರ್ ಈ ಮೂರೂ ಶಬ್ದಗಳು ಕೇವಲ ಹೆಸರುಗಳಲ್ಲ. ಅವು ಪ್ರಜ್ಞೆಯಾಗಿ ನಮ್ಮೊಂದಿಗೆ ಸದಾ ಕಾಲ ವ್ಯವಹರಿಸುತ್ತವೆ. ನಮ್ಮನ್ನು, ಸಮಾಜವನ್ನು ಸನ್ಮಾರ್ಗದಲ್ಲಿ



ಮುನ್ನಡೆಸುತ್ತವೆ. ದಲಿತ ಶರಣರನ್ನು ಅಪ್ಪ, ಅಣ್ಣ, ತಮ್ಮ ಎಂದೆಲ್ಲ ಕರೆದ ಬಸವಣ್ಣ ಅವರಲ್ಲಿ ಆತ್ಮವಿಶ್ವಾಸ ತುಂಬಿದ. ಅಂತಹ ಚಿಂತನೆಯನ್ನು ಮುಂದುವರೆಸಿದ 'ಅಂಬೇಡ್ಕರ್' ಎಂದರೆ ಭಯಪಡುವ, ಬೇಸರಿಸುವ, ಅಸಹನೆಯಿಂದ ವರ್ತಿಸುವವರ ಸಂಖ್ಯೆ ಹೆಚ್ಚಾಗುತ್ತಿರುವುದು ದುರದೃಷ್ಟವೇ ಹೌದು.

ಗಾಂಧೀಜಿ–ಅಂಬೇಡ್ಕರ್ ಅವರು ತಾತ್ತ್ವಿಕ ನೆಲೆಯಲ್ಲಿ ವಾಗ್ವಾದ ಮಾಡಿದವರು. ಆ ಮೂಲಕ ಶ್ರೇಷ್ಠ ಕನಿಷ್ಠವೆನ್ನುವುದು ಯಾವುದು? ಎಂದೆಲ್ಲ ಚಿಂತನೆಗೈದು ಜೀವಪರವಾದುದನ್ನು ಎತ್ತಿಹಿಡಿದರು. ದೇಶ ಸ್ವತಂತ್ರವಾಯಿತು. ದೇಶಕ್ಕೊಂದು ಸಂವಿಧಾನ ಬೇಕು ನಿಜ, ಹಾಗಂತ ನಾಯಕರು ಸುಮ್ಮನಿರಲಿಲ್ಲ. ಅಂದಿನ ನಾಯಕರುಗಳಾದ ವಲ್ಲಭಭಾಯಿ ಪಟೇಲ ಮತ್ತಿತರರು ಕೂಡಿಕೊಂಡು ಯುರೋಪ್ ಖಂಡದ ಹಲವು ರಾಷ್ಟ್ರಗಳ ಸಂವಿಧಾನ ಬರೆದ "ಐವರ್ ಜನ್ನಿಂಗ್" ಎಂಬ ಮಹಾಜ್ಞಾನಿ ಅವರನ್ನು ಭೇಟಿಯಾದರು. ಅವರು ಇವರೆಲ್ಲರನ್ನೂ ಆದರದಿಂದ ಬರಮಾಡಿಕೊಳ್ಳುತ್ತಾರೆ. "ಏನು ತಾವೆಲ್ಲ ಬಂದಿರಿ" ಎಂದು ಕೇಳಿದ್ದಕ್ಕೆ "ಏನಿಲ್ಲ ನಮ್ಮ ದೇಶಕ್ಕೆ ಸಂವಿಧಾನದ ಅವಶ್ಯಕತೆಯಿದೆ. ತಾವು ಬರೆದುಕೊಡಬೇಕು" ಎಂದು ನಿವೇದಿಸಿಕೊಂಡರಂತೆ. ಐವರ್ ಜನ್ನಿಂಗ್ ಬಂದವರಿಗೆ ಬಹಳ ಸಮಾಧಾನದಿಂದಲೇ ಉತ್ತರ ಕೊಟ್ಟರಂತೆ. ನೋಡಿ, ಯುರೋಪ್ ಖಂಡದ ದೇಶಗಳ ಇನ್ನೂ ಅನೇಕ ಸಂವಿಧಾನಗಳನ್ನು ನಾನು ಬರೆಯಬಲ್ಲೆ. ಆದರೆ ಭಾರತದಂತಹ ಸಂಕೀರ್ಣ ಸಂಸ್ಕೃತಿ ಹೊಂದಿರುವ ದೇಶದ ಸಂವಿಧಾನ ಬರೆಯುವುದು ನನ್ನಿಂದ ಅಸಾಧ್ಯ ಎಂದು ನುಡಿದರಂತೆ. "ಹಾಗಿದ್ದರೆ ನಾವು ಏನು ಮಾಡಬೇಕು, ನಮ್ಮ ಸಂವಿಧಾನವನ್ನು ಯಾರಿಂದ ಬರೆಯಿಸಬೇಕು" ಪುನಃ ಐವರ್ ಜನ್ನಿಂಗ್‌ರನ್ನು "ದಯಮಾಡಿ ನೀವೇ ಇದಕ್ಕೆ ಸಲಹೆ ಕೊಡಿ. ನಮ್ಮ ಸಂವಿಧಾನ ಯಾರು ಬರೆಯುತ್ತಾರೆ" ಎಂದು ಕೇಳಿದಾಗ ಅದಕ್ಕೆ ಜನ್ನಿಂಗರು "ನೀವು ಇಲ್ಲಿಗೆ ಬಂದಿರುವುದೇ ತಪ್ಪು, ದಾರಿ ತಪ್ಪಿ ಬಂದಿದ್ದೀರಿ. ನಿಮ್ಮ ದೇಶದ ಸಂವಿಧಾನ ಬರೆಯುವ ಏಕೈಕ ವ್ಯಕ್ತಿ ಎಂದರೆ ಡಾ॥ ಬಿ. ಆರ್. ಅಂಬೇಡ್ಕರ್" ಎಂದು ಹೇಳಿದರಂತೆ. ಆಗ ಪೆಚ್ಚುಮೋರೆ ಮಾಡಿಕೊಂಡು ಭಾರತಕ್ಕೆ ಬಂದ ನಾಯಕರು ಮಹಾತ್ಮ ಗಾಂಧೀಜಿಯವರನ್ನು ಸಂಪರ್ಕ ಮಾಡಿ ನಡೆದ ಘಟನೆಯನ್ನು ವಿವರಿಸಿದರು. "ನೀವು ನನ್ನ ಕೇಳದೆ ವಿದೇಶಕ್ಕೆ ಹೋಗಿದ್ದು ತಪ್ಪು. ನನಗೆ ಕೇಳಿದ್ದರೆ ನಾನೇ ಹೇಳುತ್ತಿದ್ದೆ. ನಮ್ಮ ಸಂವಿಧಾನ ಬರೆಯುವ ಧೀಮಂತರೆಂದರೆ ಡಾ॥ ಅಂಬೇಡ್ಕರ್ ಮಾತ್ರ ಎಂದು ಹೇಳುತ್ತಿದ್ದೆ" ಎಂದರಂತೆ. ಇಷ್ಟಾದ ಮೇಲೂ ದೇಶ ವಿಭಜನೆ ಹಾಳುಮೂಳು ಎಂದು ಸದಸ್ಯತ್ವದ ನೆಪವೊಡ್ಡಿ ಸಂವಿಧಾನ ಸಮಿತಿಯಿಂದ ಡಾ॥ ಅಂಬೇಡ್ಕರ್ ಅವರನ್ನು ಹೊರಗಿಡುವ ತಂತ್ರ ಕುತಂತ್ರಗಳು ನಡೆದವು. ಆದರೂ ಕೊನೆಗೆ ಈ ದೇಶದ ಸಂವಿಧಾನ ಬರೆಯುವ ಕಾರ್ಯ ಡಾ॥ ಅಂಬೇಡ್ಕರ್ ಅವರಿಂದಲೇ ಆಯಿತು ಎನ್ನುವುದನ್ನು ನೆನಪಿಡಬೇಕು. ಆದರೂ ಅಂಬೇಡ್ಕರ್‌ರೆಂದರೆ ದಲಿತ, ಅವರು ಪರಕೀಯರು ಅನ್ನುವ ಭಾವನೆ ಬಹುಸಂಖ್ಯಾತರಲ್ಲಿ ಇನ್ನೂ ಬೇರೂರಿಬಿಟ್ಟಿದೆ. ಜೊತೆಗೆ ದಲಿತ ಸಮುದಾಯದ ಅನೇಕ ಗುಂಪುಗಳು ಉಳ್ಳವರ ತಂತ್ರ, ಕುತಂತ್ರಗಳಿಂದ ಇಂದಿಗೂ ಘಾಸಿಗೊಳ್ಳುತ್ತಿವೆ. ಶಾಲೆಗಳಲ್ಲಿ ಬಿಸಿ ಊಟವನ್ನು ದಲಿತ ಹೆಣ್ಣುಮಕ್ಕಳು ತಯಾರಿಸಿದರೆ ಸವರ್ಣೀಯರ ಮಕ್ಕಳು ಪ್ರತಿಭಟಿಸುವಂತೆ ಕುಮ್ಮಕ್ಕು ನೀಡುವುದು, ದಲಿತ ಅಧಿಕಾರಿಗಳನ್ನು ಅವಮಾನಿಸುವುದು ಇವೆಲ್ಲ ನಿತ್ಯ ನಡೆಯುತ್ತ ಬಂದ ಸರ್ವೇಸಾಮಾನ್ಯ ಸಂಗತಿಗಳಾಗಿ ಬಿಟ್ಟಿವೆ. ಇದನ್ನು ಶಮನಮಾಡಲು ಸಾಧ್ಯವಿಲ್ಲವೆ? ಎಂದುಕೊಳ್ಳುವಾಗ 'ಕಂಗಳೊಳಗಣ ಕತ್ತಲೆ ತಿಳಿಯದಣ್ಣ' ಎಂದು ಅಲ್ಲಮ ಹೇಳಿದ್ದು ಮತ್ತೆ ಮತ್ತೆ ನೆನಪಾಗುತ್ತದೆ.


**ಪ್ರೊ॥ ಎಚ್. ಟಿ. ಪೋತೆ**
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ ಹಾಗೂ ನಿರ್ದೇಶಕರು
ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ


## ಅಯ್ಯೋ ಅಪ್ಪಾ



**ಮು**ಟ್ಟಿನಲಿ ಹುಟ್ಟಿದ ನೀನು
ಮುಟ್ಟನ್ನು ಮೆಟ್ಟಿ ನಿಂತರೆ
ಮತ್ತೆ ಹುಟ್ಟೆಲ್ಲಿ ನಿನಗೆ
ಗರ್ಭವಿಲ್ಲದ ಹುಟ್ಟು
ಪಡೆದ ಮಕ್ಕಳಿಹರೇ ಜಗದಲಿ...!

ಶಬರಿಮಲೆಯಲಿ ನಾರಿ
ಸಮಾನತೆಗಿದು ದಾರಿ
ಮುಚ್ಚಿದ ಬಾಗಿಲೊಳಗೆ
ಸರ್ವವ್ಯಾಪಿಗೆ ಗೆಜ್ಜೆ ಸದ್ದಿನ ಭೀತಿ..!

ಪೂಜಿಸಲು ಹೆಣ್ಣು ದೇವತೆ
ದೇವ ಇರುವಲ್ಲಿಗೆ ಆಕೆ
ಹೋಗಬಾರದೇಕೆ? ನಿನ್ನ ನೋಡಲು
ನೂರೆಂಟು ಭಂಟರ ಕಾವಲು

ಕೊಳೆತ ಮನಸ್ಸುಗಳು
ಗಬ್ಬು ನಾರುತ್ತಿವೆ
ಅಯ್ಯೋ ಅಪ್ಪಾ.... ಜೀವಪರತೆಗೆ
ಇಲ್ಲವೇ ನ್ಯಾಯ
ಅಯ್ಯೋ ಅಪ್ಪಾ.. ಅಪ್ಪಾ.. ಅಪ್ಪಾ...!!


**ಡಾ॥ ಮುಮ್ತಾಜ್‌ಬೇಗಂ,** ಗಂಗಾವತಿ



## ಮತ್ತೆ ಶೀತಯುದ್ಧದ ಕಾಲ ಮರುಕಳಿಸುತ್ತಿದೆಯೆ?

'ಅಮೆರಿಕದ ಹಿರಿಮೆಯನ್ನು ಮತ್ತೆ ಸ್ಥಾಪಿಸುವುದು' ಗುರಿ ಎಂದು ಪದೇ ಪದೇ ಹೇಳುತ್ತಿರುತ್ತಾರೆ ಅಧ್ಯಕ್ಷ ಡೋನಾಲ್ಡ್ ಟ್ರಂಪ್. ಮೊಂಡುತನ, ಸ್ವಪ್ರತಿಷ್ಠೆಗಳಿಗೆ, ದಿಢೀರ್ ನಿರ್ಧಾರಗಳಿಗೆ ಹೆಸರಾಗಿರುವ ಈತ ಅನುಸರಿಸುತ್ತಿರುವ ನೀತಿಗಳು ಅಮೆರಿಕದ ಅಧಿನಾಯಕತ್ವವನ್ನು ಜಗತ್ತಿನ ಮೇಲೆ ಹೊರಿಸುವುದರ ಮುಂದುವರಿಕೆಯೇ ಆಗಿದೆ. ಅಮೆರಿಕದ ಅಧ್ಯಕ್ಷರು ಹಿಂದೆ ಮಾಡಿಕೊಂಡಿದ್ದ ಒಪ್ಪಂದಗಳನ್ನು ಒಂದೊಂದಾಗಿ ಮುರಿಯಲು ತೊಡಗಿದ್ದಾರೆ. ಪ್ಯಾರಿಸ್ ಪರಿಸರ ಒಪ್ಪಂದ, ಯುನೆಸ್ಕೋ, ಇರಾನ್ ಮೇಲೆ ಆರ್ಥಿಕ ದಿಗ್ಬಂಧನ, ಮೊದಲಾದವು ಉದಾಹರಣೆಗಳು. ಇತ್ತೀಚಿನದೆಂದರೆ ಹಿಂದಿನ ಸೋವಿಯತ್ ಒಕ್ಕೂಟದೊಂದಿಗೆ, ನಂತರ ರಷ್ಯಾದೊಂದಿಗೆ ಮಾಡಿಕೊಂಡಿದ್ದ ಮಧ್ಯಂತರ ವ್ಯಾಪ್ತಿಯ ನ್ಯೂಕ್ಲಿಯರ್ ಅಸ್ತ್ರಗಳ ವಿಸರ್ಜನ ಒಪ್ಪಂದದಿಂದ ಅಮೆರಿಕ ಏಕಪಕ್ಷೀಯವಾಗಿ ಹೊರಬಿದ್ದಿರುವುದು. ಈ ಒಪ್ಪಂದದ ಪ್ರಕಾರ ಎರಡೂ ಕಡೆಯವರು ಬ್ಯಾಲಿಸ್ಟಿಕ್ ಮತ್ತು ಕ್ರೂಯಿಜ್ ಕ್ಷಿಪಣಿಗಳನ್ನು ವಿಸರ್ಜಿಸುವ ಗುರಿ ಹೊಂದಿತ್ತು. ಸಾಕಷ್ಟು ದೀರ್ಘಕಾಲ ಸಂಧಾನ ನಡೆಸಿ ಈ ಒಪ್ಪಂದ ಮಾಡಿಕೊಳ್ಳಲಾಗಿತ್ತು. ತಕ್ಕ ಮಟ್ಟಿಗೆ ಇದು ಶಸ್ತ್ರಾಸ್ತ್ರ ಪೈಪೋಟಿಗೆ ನಿರ್ಬಂಧ ಹೊರಿಸಿತ್ತಲ್ಲದೆ, ನ್ಯೂಕ್ಲಿಯರ್ ಯುದ್ಧದ ಸಾಧ್ಯತೆಗೂ ಕಡಿವಾಣ ಹಾಕಿತ್ತು. ನ್ಯೂಕ್ಲಿಯರ್ ಯುದ್ಧವಾದರೆ ಸರ್ವನಾಶ ಖಚಿತ. ವಿಜ್ಞಾನಿಗಳ ಪ್ರಕಾರ ಯಾವ ಜೀವಿಯೂ ಉಳಿಯದು.

ಯಾವತ್ತಿನಂತೆ ಅಮೆರಿಕದ ಅಧ್ಯಕ್ಷರು ರಷ್ಯದ ಮೇಲೆ ಒಪ್ಪಂದದ ಉಲ್ಲಂಘನೆಯ ಅಪವಾದ ಹೊರಿಸಿದ್ದಾರೆ. ಈ ಏಕಪಕ್ಷೀಯ ನಿರ್ಧಾರದಿಂದ ಮತ್ತೊಮ್ಮೆ ಶಸ್ತ್ರಾಸ್ತ್ರ ಪೈಪೋಟಿ ಪ್ರಾರಂಭವಾಗುವುದು ನಿಶ್ಚಿತ. ಪ್ರಪಂಚದಲ್ಲಿ ಇರುವ ನ್ಯೂಕ್ಲಿಯರ್ ಅಸ್ತ್ರಗಳಲ್ಲಿ ಶೇ. ೯೦ರಷ್ಟು ದಾಸ್ತಾನು ಈ ಎರಡು ದೇಶಗಳಲ್ಲಿವೆ. ಸುಮಾರು ೭೦೦೦ ಅಸ್ತ್ರಗಳು ಅಮೆರಿಕ, ರಷ್ಯಗಳಲ್ಲಿ ದಾಸ್ತಾನಿದ್ದರೆ, ಫ್ರಾನ್ಸ್‌ನಲ್ಲಿ ೩೦೦, ಬ್ರಿಟನ್, ಚೀಣಾಗಳಲ್ಲಿ ೨೦೦ ಇವೆ. ಇದು ಅಂದಾಜು ಮಾತ್ರ. ರಷ್ಯ ಮತ್ತಿತರ ದೇಶಗಳ ನ್ಯೂಕ್ಲಿಯರ್ ಅಸ್ತ್ರಗಳು ಬಹುತೇಕ ದೇಶದ ಸರಹದ್ದಿನಲ್ಲಿವೆ. ಅಮೆರಿಕದ ದಾಸ್ತಾನು ಜಪಾನ್, ಇಟಲಿ, ಜರ್ಮನಿ ಮೊದಲಾದ ಹಲವು ಸೈನಿಕ ನೆಲೆಗಳಲ್ಲಿ ಸ್ಥಾಪನೆಗೊಂಡಿವೆ. ಅಮೆರಿಕ ಒಪ್ಪಂದವನ್ನು ರದ್ದುಗೊಳಿಸಿರುವುದರಿಂದ ಮತ್ತೊಮ್ಮೆ ಶೀತಯುದ್ಧ ವಾತಾವರಣ ಸೃಷ್ಟಿಯಾಗುವ ಆತಂಕ ಇದೆ. ಒಂದು ಅಂದಾಜಿನ ಪ್ರಕಾರ ಅಮೆರಿಕದ ಮಿಲಿಟರಿ ವೆಚ್ಚ ೬೪೬ ಬಿಲಿಯ ಡಾಲರುಗಳನ್ನು ಮೀರಿದರೆ, ರಷ್ಯದ್ದು ೬೯ ಬಿಲಿಯ ಡಾಲರುಗಳು ಮಾತ್ರ. ಅಮೆರಿಕದ ಅಧಿನಾಯಕತ್ವ ಸ್ಥಾಪನೆಯ ಹಂಚಿಕೆಗೆ ರಷ್ಯ ಬಹುದೊಡ್ಡ ಅಡ್ಡಗಾಲಾಗಿದೆ. ಅದನ್ನು ದುರ್ಬಲಗೊಳಿಸಿದರೆ ದಾರಿ ಸುಗಮ ಎಂದು ಭಾವಿಸಿದ್ದಾರೆ ಟ್ರಂಪ್. ಅವರು ಅನುಸರಿಸುತ್ತಿರುವ ಕ್ರಮಗಳು ಯದ್ವಾತದ್ವಾ ಎಂದು ಹೊರನೋಟಕ್ಕೆ ಅನಿಸಿದರೂ ಅದರ ಹಿಂದೆ ಪಕ್ಕಾ ಯೋಜನೆ ಇದೆ. ಅದು ಜಗತ್ತಿನ ಮೇಲೆ ನಿಯಂತ್ರಣ ಸ್ಥಾಪಿಸಿ ಅಮೆರಿಕವನ್ನು ಮಹತ್ತರಗೊಳಿಸುವುದು.

* * *

## ಇರಾನ್ ಕ್ರಾಂತಿಗೆ ನಲವತ್ತು ವರ್ಷ

ಇರಾನಿನಿಂದ ತೈಲ ಆಮದುಮಾಡಿಕೊಳ್ಳುವುದನ್ನು ಕ್ರಮೇಣ ನಿಲ್ಲಿಸಬೇಕು ಎಂದು ಅಮೆರಿಕ ಸರಕಾರ ಭಾರತ, ಚೀಣಾ ಹಾಗೂ ಇತರ ಕೆಲವು ದೇಶಗಳ ಮೇಲೆ ಒತ್ತಡ ತರುತ್ತಿದೆ. ಇರಾನಿನ ನ್ಯೂಕ್ಲಿಯರ್ ಯೋಜನೆ ಕುರಿತು ತಕರಾರು ಎತ್ತಿರುವ ಅಧ್ಯಕ್ಷ ಟ್ರಂಪ್ ಇತ್ತೀಚೆಗೆ ಮಾಜಿ ಅಧ್ಯಕ್ಷ ಒಬಾಮ ಮಾಡಿಕೊಂಡಿದ್ದ ಒಪ್ಪಂದವನ್ನು ರದ್ದುಗೊಳಿಸಿ, ಮತ್ತೆ ಆರ್ಥಿಕ ದಿಗ್ಬಂಧನ ಹೇರಿದ್ದಾರೆ. ಇದು ಇರಾನನ್ನು ಆರ್ಥಿಕವಾಗಿ ದುರ್ಬಲಗೊಳಿಸುವ ಹೇಯ ಕೃತ್ಯ. ಇದನ್ನೇ ದಕ್ಷಿಣ ಅಮೆರಿಕದ ವೆನೆಜುವೇಲದ ಮೇಲೂ ಪ್ರಯೋಗಿಸಲಾಗಿದೆ. ಮನಬಂದಂತೆ ಏಕಪಕ್ಷೀಯವಾಗಿ ಅಮೆರಿಕದ ಸರಕಾರ ಆರ್ಥಿಕ ದಿಗ್ಬಂಧನ ಹೇರುವುದನ್ನು ತಡೆಯಲು ವಿಶ್ವಸಂಸ್ಥೆ ಕೂಡ ದುರ್ಬಲಗೊಂಡಿದೆ.

ಈ ಹಿನ್ನೆಲೆಯಲ್ಲೇ ಇರಾನ್ ಈಚೆಗೆ ಇಸ್ಲಾಮಿಕ್ ಕ್ರಾಂತಿಯ ನಲವತ್ತನೆ ವರ್ಷವನ್ನು ಆಚರಿಸಿತು. ಅಮೆರಿಕದ ಆರ್ಥಿಕ ದಿಗ್ಬಂಧವನ್ನು ಸೆರಗಿಗೆ ಕಟ್ಟಿಕೊಂಡೇ ದೇಶ ಮುಂದುವರಿದಿದೆ ಇಷ್ಟು ವರ್ಷವೂ. ಹಿಂದೆ ಮೊಹಮ್ಮದ್ ರೇಝಾ ಪಹ್ಲವಿ ಸಂತತಿ ಇರಾನಿನ ಆಳ್ವಿಕೆ ನಡೆಸುತ್ತಿದ್ದು ಅಮೆರಿಕದೊಂದಿಗೆ ನಿಕಟವಾದ ಸಂಬಂಧ ಹೊಂದಿತ್ತು ೧೯೭೯ರಲ್ಲಿ ಕ್ರಾಂತಿಯಾಗಿ ಪದಚ್ಯುತಗೊಳ್ಳುವವರೆಗೆ. ಒಂದು ಬಗೆಯಲ್ಲಿ ಕಳೆದ ಶತಮಾನ ಜಾಗತಿಕ ವಿದ್ಯಮಾನಗಳನ್ನೇ ಬದಲಿಸಿದ ಕ್ರಾಂತಿಗಳು ಜರುಗಿದ ಕಾಲ ಎನಿಸುತ್ತದೆ. ಅವುಗಳ ಪೈಕಿ ಇರಾನಿನ ಕ್ರಾಂತಿಯೂ ಒಂದು.

ಪ್ರಾರಂಭದಲ್ಲಿ ಆಳ್ವಿಕೆಯನ್ನು ಅಂತ್ಯಗೊಳಿಸಲು ಹೋರಾಟ ನಡೆಸಿದ್ದು, ಜನತೆಯ ಹೋರಾಟಕ್ಕೆ ನಾಯಕತ್ವ ನೀಡಿದ್ದು ಇರಾನಿನಲ್ಲಿ ಸಕ್ರಿಯವಾಗಿ ಎಡಪಕ್ಷಗಳು ಹಾಗೂ ಕಮ್ಯುನಿಸ್ಟ್ ಪಾರ್ಟಿ. ಷಾ ಪಹ್ಲವಿ ದಬ್ಬಾಳಿಕೆಯನ್ನು ಎದುರಿಸಿ, ೧೯೫೩ರಲ್ಲಿ ಷಾನನ್ನು ಪದಚ್ಯುತಗೊಳಿಸಿ ಮೊದಲ ಬಾರಿಗೆ ಮೊಹಮ್ಮದ್ ಮೊಸಾದೆಕ್ ನೇತೃತ್ವದಲ್ಲಿ ಚುನಾಯಿತ ಸರಕಾರವನ್ನು ಅಧಿಕಾರಕ್ಕೆ ತಂದಿತು. ಆದರೆ ಕೆಲವೇ ದಿನಗಳಲ್ಲಿ ಅಮೆರಿಕ ಮತ್ತು ಬ್ರಿಟನ್‌ಗಳ ಜಂಟಿ ಕಾರ್ಯಾಚರಣೆ, ಒಳ ಸಂಚಿನಿಂದಾಗಿ ಪ್ರಜಾಪ್ರಭುತ್ವ ಸರಕಾರವನ್ನು ಪದಚ್ಯುತಗೊಳಿಸಿ ಮತ್ತೊಮ್ಮೆ ಷಾ ಆಳ್ವಿಕೆಯನ್ನೇ ಸ್ಥಾಪಿಸಲಾಯಿತು. ಆದರೆ ಭ್ರಷ್ಟ ಆಡಳಿತದ ವಿರುದ್ಧ ಜನಸಾಮಾನ್ಯರ ಅತೃಪ್ತಿ, ಅಸಮಾಧಾನ ಹೊಗೆಯಾಡುತ್ತಿತ್ತು. ಅದನ್ನು ಯಶಸ್ವಿಯಾಗಿ ಬಳಸಿಕೊಂಡಿದ್ದು ಇಸ್ಲಾಮಿಕ್ ಸಂಘಟನೆಗಳು ಅಯತೊಲ್ಲ ಖೊಮೇನಿ ನೇತೃತ್ವದಲ್ಲಿ. ದೇಶ ದ್ರೋಹದ ಆಪಾದನೆ ಹೊತ್ತು ಫ್ರಾನ್ಸ್‌ನ ರಾಜಧಾನಿ ಪ್ಯಾರಿಸ್‌ನಲ್ಲಿ ನೆಲೆಸಿದ ಖೊಮೇನಿ ಅಲ್ಲಿಂದಲೇ ಇಸ್ಲಾಮಿಕ್ ತಂಡಗಳಿಗೆ ನಿರ್ದೇಶನ ನೀಡುತ್ತಿದ್ದು, ಮತ್ತೆ ಸ್ವದೇಶಕ್ಕೆ ಮರಳಿದ್ದು ಷಾ ಪದಚ್ಯುತಗೊಳ್ಳುವುದಕ್ಕೆ ಹತ್ತು ದಿನಗಳ ಮುಂಚೆ. ಸುದೀರ್ಘ ಹೋರಾಟದ ನಂತರ ಷಾನ ಆಳ್ವಿಕೆ ಅಂತ್ಯಗೊಂಡು, ಆತ ಪರಿವಾರದೊಂದಿಗೆ ಅಮೆರಿಕಾಗೆ ಹೋಗಿ ನೆಲೆಸಿದ ೧೯೭೯ರಲ್ಲಿ. ಆಗಿನಿಂದ ಅಮೆರಿಕ ಇರಾನಿನ ಮೇಲೆ ದ್ವೇಷಕಾರುತ್ತ ಬಂದಿದೆ. ತೈಲ ಸಂಪದ್ಭರಿತ ಇರಾನ್ ಅಮೆರಿಕದ ಆರ್ಥಿಕ ದಿಗ್ಬಂಧನವನ್ನು ಮೀರಿ ಬೆಳೆದಿದೆ. ನೆರೆಯ ಇರಾಕ್‌ನೊಂದಿಗೆ ಎಂಟು ವರ್ಷಗಳ ಕಾಲದ ಯುದ್ಧವನ್ನು ಜೀರ್ಣಿಸಿಕೊಂಡಿದೆ. ಈಗಲೂ ಅದು ಅಮೆರಿಕದ ಆರ್ಥಿಕ ದಿಗ್ಬಂಧನಕ್ಕೊಳಗಾಗಿದ್ದು, ಈ ಭೂಭಾಗದಲ್ಲಿ ಅಮೆರಿಕದ ಹಂಚಿಕೆಗಳಿಗೆ, ಮೇಲಾಟಕ್ಕೆ ಅಡ್ಡಿಯಾಗಿದೆ.

**ಸೀಯಾರ್ಕೆ**
"ಸೂರ್ಯ ರೆಸಿಡೆನ್ಸಿ", ಫ್ಲಾಟ್–೧, # ೩೧೩೩, ೩ನೇ ಅಡ್ಡರಸ್ತೆ
ಗಿರಿನಗರ ೪ನೇ ಹಂತ, ಬೆಂಗಳೂರು – ೫೬೦ ೦೮೫

# ಶನಿ ಮತ್ತು ಚಂದ್ರರ ಸಮಾಗಮಗಳು



ಎಲ್ಲ ಗ್ರಹಗಳೂ ತಂತಮ್ಮ ಕಕ್ಷೆಯಲ್ಲಿ ಮುಂದುವರೆಯುತ್ತಿದ್ದ ಹಾಗೆ ಚಂದ್ರ ಕೂಡ ತಿಂಗಳಿಗೊಮ್ಮೆ ಎಲ್ಲ ಗ್ರಹಗಳಿಗೂ ಭೇಟಿ ಕೊಡುವುದು ಸಹಜವೇ. ಈ ಅಂಶವನ್ನೇ ಬಳಸಿಕೊಂಡು ಆಯಾ ಗ್ರಹಗಳ ಪರಿಚಯ ಮಾಡಿಕೊಡುವುದು ಈ ಲೇಖನ ಮಾಲಿಕೆಯ ಉದ್ದೇಶ. ಚಂದ್ರನ ಕಕ್ಷೆಯ ಓರೆಕೋನದ ಕಾರಣ ಅದು ಕೆಲವೊಮ್ಮೆ ವರ್ಷದುದ್ದಕ್ಕೂ ರೋಹಿಣಿ ನಕ್ಷತ್ರವನ್ನು ಮರೆಮಾಡುತ್ತದೆ. ಕೆಲವೊಮ್ಮೆ ಮಘ, ಚಿತ್ರಾ ಇವುಗಳನ್ನೂ ಮರೆಮಾಡುತ್ತದೆ. ಅಂದಾಜಾಗಿ ಒಂಬತ್ತು ವರ್ಷಗಳಿಗೊಮ್ಮೆ ಈ ಆಚ್ಛಾದನೆಗಳ ಪುನರಾವರ್ತನೆಯಾಗುತ್ತದೆ. ಗ್ರಹಗಳನ್ನೂ ಚಂದ್ರ ಮರೆಮಾಡುತ್ತದೆ. ಆದರೆ, ಒಂಬತ್ತು ವರ್ಷಗಳ ನಿಯತಕಾಲಿಕತೆ ಅಲ್ಲಿ ಅನ್ವಯವಾಗುವುದಿಲ್ಲ. ಗ್ರಹಗಳೂ ಸತತವಾಗಿ ಚಲಿಸುತ್ತಿರುವುದರಿಂದ ಈ ಘಟನೆಗಳು ಅಪರೂಪ ಎನ್ನಬಹುದು. ಹೆಸರೇ ಸೂಚಿಸುವಂತೆ ಶನಿಗ್ರಹದ ಚಲನೆ ಬಹಳ ನಿಧಾನ. ಆದ್ದರಿಂದ ಈ ವರ್ಷದುದ್ದಕ್ಕೂ ಚಂದ್ರ–ಶನಿಯನ್ನು ಮರೆಮಾಡುವ ಆಚ್ಛಾದನೆ ಎಂಬ ಪುಟ್ಟ ಗ್ರಹಣಗಳು ಪ್ರತೀ ತಿಂಗಳೂ ನಡೆಯುತ್ತವೆ. ಮಾರ್ಚ್ ತಿಂಗಳಲ್ಲಿ ೧ನೇ ತಾರೀಖು ಮತ್ತು ೨೯ನೇ ತಾರೀಖು ನಡೆಯಿತು. ಇದಕ್ಕೆ ವಿಶೇಷ ಕಾರಣವೇನಿಲ್ಲ. ಚಂದ್ರನ ಒಂದು ಸುತ್ತು ೨೮ ದಿನಗಳಿಗೆ ಮುಗಿದದ್ದೇ ಕಾರಣ. ಈ ಬಗೆಯ ಗ್ರಹಣಗಳೆಲ್ಲವೂ ನಮಗೇ ಕಾಣಬೇಕೆಂದಿಲ್ಲ. ಏಪ್ರಿಲ್ ೨೫ರದ್ದು ನಮಗೆ ಕಾಣುವುದಿಲ್ಲ. ಭೂಮಿಯ ಬೇರೆ ಬೇರೆ ಭಾಗಗಳಿಗೆ ಕಾಣುವುದು. ಉದಾಹರಣೆಗೆ ಮಾರ್ಚ್ ೧ರ ಆಚ್ಛಾದನೆ (ಅಂದರೆ ಶನಿ ಚಂದ್ರನ ಹಿಂದೆ ಮರೆಯಾಗಿ ಪುನಃ ಕಾಣಿಸಿಕೊಂಡದ್ದು) ಯುರೋಪ್, ಉತ್ತರ ಆಫ್ರಿಕಾ, ರಷ್ಯಾದ ಪೂರ್ವ ಭಾಗಕ್ಕೆ ಕಾಣಿಸಿತ್ತು. ಮಾರ್ಚ್ ೨೯ರ ಘಟನೆ ಶ್ರೀಲಂಕಾ, ದಕ್ಷಿಣ ಆಫ್ರಿಕಾ ಈ ಭಾಗಗಳ ಜೊತೆಗೆ ಕನ್ಯಾಕುಮಾರಿಯೂ ಸೇರಿ ಇತ್ತು. ಬೆಂಗಳೂರಿನಿಂದ ಕಂಡಂತೆ ಚಂದ್ರ ಮತ್ತು ಶನಿ ಅಂಟಿಕೊಂಡಂತೆ ಇದ್ದವು. ಮುಂದಿನ ತಿಂಗಳುಗಳಲ್ಲಿ ಅವೆರಡೂ ಹತ್ತಿರವಿದ್ದಂತೆ ಕಾಣುತ್ತದೆ. ಅಂದರೆ ಕೋನ ೪–೫ ಡಿಗ್ರಿಗಳಷ್ಟು ಇರುವುದು. ಪುನಃ ಆಗಸ್ಟ್‌ನಲ್ಲಿ ಅಂಟಿಕೊಂಡಂತೆ ಕಾಣುವುವು.






೧೧ರ ಮುಂಜಾವು ಬುಧ–ಶುಕ್ರ ಜೋಡಿ

ಇದಲ್ಲದೆ ಈ ವರ್ಷದಲ್ಲಿ ಮಂಗಳ ಗ್ರಹ, (ಜುಲೈ ೪ರ ಹಗಲಿನಲ್ಲಿ), ಗುರುಗ್ರಹ (ನವೆಂಬರ್ ೨೮) ಅಲ್ಲದೆ ಶುಕ್ರ ಗ್ರಹ (ಡಿಸೆಂಬರ್ ೨೯) ಇವುಗಳ ಆಚ್ಛಾದನೆಯೂ ನಡೆಯಲಿದೆ. ಆದರೆ ಅವೆಲ್ಲವೂ ಭಾರತಕ್ಕೆ ಕಾಣುವುದಿಲ್ಲ; ಚಂದ್ರ ಆಯಾಗ್ರಹಗಳ ಸಮೀಪ ಇರುವಂತೆ ಮಾತ್ರ ಕಾಣುತ್ತದೆ. ಪ್ರತಿ ತಿಂಗಳೂ ಚಂದ್ರ ಈ ಗ್ರಹಗಳನ್ನು ಸಮೀಪಿಸಿ ದೂರಾಗುವುದನ್ನು ಗಮನಿಸುತ್ತಾ ಬಂದರೆ ಗ್ರಹಗಳ ಚಲನೆಯ ವೈಶಿಷ್ಟ್ಯ ತಿಳಿಯುತ್ತದೆ.

ಈ ತಿಂಗಳ ಸಂಜೆಯ ಆಕಾಶದಲ್ಲಿರುವ ಗ್ರಹವೆಂದರೆ ಮಂಗಳ ಮಾತ್ರ. ಅದೂ ಸಹ ಪಶ್ಚಿಮದ ಅಂಚಿಗೆ ಸರಿಯುತ್ತಿದೆ. ೯ರಂದು ಚಂದ್ರನ ಪಕ್ಕವೇ ಕಾಣುತ್ತದೆ. ಇದರ ಬಣ್ಣ ತಿಳಿಗೆಂಪು, ಹೀಗೆ ಚಂದ್ರನ ಸಹಾಯದಿಂದ ಮಂಗಳವನ್ನು ಗುರುತಿಸಿದ ಮೇಲೆ ಅದರ ಆಸುಪಾಸಿನ ನಕ್ಷತ್ರಗಳನ್ನು ಗಮನಿಸಿ. ೧೬ರಂದು ಅದು ಕೆಂಪು ನಕ್ಷತ್ರವೊಂದನ್ನು ಸಮೀಪಿಸುತ್ತದೆ. (ಸಮೀಪ ಅಂದರೆ ಏಳು ಡಿಗ್ರಿಗಳು) ಅದೇ ರೋಹಿಣಿ. ಹೀಗೆ ಮಂಗಳ ಗ್ರಹ ವೃಷಭರಾಶಿಯಲ್ಲಿದೆ ಎಂದು ತಿಳಿಯಬಹುದು.

ಸಂಜೆಯ ಆಕಾಶದಲ್ಲಿ ಕಾಣುವ ನಕ್ಷತ್ರಪುಂಜಗಳಲ್ಲಿ ಮಹಾವ್ಯಾಧ ಪ್ರಕಾಶಮಾನವಾದದ್ದು. ನೆತ್ತಿಯ ಮೇಲೆ ಸ್ವಲ್ಪ ದಕ್ಷಿಣಕ್ಕೆ ಕಾಣುತ್ತದೆ. ಇದರ ದಕ್ಷಿಣಕ್ಕೆ

ಡಾ॥ ಬಿ. ಎಸ್. ಶೈಲಜಾ

ಅತಿ ಪ್ರಕಾಶಮಾನ ನಕ್ಷತ್ರ ಲುಬ್ಧಕ (ಸಿರಿಯಸ್), ಇನ್ನೂ ದಕ್ಷಿಣಕ್ಕೆ ಪ್ರಕಾಶದಲ್ಲಿ ಎರಡನೆಯ ಸ್ಥಾನ ಪಡೆಯುವ ಅಗಸ್ತ್ಯ (ಕೆನೋಪಸ್) ಇವೆ. ಆಕಾಶ ಶುಭ್ರವಾಗಿದ್ದಲ್ಲಿ ಮಹಾವ್ಯಾಧದಿಂದ ಕುಂತಿ (ಕೆಸಿಯೋಪಿಯಾ)ವರೆಗೆ ಆಕಾಶಗಂಗೆಯ ಒಂದು ಭಾಗವನ್ನು ಕಾಣಬಹುದು. ಒರೈಯನ್‌ನಿಂದ ಸ್ವಲ್ಪ ಉತ್ತರಕ್ಕೆ ಕಾಣುವ ಪಂಚಕೋಣಾಕೃತಿಯೇ ವಿಜಯಸಾರಥಿ (ಆರಿಗಾ). ಇದರಲ್ಲಿಯ ಪ್ರಕಾಶಮಾನ ನಕ್ಷತ್ರ ಬ್ರಹ್ಮ ಹೃದಯ (ಕಪೆಲ್ಲಾ) ಸ್ವಲ್ಪ ಪೂರ್ವಕ್ಕೆ ಸಿಂಹರಾಶಿ ಉದಯಿಸುತ್ತಿರುತ್ತದೆ. ಉತ್ತರದಲ್ಲಿ ಸಪ್ತರ್ಷಿಮಂಡಲವನ್ನು ಗುರುತಿಸಬಹುದು.

ಬುಧ, ಶುಕ್ರ, ಗುರು ಮತ್ತು ಶನಿ ಈ ಗ್ರಹಗಳು ಮುಂಜಾವಿನಲ್ಲಿ ಕಾಣುತ್ತವೆ. ಗುರುಗ್ರಹ ಸುಮಾರು ಮಧ್ಯರಾತ್ರಿಗೆ ಉದಯಿಸುತ್ತದೆ. ೨೩ರಂದು ಚಂದ್ರನ ಪಕ್ಕ ಕಾಣುತ್ತದೆ. ೧೧ರಂದು ಇದರ ಹಿನ್ನಡೆ ಆರಂಭ. ೨ರಂದು ರೇಖಾಚಂದ್ರನನ್ನು ಗಮನಿಸಿ; ಅದರ ಪಕ್ಕ ಪ್ರಕಾಶಮಾನವಾದ ಶುಕ್ರಗ್ರಹವಿದೆ. ೩ರಂದು ಚಂದ್ರ ಬುಧ ಗ್ರಹದ ಪಕ್ಕ ಕಾಣುತ್ತದೆ. ಬುಧ-ಶುಕ್ರ ತಿಂಗಳುದ್ದಕ್ಕೂ ಜೋಡಿಯಾಗಿಯೇ ಕಾಣುತ್ತವೆ. ಪುನಃ ಮೇ ತಿಂಗಳ ೨ ಮತ್ತು ೩ನೇ ತಾರೀಖುಗಳಲ್ಲಿ ರೇಖಾಚಂದ್ರನೊಡನೆ ಜೋಡಿಯಾಗುತ್ತವೆ.

ಲೈರಾ ಅಂದರೆ ವೀಣಾ ನಕ್ಷತ್ರ ಪುಂಜದಿಂದ ಹೊರಟಂತೆ ಕಾಣುವ ಉಲ್ಕಾವೃಷ್ಟಿ ೧೯ರಿಂದ ೨೫ರವರೆಗೂ ಕಾಣುವುದು. ಇದಕ್ಕೆ ಲಿರಿಡ್ಸ್ ಎಂದೇ ಹೆಸರು. ಹುಣ್ಣಿಮೆ ಅದೇ ತಾನೇ ಮುಗಿದಿದ್ದರೂ ಚಂದ್ರನ ಬೆಳಕು ಸಾಕಷ್ಟು ಪ್ರಕಾಶಮಾನವಾಗಿಯೇ ಇರುತ್ತದೆ. ಸುಮಾರು ನಡುರಾತ್ರಿಯಿಂದ ಬೆಳಗಿನ ಜಾವದವರೆಗೆ ಗಂಟೆಗೆ ೧೦ ರಿಂದ ೧೫ ಉಲ್ಕೆಗಳು ಬೀಳುವುವು.

**ಖಗೋಳ ದಿನಚರಿ**

ಏಪ್ರಿಲ್ ೧ ಚಂದ್ರ-ಭೂಮಿ ನಡುವಿನ ಅಂತರ ಗರಿಷ್ಠ
೨ ಚಂದ್ರ-ಶುಕ್ರ ಜೋಡಿ (ಮುಂಜಾವು)*
೩ ಬುಧ-ಚಂದ್ರ ಜೋಡಿ (ಮುಂಜಾವು)*
೫ ಅಮಾವಾಸ್ಯೆ ೧೪:೨೦ಕ್ಕೆ
೯ ಮಂಗಳ-ಚಂದ್ರ ಜೋಡಿ*
೧೧ ಬುಧಗ್ರಹದ ಗರಿಷ್ಠ ಕೋನೋನ್ನತಿ (ಮುಂಜಾವು)*
೧೨ ಚಾಂದ್ರಮಾಸದ ಮೊದಲ ಪಾದ
೧೬ ಮಂಗಳ-ರೋಹಿಣಿ ಜೋಡಿ* ಚಂದ್ರ-ಭೂಮಿ ನಡುವೆ ಕನಿಷ್ಠ ದೂರ
೧೯ ಹುಣ್ಣಿಮೆ ೧೬:೪೭ಕ್ಕೆ
೨೩ ಗುರು-ಚಂದ್ರ ಜೋಡಿ*
೨೫ ಶನಿ-ಚಂದ್ರ ಜೋಡಿ* (ಆಚ್ಛಾದನೆ ಕಾಣುವುದಿಲ್ಲ)
೨೬ ಚಾಂದ್ರಮಾಸದ ಕೊನೆಯ ಪಾದ
೨೮ ಚಂದ್ರ-ಭೂಮಿ ನಡುವೆ ಗರಿಷ್ಠ ದೂರ
ಮೇ ೨ ಚಂದ್ರ-ಶುಕ್ರ ಜೋಡಿ*
೩ ಬುಧ-ಚಂದ್ರ ಜೋಡಿ*
(*ಛಾಯಾಗ್ರಹಣಕ್ಕೆ ಸದವಕಾಶ)

ಡಾ॥ ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಭೂಮಿ ಚಪ್ಪಟೆಯಾಗಿದೆ

ಇತ್ತ ಕಡೆ ಭೂಮಿ ಚಪ್ಪಟೆಯಾಗಿದೆ
ಇಲ್ಲವಾಗಿದ್ದರೆ, ಉರುಳುರುಳಿ ನಾ ಬೀಳುತ್ತಿದ್ದೆ
ಆಸರೆ ಸಿಗದೆ ಜಾರಿ ಹೋಗುತ್ತಿದ್ದೆ

ಮೇಲಿನಿಂದ ಧುಮ್ಮಿಕ್ಕುವ ಜಲಪಾತವು
ಇಡೀ ಭೂಮಂಡಲಕ್ಕೇ ನೀರೆರೆಯುತ್ತಿತ್ತು
ತಿರುಗಿ ಬಂದೆಡೆಯೇ ಸಾಗಿಹೋಗುತ್ತಿತ್ತು

ಚಿಮ್ಮುವ ಚೆಂಡಿನಂತಹ ಸೂರ್ಯನು
ಭುವಿಯನ್ನು ನೇವರಿಸಿದ್ದೇ ನೆವವಾಗಿ
ಅತ್ತಕಡೆ ಉರುಳಿ ಬೀಳುತ್ತಿತ್ತು

ಬಿತ್ತಿದ ಬೆಳೆಯೆಲ್ಲಾ ಅಡ್ಡಡ್ಡ ಜಾರಿಹೋಗದೆ
ಬೆವರಿಗೆ ತಕ್ಕ ಬೆಲೆಯ
ಆಸೆಯನ್ನೇ ಹೊತ್ತು ತರುತ್ತಿತ್ತು

ಇಲ್ಲೆಲ್ಲ ಭೂಮಿ ಚಪ್ಪಟೆಯಾಗಿದೆ,
ಭೂವ್ಯಾಜ್ಯಗಳ ಸಂತೆಯಾಗಿದೆ,
ವಕ್ರಭೂಮಿಯ ಆಳತೆ ಯಾರಿಗೂ ಸಿಕ್ಕದಂತಾಗಿದೆ

ಮನಸುಗಳ ನಡುವಿನ ಕಾದಾಟ
ಸೋರಿ ಹೋಗಿ, ಹೊಸ ಸಂಬಂಧ ಚಿಗುರದೆ
ಹಳೆಯದೇ ರಾಡಿ ಮೆತ್ತಿಕೊಂಡಿದೆ.

ದಿನ-ರಾತ್ರಿಗಳ ಚಕ್ರ ಸಾಗುತ್ತಾ ಮುಂದೆ,
ಚಿತ್ತಾರಗಳ ಹೊಸ ಕನಸುಗಳ ಬಿತ್ತದೆ,
ಮ್ಲಾನ, ಮಂದ ಬೆಳಕು ಎಲ್ಲೆಲ್ಲೂ ಹರಡಿಕೊಂಡಿದೆ.

ಆಳ ಭುವಿಯಿಂದ ಹೊರಟ
ಚೀತ್ಕಾರದ ಸಿಡಿಲು, ಹೃದಯ ಸೀಳಿದೆ;
ನೆಲದ ಬಂಡೆಯೇ ಆಸರೆಯಾಗಿ ಸುಳಿವು ಕೊಟ್ಟಿದೆ

ಚಪ್ಪಟೆ ನೆಲದ ಪಾಪದ ಜನರು
ಬೇರು ಬಿಟ್ಟು, ಸಾವೇ ಬಂದರೂ
ನೆಲದಾಚೆಗಿನ ಬದುಕು ಬೇಡವೆಂದರು!

**ಎಂ.ಕುಸುಮ,** ನಂ. ೪೩, 'ಜಯಲಕ್ಷ್ಮಿ ನಿಲಯ', ಬಿ. ಎಂ. ರೋಡ್, ಹಾಸನ - ೫೭೩ ೨೦೧

# ವೈಯಕ್ತಿಕ ಘನತೆಯೇ ಸಂವಿಧಾನದ ಆಶಯ -ಡಾ|| ಅಂಬೇಡ್ಕರ ವಿಚಾರಗಳು

**ಡಾ|| ಸದಾಶಿವ ಮರ್ಜಿ**

**ಡಾ||** ಅಂಬೇಡ್ಕರ ಅಸ್ಪೃಶ್ಯನಾಗಿ ಅನುಭವಿಸಿದ ಸಾಮಾಜಿಕ ಬಹಿಷ್ಕೃತತೆ (Social Exclusion)ಯ ಹಿನ್ನೆಲೆಯಲ್ಲಿ ಭಾರತೀಯ ಸಮಾಜವನ್ನು ತಳಸಮುದಾಯಗಳ ದೃಷ್ಟಿಕೋನದಿಂದ ಅಧ್ಯಯನ ನಡೆಸಿದ ಫಲಶ್ರುತಿಯೇ ಅವರ ಬದುಕು, ಸಾಧನೆ ಹಾಗೂ ಮೂರುದಶಕಗಳ ಕಾಲ ಅವರು ನಡೆಸಿದ ಹೋರಾಟ ವಾಗಿದೆ. ಭಾರತೀಯ ಸಮಾಜದಲ್ಲಿ ಮಾನವ ಹಕ್ಕುಗಳಿಂದ ನಿರಾಕರಿಸಲ್ಪಟ್ಟ ಹಾಗೂ ಸಮಾಜದ ಅಂಚಿಗೆ ತಳ್ಳಲ್ಪಟ್ಟು ಸಾಮಾಜಿಕ ಬಹಿಷ್ಕೃತತೆಗೊಳಗಾದವರಿಗೆ ವ್ಯಕ್ತಿಗತ ಸ್ವಾತಂತ್ರ್ಯ ಮತ್ತು ವೈಯಕ್ತಿಕ ಘನತೆಯನ್ನು ಸಂವಿಧಾನದಲ್ಲಿ ಅಳವಡಿಸಿದ್ದರಿಂದಲೇ ಭಾರತೀಯ ಸಂವಿಧಾನ ಇಂದಿಗೂ ಅತ್ಯಂತ ಕ್ರಿಯಾಶೀಲವಾಗಿದೆ. ವಿಶ್ವದ ಕೆಲವೇ ರಾಷ್ಟ್ರಗಳು ಹೊಂದಿರುವ ಕ್ರಿಯಾತ್ಮಕ ಸಂವಿಧಾನವು ಭಾರತೀಯ ಸಂವಿಧಾನವಾಗಿರುವುದು ಕೂಡ ನಮ್ಮ ಹೆಮ್ಮೆ. "ಒಂದೆಡೆ ಸಂವಿಧಾನವು ಎಷ್ಟೇ ಕೆಟ್ಟದ್ದಾಗಿದ್ದರೂ ಅದನ್ನು ಅನುಷ್ಠಾನ ಮಾಡುವವರು ಕ್ರಿಯಾಶೀಲರು, ಒಳ್ಳೆಯವರು ಮತ್ತು ನೈತಿಕತೆ ಹೊಂದಿದವರಾಗಿದ್ದರೆ ಅದು ಒಳ್ಳೆಯ ಸಂವಿಧಾನವೆನ್ನಿಸಿಕೊಳ್ಳುವುದು. ಇನ್ನೊಂದೆಡೆ ಸಂವಿಧಾನವು ಎಷ್ಟೇ ಒಳ್ಳೆಯದಾಗಿದ್ದರೂ ಅದನ್ನು ಅನುಷ್ಠಾನಗೊಳಿಸುವವರು ಕೆಟ್ಟವರು ಮತ್ತು ಅನೈತಿಕರಾಗಿದ್ದರೆ ಅದು ಕೆಟ್ಟ ಸಂವಿಧಾನವೆನ್ನಿಸಿಕೊಳ್ಳುವುದು" ಎಂದು ಡಾ|| ಅಂಬೇಡ್ಕರರು ಸಂವಿಧಾನವನ್ನು ರಾಷ್ಟ್ರಕ್ಕೆ ಸಮರ್ಪಿಸುವಾಗ ಹೇಳಿದ ಎಚ್ಚರಿಕೆಯ ಮಾತುಗಳಿವು. ಈ ವಿಚಾರಸರಣಿ ಇಂದು ಎಷ್ಟು ಪ್ರಸ್ತುತ, ಆಳುವ ವರ್ಗವು ಹೊಂದಿರುವ ನೈತಿಕತೆ ಮತ್ತು ತತ್ವಾದರ್ಶಗಳ ಮೇಲೆ ಸಂವಿಧಾನದ ಕಾರ್ಯಕ್ಷಮತೆ ನಿರ್ಧರಿತವಾಗುವುದು. ಹೀಗಾಗಿ ಇತ್ತೀಚಿನ ದಿವಸಗಳಲ್ಲಿ ದೇಶದಲ್ಲಿ ನಡೆಯುತ್ತಿರುವ ವಿದ್ಯಮಾನಗಳಿಗೆ ಡಾ|| ಅಂಬೇಡ್ಕರರ ವಿಚಾರಗಳು ಎಷ್ಟು ಪ್ರಸ್ತುತ ? ಎಂಬ ಪ್ರಶ್ನೆಯ ಮೂಲಕ ಡಾ|| ಅಂಬೇಡ್ಕರ ವಿಚಾರಗಳ ಪ್ರಸ್ತುತತೆ ವಿಶ್ಲೇಷಿಸಬಹುದು.

ಭಾರತೀಯ ಸಂವಿಧಾನವು ಮೂಲಭೂತ ರಾಜಕೀಯ ತತ್ವಗಳು, ಸರ್ಕಾರದ ರಚನೆ, ವಿಧಿ-ವಿಧಾನಗಳು ಹಾಗೂ ಅಧಿಕಾರಗಳು ಮತ್ತು ಕರ್ತವ್ಯಗಳನ್ನೊಳಗೊಂಡ ದಾಖಲೆಯಾಗಿದೆ. ಮೂಲಭೂತವಾಗಿ ಅದು ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವ ತತ್ವಗಳ ಮೇಲೆ ಸ್ಥಾಪಿತವಾದ ಸಂಸದೀಯ ಪ್ರಜಾಪ್ರಭುತ್ವ ಆಡಳಿತದ ಸೂತ್ರವಾಗಿರುವುದು.

ಗ್ರ್ಯಾನ್ ವಿಲ್ಲೆ ಆಸ್ಟಿನ್‌ರ ಪ್ರಕಾರ ಸಂವಿಧಾನವು ಸಾಮಾಜಿಕ ದಾಖಲೆಯಾಗಿದ್ದು, ಸಮಾಜದ ಎಲ್ಲ ಮೂಲಭೂತ ಸಮಸ್ಯೆಗಳನ್ನು ಅರ್ಥೈಸಿ ಅದಕ್ಕೆ ಸೂಕ್ತ ಪರಿಹಾರ ನೀಡುತ್ತಲೇ ಜನರ ಬದುಕು ಸಹ್ಯವಾಗುವಂತೆ ಮಾಡುವುದು ಸಂವಿಧಾನದ ಅಂತಿಮ ಗುರಿ. ಡಾ|| ಅಂಬೇಡ್ಕರವರ ಸಂವಿಧಾನಾತ್ಮಕ ಕೊಡುಗೆಗಳನ್ನು ಆಸ್ಟಿನ್ ಈ ರೀತಿ ವಿಶ್ಲೇಷಿಸುತ್ತಾರೆ :

(i) ಸಂವಿಧಾನವು ಭಾರತೀಯ ಪ್ರಜೆಗಳಿಗೆ ಮೂಲಭೂತ ನಾಗರಿಕ ಹಕ್ಕುಗಳನ್ನು ಖಾತರಿಪಡಿಸುತ್ತದೆ.

(ii) ಜಾತಿ, ವರ್ಗ, ಮತ ಮತ್ತು ಲಿಂಗದಂತಹ ಎಲ್ಲ ರೀತಿಯ ಸಾಮಾಜಿಕ ತಾರತಮ್ಯ, ಭೇದ ಮತ್ತು ಅಸಮಾನತೆಗಳನ್ನು ನಿರ್ಮೂಲನೆ ಮಾಡುತ್ತದೆ. ಧರ್ಮ ಅನುಸರಿಸುವ ಸ್ವಾತಂತ್ರ್ಯ ಪ್ರಜೆಗೆ ನೀಡುತ್ತದೆ. ಅಸ್ಪೃಶ್ಯತೆ ಆಚರಣೆಯನ್ನು ನಿರ್ಮೂಲನೆ ಮಾಡುತ್ತದೆ. ಅಸ್ಪೃಶ್ಯತೆ ಒಂದು ಅಪರಾಧವೆಂದು ಘೋಷಿಸಿ ಅದರ ಆಚರಣೆ ಅಪರಾಧವೆಂದು ಪರಿಗಣಿಸುತ್ತದೆ.

ಸಂವಿಧಾನವನ್ನು ಅಂಗೀಕರಿಸಿ ಏಳು ದಶಕಗಳೇ ಸಂದಿವೆ. ಅಸ್ಪೃಶ್ಯತೆಯನ್ನು ಆಚರಿಸುವುದು ಅಪರಾಧವೆಂದು ಸಂವಿಧಾನದಲ್ಲಿ ಘೋಷಿಸಿದ್ದರೂ ಅದು ಇಂದಿಗೂ ಜೀವಂತವಾಗಿದೆ. ವಾಸ್ತವವಾಗಿ ಅಸ್ಪೃಶ್ಯತೆ ಆಚರಣೆಯನ್ನು ತಡೆಗಟ್ಟಲು ಇಂದಿಗೂ ಸಂವಿಧಾನದ ಮೂರು ಅಂಗಗಳಿಗೂ ಸಾಧ್ಯವಾಗದಿರುವುದು ಅದರ ವ್ಯಾಪಕತೆಯನ್ನು ಬಿಂಬಿಸುತ್ತದೆ. ಅಸ್ಪೃಶ್ಯರ ಬವಣೆ-ಶೋಷಣೆಗೆ ಕಣ್ಣು-ಕಿವಿಯಾಗಬೇಕಾದ ಆಡಳಿತ ವ್ಯವಸ್ಥೆಯು ಕಣ್ಣಿದ್ದು ಕುರುಡಾಗಿದೆ ಮತ್ತು ಕಿವಿ ಇದ್ದು ಕಿವುಡಾಗಿದೆ. ಪ್ರತಿ ಗ್ರಾಮದಲ್ಲಿ ಅಸ್ಪೃಶ್ಯರ ವಿರುದ್ಧ ದೌರ್ಜನ್ಯ, ಅತ್ಯಾಚಾರ, ದಮನ ನಡೆಯುತ್ತಲೇ ಇದೆ. ಮೂಲಭೂತ ಸೌಕರ್ಯ ನಿರಾಕರಿಸಲಾಗುತ್ತಿದೆ. ಪ್ರತಿ ಹಳ್ಳಿಯಲ್ಲಿ ಅಸ್ಪೃಶ್ಯರಿಗೆ ಕುಡಿಯುವ ನೀರು, ವಸತಿ, ಅನ್ನ ಇತರ ಸೌಲಭ್ಯ ನಿರಾಕರಣೆಯಾಗುತ್ತಿದೆ ಎಂದು ಹೇಳಿದರೆ ಕಣ್ಣು ಕೆಂಪಾಗಿಸಿಕೊಳ್ಳುವವರ ಸಂಖ್ಯೆ ಹೆಚ್ಚುತ್ತಿರುವದು ತಳಸಮುದಾಯಗಳ ದುಗುಡಕ್ಕೆ ಕಾರಣವಾಗಿದೆ.

(iii) ಮಹಿಳೆಯರಿಗೆ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಸಮಾನ ಹಕ್ಕುಗಳನ್ನು ನೀಡುತ್ತದೆ. ಮಹಿಳೆಯರ ಲಿಂಗ ತಾರತಮ್ಯವನ್ನು ಅದು ಪ್ರತಿಬಂಧಿಸಿ ಸಮಾನ ಸ್ಥಾನಮಾನವನ್ನು ಖಾತರಿಪಡಿಸುತ್ತದೆ.

(iv) ತಳಸಮುದಾಯ ಸೇರಿದಂತೆ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವ ಇತರೆ ಹಿಂದುಳಿದ ವರ್ಗಗಳು ಹಾಗೂ ಧಾರ್ಮಿಕ ಅಲ್ಪಸಂಖ್ಯಾತರಿಗೆ ಮೀಸಲಾತಿ ಕಲ್ಪಿಸಿ ಸಾಮಾಜಿಕ ಅಸಮಾನತೆಯನ್ನು ತೊಡೆದು ಹಾಕುವುದು.

ಭಾರತೀಯ ಸಂವಿಧಾನದ ಮೂಲದ್ರವ್ಯವೇ ವ್ಯಕ್ತಿಗತ ಸ್ವಾತಂತ್ರ್ಯ ಮತ್ತು ವೈಯಕ್ತಿಕ ಘನತೆಯಾಗಿದೆ. ಜಾತಿ, ವರ್ಗ, ಧರ್ಮ, ಪ್ರಾದೇಶಿಕತೆ ಮತ್ತು ಲಿಂಗ ಆಧಾರಿತ ಎಲ್ಲ ಸಾಮಾಜಿಕ ತಾರತಮ್ಯಗಳನ್ನು ತೊಡೆದುಹಾಕಿ ವ್ಯಕ್ತಿಯ ಪೂರ್ಣ ವಿಕಾಸಕ್ಕೆ ಅಗತ್ಯವಿರುವ ವ್ಯಕ್ತಿಗತ ಸ್ವಾತಂತ್ರ್ಯ ನೀಡಿ ವೈಯಕ್ತಿಕ ಘನತೆಯನ್ನು ಎತ್ತಿ ಹಿಡಿಯುವುದು.

ಭಾರತೀಯ ಸಂವಿಧಾನವೆಂದರೆ ವ್ಯಕ್ತಿಯ ವೈಯಕ್ತಿಕ ಘನತೆಯ ಸಂಕೇತ. ಒಂದು ರಾಷ್ಟ್ರದ ಸಾರ್ವಭೌಮತ್ವದ ಅಡಿಪಾಯವೇ ಆ ದೇಶದ ಜನತೆಯು ಸಂವಿಧಾನಾತ್ಮಕವಾಗಿ ಪಡೆದುಕೊಳ್ಳುವ ವೈಯಕ್ತಿಕ ಘನತೆ, ಸ್ವಾತಂತ್ರ್ಯ ಹಾಗೂ ನಿರ್ಭಯದಿಂದ ಬದುಕುವ ಜೀವನವಿಧಾನ. ವೈಯಕ್ತಿಕ ಘನತೆಯನ್ನು ಹತ್ತಿಕ್ಕಿ ಜನರನ್ನು ಸಮಾಜೋ-ಸಾಂಸ್ಕೃತಿಕ ಗುಲಾಮತನಕ್ಕೆ ತಳ್ಳಲೆತ್ನಿಸುವ ಪ್ರಯತ್ನಗಳು ಹಾಗೂ ಅದರಿಂದ ಬಾಧಿತರಾದವರು ದೇಶದ ಸಾರ್ವಭೌಮತ್ವ ಒಪ್ಪಿ ಬದುಕಲು ಸಾಧ್ಯವೆ? ಜಾತಿ, ವರ್ಗ, ಧರ್ಮ, ಭಾಷೆ, ಪ್ರಾದೇಶಿಕತೆ ಹಾಗೂ ಜನರನ್ನು ವಿಭಜಿಸುವ ಎಲ್ಲ ಅಡತಡೆ ಹಾಗೂ ಗೋಡೆಗಳನ್ನು ಬಗೆಯುವ ಏಕೈಕ ಸಂಗತಿ ಎಂದರೆ ಅವುಗಳೆಲ್ಲವನ್ನೂ ಮೀರಿ ನಿಂತ ವೈಯಕ್ತಿಕ ಘನತೆ. ಸಂವಿಧಾನದ ಉಸಿರಾಟವಿರುವುದೇ ದೇಶದ ಸರ್ವ ಪ್ರಜೆಗಳ ವೈಯಕ್ತಿಕ ಘನತೆಯ ಮೇಲೆ. ಜಾತಿ, ವರ್ಗ, ಧರ್ಮ, ಭಾಷೆ, ಪ್ರಾದೇಶಿಕತೆಯಂತಹ ಗೋಡೆಗಳನ್ನು ಭದ್ರಗೊಳಿಸಿ ಅದರಲ್ಲಿ ಬದುಕುವವರ ಸಹನೆ, ತಾಳ್ಮೆ ಮತ್ತು ಅಭಿಪ್ರಾಯಗಳನ್ನು ಹತ್ತಿಕ್ಕಿ ರಾಜ್ಯಭಾರ ಮಾಡುವದು ದೇಶದ್ರೋಹವೇ ಸರಿ. ಇತ್ತೀಚೆಗೆ ಅಂತಹ ಪರಿಸ್ಥಿತಿಯು ದೇಶದಲ್ಲಿ ನಿರ್ಮಾಣವಾಗುತ್ತಿರುವದು ಆತಂಕಕಾರಿ ಬೆಳವಣಿಗೆಯಾಗಿದೆ.

ಭಾರತ ಬಹು-ಧರ್ಮೀಯ, ಬಹು-ಭಾಷೆಗಳ, ಬಹು-ಸಂಸ್ಕೃತಿಗಳ, ಬಹು ಜನಾಂಗೀಯ ಮತ್ತು ಬಹು-ನಾಗರಿಕತೆಗಳನ್ನೊಳಗೊಂಡು ಪ್ರಾಚೀನ ಕಾಲದಿಂದಲೂ ಬಹುತ್ವ ಕಾಪಾಡಿಕೊಂಡು ಬಂದಿರುವ ವಿಶಾಲ ದೇಶ. ವಿಶ್ವದ ಯಾವುದೇ ರಾಷ್ಟ್ರಗಳಲ್ಲಿ ಇರದಷ್ಟು ವೈವಿಧ್ಯತೆ ಹೊಂದಿರುವ ಈ ದೇಶ ಸಾಮಾಜಿಕ ತಾರತಮ್ಯಗಳ ಎಲ್ಲೆಗಳನ್ನು ಮೀರಿ 'ಏಕತ್ವ' ಅಥವಾ 'ಐಕ್ಯತೆ'ಯನ್ನು ಪ್ರದರ್ಶಿಸುತ್ತಾ ಬಂದಿರುವುದು. ವಿವಿಧತೆಯಲ್ಲಿ ಏಕತೆಯು ಜನಸಾಮಾನ್ಯರ ಜೀವನ ವಿಧಾನದ ಅವಿಭಾಜ್ಯ ಅಂಗವಾಗಿದೆ. ಇತ್ತೀಚಿನ ದಿನಗಳಲ್ಲಿ ಜನರ ಮಧ್ಯೆ ವಿವಿಧ ಸ್ತರಗಳಲ್ಲಿ ಸಾಮಾಜಿಕ ಸಾಮರಸ್ಯ ಹಾಳಾಗುವಂತೆ ಒಡಕು ಮೂಡಿಸಲು ಯತ್ನಿಸುತ್ತಿರುವದು ಖೇದಕರ ಸಂಗತಿ. ತತ್ವ-ಸಿದ್ಧಾಂತಗಳ ಪ್ರತಿಷ್ಠಾಪನೆಗಾಗಿ ಇತಿಹಾಸ ತಿರುಚುತ್ತಿರುವದು ಕೂಡ ಅಕ್ಷಮ್ಯ.



ಭಾರತೀಯ ಸಂವಿಧಾನ ಕರಡು ರಚನಾ ಸಮಿತಿಯ ಸಭೆಯಲ್ಲಿ ಸರ್ಕಾರದ ಆಡಳಿತದ ಮೂಲಭೂತ ಘಟಕದ ಚರ್ಚೆ ನಡೆದಾಗ ಡಾ॥ ಅಂಬೇಡ್ಕರ ಮಂಡಿಸಿದ ವಿಚಾರಗಳು ಅವರೊಬ್ಬ ಸಂವಿಧಾನ ತಜ್ಞರೆಂದು ಸಾಬೀತುಪಡಿಸಿರುವುದು. ಸರ್ಕಾರದ ಆಡಳಿತದ ಮೂಲಭೂತ ಘಟಕವನ್ನು ತೀರ್ಮಾನಿಸುವ ಮಹತ್ತರ ನಿರ್ಣಯದ ಮೇಲೆ ನಡೆದ ಚರ್ಚೆಯು ಅತ್ಯಂತ ಗಹನವಾದ ಪ್ರಸಂಗ. ಈ ಸಂದರ್ಭದಲ್ಲಿ ಗಾಂಧಿವಾದಿಗಳು ಮತ್ತು ಪ್ರಗತಿಪರ ಚಿಂತಕರ ನಡುವೆ ನಡೆದ ವಾಗ್ವಾದವು ಕೋಲಾಹಲವನ್ನೆಬ್ಬಿಸಿದ್ದು ಇತಿಹಾಸ. ಗಾಂಧಿವಾದಿಗಳು ಗ್ರಾಮಗಳು ಸ್ವಯಂ ಆಡಳಿತಕ್ಕೆ ಯೋಗ್ಯವಾದ ಸ್ವರಾಜ್ಯಗಳಾಗಿದ್ದು, ಗ್ರಾಮವನ್ನೇ ಸರ್ಕಾರದ ಆಡಳಿತದ ಮೂಲಭೂತ ಘಟಕವೆಂದು ಪರಿಗಣಿಸಬೇಕು, ಗ್ರಾಮಗಳಿಗೆ ಸಂವಿಧಾನಬದ್ಧ ಸ್ಥಾನಮಾನ ನೀಡುವುದು, ಗ್ರಾಮ ಸಮುದಾಯಗಳ ಏಳ್ಗೆಯ ದೃಷ್ಟಿಯಿಂದ ಅತೀ ಅವಶ್ಯ. ಭಾರತ ಗ್ರಾಮಗಳ ದೇಶ. ಗ್ರಾಮೋದ್ಧಾರದಿಂದ ಮಾತ್ರ ದೇಶವು ಅಭಿವೃದ್ಧಿ ಹೊಂದುವುದು ಎಂದು ಬಲವಾಗಿ ಪ್ರತಿಪಾದಿಸಿದ ಗಾಂಧಿವಾದಿಗಳಿಗೆ ಅತ್ಯಂತ ತಾಳ್ಮೆ, ಸಹನಶೀಲತೆ ಮತ್ತು ಸಂಯಮದಿಂದ ಉತ್ತರಿಸಿದ ಡಾ॥ ಅಂಬೇಡ್ಕರರು ಗ್ರಾಮಗಳು ನೀವು ಅಂದು ಕೊಂಡಿರುವಂತೆ ವಾಸ್ತವದಲ್ಲಿ ಸ್ವರಾಜ್ಯಗಳಾಗುವಂತಹ ಯಾವ ಲಕ್ಷಣ ಹೊಂದಿಲ್ಲ. 'ವಾಸ್ತವವಾಗಿ ಗ್ರಾಮಗಳು ಜಾತೀಯತೆ ಮತ್ತು ಕೋಮುವಾದದ ಕೂಪಗಳಾಗಿವೆ. ದಮನಿತ ತಳಸಮುದಾಯಗಳು ಸಮಾಜದ ಅಂಚಿಗೆ ತಳ್ಳಲ್ಪಟ್ಟಿದ್ದು ಅವುಗಳಿಗೆ ಮೂಲಭೂತ ಹಕ್ಕು ನಿರಾಕರಿಸಲಾಗಿದೆ. ಗ್ರಾಮಗಳನ್ನು ಈ ಕರಡು ರಚನಾ ಸಭೆಯು ಸರ್ಕಾರದ ಆಡಳಿತದ ಮೂಲಭೂತ ಘಟಕವೆಂದು ಪರಿಗಣಿಸಿದರೆ ಬಹುಸಂಖ್ಯಾತ ಜಾತಿಯ ಸಮುದಾಯಗಳು ಅಲ್ಪಸಂಖ್ಯಾತರಾಗಿರುವ ತಳಸಮುದಾಯಗಳ ಮೇಲೆ ರಾಜಕೀಯ ದೌರ್ಜನ್ಯ ಮತ್ತು ದಮನವನ್ನು ಮಾಡುತ್ತವೆ. ಆದುದರಿಂದ ಗ್ರಾಮಗಳ ಬದಲಿಗೆ ವ್ಯಕ್ತಿಯನ್ನೆ ಸರ್ಕಾರದ ಆಡಳಿತದ ಮೂಲಭೂತ ಘಟಕವೆಂದು ಪರಿಗಣಿಸಬೇಕೆಂದು ವಾದ ಮಂಡಿಸಿದರು. ವ್ಯಕ್ತಿಯ ವಿಕಾಸದಿಂದ ಸಮುದಾಯ, ಸಮಾಜ ಹಾಗೂ ರಾಷ್ಟ್ರವಿಕಾಸ ಸಾಧ್ಯ ಎಂಬುದು ಅವರ ಬಲವಾದ ನಂಬಿಕೆಯಾಗಿದ್ದಿತು.

ವ್ಯಕ್ತಿಯ ವಿಕಾಸವೇ ಸರ್ಕಾರದ ಮೂಲಭೂತ ಆಶಯವಾಗಬೇಕು. ಜಾತಿ, ವರ್ಗ, ಧರ್ಮ, ಭಾಷೆ ಪ್ರಾದೇಶಿಕತೆಯಂತಹ ಸಾಮಾಜಿಕ ತಾರತಮ್ಯಗಳನ್ನು ತೊಡೆದುಹಾಕಿ ವ್ಯಕ್ತಿಗತ ಸ್ವಾತಂತ್ರ್ಯ ಮತ್ತು ವೈಯಕ್ತಿಕ ಘನತೆಯನ್ನು ಎತ್ತಿ ಹಿಡಿಯುವುದು ರಾಷ್ಟ್ರದ ಐಕ್ಯತೆ ಮತ್ತು ಸಾರ್ವಭೌಮತ್ವ ಕಾಪಾಡುವುದಕ್ಕೆ ಅತ್ಯಂತ ಅವಶ್ಯಕವೆಂದು ಡಾ॥ ಅಂಬೇಡ್ಕರರು ಪ್ರತಿಪಾದಿಸಿದರು. ಈ ಕುರಿತು ಚರ್ಚೆ, ವಾದ ವಿವಾದ ಹಾಗೂ ಪರಸ್ಪರ ವಾಗ್ವಾದಗಳ ಮಧ್ಯೆ ಅಂತಿಮವಾಗಿ ಸಂವಿಧಾನ ಕರಡು ರಚನಾ ಸಮಿತಿಯು ವ್ಯಕ್ತಿಯೇ ಸರ್ಕಾರದ ಆಡಳಿತದ ಮೂಲಭೂತ ಘಟಕವಾಗಬೇಕೆಂದು ಒಪ್ಪಿ ನಿರ್ಣಯ ಅಂಗೀಕರಿಸಿತು. 'ಒಂದು ವ್ಯಕ್ತಿ, ಒಂದು ಮೌಲ್ಯ ಹಾಗೂ ಒಂದು ಮತ' ತತ್ವದಲ್ಲಿ ನಂಬಿಕೆ ಇಟ್ಟಿದ್ದ ಡಾ॥ ಅಂಬೇಡ್ಕರರು ಸಂವಿಧಾನದ ತಳಪಾಯವನ್ನು ವ್ಯಕ್ತಿಗತ ಸ್ವಾತಂತ್ರ್ಯ ಮತ್ತು ವೈಯಕ್ತಿಕ ಘನತೆಯನ್ನು ಎತ್ತಿ ಹಿಡಿಯುವ ಮೂಲಕ ಗಟ್ಟಿಗೊಳಿಸಿರುವರು.

ಚೌಡಾರ ಕೆರೆಯ ಪ್ರವೇಶ ಆಂದೋಲನದಲ್ಲಿ ತಮ್ಮ ಮೇಲೆ ಮಾರಣಾಂತಿಕ ಹಲ್ಲೆ ನಡೆದ ಘಟನೆಯಿಂದ ಹಿಡಿದು ಪೂನಾ ಒಪ್ಪಂದದ ಸಂದರ್ಭದಲ್ಲಿ ಅವರ ಮೇಲೆ ಹೇರಲಾದ ಒತ್ತಡ ಹಾಗೂ ಬೌದ್ಧಧರ್ಮಕ್ಕೆ ಮತಾಂತರಗೊಳ್ಳುವ ಸಂದರ್ಭದಲ್ಲಿ ತಮ್ಮ ಮೇಲಾದ ಮಾನಸಿಕ ಒತ್ತಡದ ಸನ್ನಿವೇಶಗಳಲ್ಲಿಯೂ ಹಾಗೂ ಸಮಗ್ರ ಮೂರು ದಶಕಗಳ ಕಾಲ ತಳಸಮುದಾಯಗಳ ವಿಮೋಚನೆಗೆ ನಡೆಸಿದ ಹೋರಾಟದ ಯಾವ ಸಂದರ್ಭಗಳಲ್ಲಿಯೂ ಎಂದಿಗೂ ಅವರು ಹಿಂಸೆಯನ್ನು ಪ್ರಚೋದಿಸಲಿಲ್ಲ ಎಂಬುದು ಗಮನಾರ್ಹ ಅಂಶವಾಗಿದೆ. ಡಾ॥ ಅಂಬೇಡ್ಕರ ತಮ್ಮ ಹೋರಾಟವನ್ನು ರೂಪಿಸಿಕೊಂಡಿದ್ದೆ ಅಹಿಂಸಾತ್ಮಕ ಮಾರ್ಗಗಳಿಂದ. ಹಿಂಸೆಯು ಪ್ರತಿ ಹಿಂಸೆಯನ್ನು ಹುಟ್ಟು ಹಾಕುವುದು ಹಾಗೂ ಜನಾಂಗೀಯ ದ್ವೇಷಕ್ಕೆಡೆ ಮಾಡಿಕೊಡುವುದೆಂಬುದರ ಅರಿವಿದ್ದ ಅವರು ಹೋರಾಟವು ಅಹಿಂಸಾತ್ಮಕವಾದ ಹೋರಾಟವಾಗಿತ್ತು. ಡಾ॥ ಅಂಬೇಡ್ಕರರು ಅಹಿಂಸಾವಾದಿಯಾಗಿದ್ದರು. ಪ್ರಜಾಪ್ರಭುತ್ವವಾದಿಯಾಗಿದ್ದ ಡಾ॥ ಅಂಬೇಡ್ಕರರು ಸಂಸದೀಯ ಪ್ರಜಾಪ್ರಭುತ್ವ ತತ್ವಗಳ ಅಡಿಯಲ್ಲಿಯೇ ತಮ್ಮ ಹೋರಾಟ ರೂಪಿಸಿದರು. ಪ್ರಜಾಪ್ರಭುತ್ವವು ಸಾಮಾಜಿಕ ಬದಲಾವಣೆಯ ಪ್ರಬಲ ಅಸ್ತ್ರ. ಪ್ರಜಾಪ್ರಭುತ್ವದ ಮೂಲಕವೇ ರಕ್ತರಹಿತ ಕ್ರಾಂತಿ ಮಾಡುವುದು ಸಾಧ್ಯ. ಆ ಮೂಲಕ ಸಮಾಜದಲ್ಲಿ ಬೇರೂರಿರುವ ಅಸಮಾನತೆ ಮತ್ತು ಶೋಷಣೆಯನ್ನು ಪ್ರತಿರೋಧಿಸಲು ಸಾಧ್ಯವೆಂಬುದನ್ನು ಡಾ॥ ಅಂಬೇಡ್ಕರರು

ಪ್ರತಿಪಾದಿಸಿದ್ದರು. ಸಂಪ್ರದಾಯಶೀಲ ಸನಾತನ ಭಾರತೀಯ ಸಮಾಜದಲ್ಲಿ ಜಾತೀಯತೆ, ಕೋಮುವಾದ, ಲಿಂಗ ತಾರತಮ್ಯ ಹಾಗೂ ಎಲ್ಲ ಬಗೆಯ ಸಾಮಾಜಿಕ ಭೇದಗಳನ್ನು ಮೀರಿ ವೈಯಕ್ತಿಕ ಘನತೆ ಮತ್ತು ವ್ಯಕ್ತಿಗಳ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯುವ ಸಂಸದೀಯ ಪ್ರಜಾಪ್ರಭುತ್ವದ ವ್ಯವಸ್ಥೆಯನ್ನು ಪ್ರತಿಷ್ಠಾಪಿಸುವ ಏಕೈಕ ಉದ್ದೇಶದಿಂದ ಡಾ॥ ಅಂಬೇಡ್ಕರರು ಅಹರ್ನಿಶಿ ದುಡಿದಿರುವರು. ಸಂವಿಧಾನವು ಸರ್ವಜನರ ಏಳ್ಗೆಯ ದ್ಯೋತಕವಾಗಬೇಕೆಂದು ಹಾಗೂ ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು ತತ್ವದ ಆಧಾರದ ಮೇಲೆ ನವಸಮಾಜ ಉದಯಿಸಬೇಕೆಂದು ನಿರಂತರ ಪ್ರಯತ್ನಪಟ್ಟ ಆಧುನಿಕ ಭಾರತದ ರೂವಾರಿಗಳಲ್ಲಿ ಡಾ॥ ಅಂಬೇಡ್ಕರರು ಅಗ್ರಪಂಕ್ತಿಯ ನಾಯಕರಾಗಿರುವರು.

ಭಾರತದಂತಹ ಬಹುತ್ವ ಹೊಂದಿರುವ ದೇಶದ ಸಂಸ್ಕೃತಿ, ಭಾಷೆಗಳು, ನಡೆನುಡಿಗಳು, ಆಚಾರ–ವಿಚಾರಗಳು, ಧರ್ಮ ಹಾಗೂ ಸಾಮಾಜಿಕ ವಿಭಿನ್ನ ಸ್ತರಗಳ ಮಧ್ಯೆ ಸಾಮಾಜಿಕ ಸಾಂಸ್ಕೃತಿಕ ಬೆಸುಗೆಗಳಿರುವುದು ಬಹುತ್ವದ ಸಂಕೇತ. ಬಹುತ್ವವನ್ನು ಕಾಪಾಡದೇ ಅದರ ಬದಲಿಗೆ ಒಂದು ರಾಷ್ಟ್ರ, ಒಂದು ಮತ, ಒಂದು ಸಂಸ್ಕೃತಿ ಎನ್ನುವುದು ಸಾಧ್ಯವೆ ಇಲ್ಲದಿರುವದನ್ನು ಅಂಬೇಡ್ಕರ ಭಾರತೀಯ ಸಮಾಜದ ತಮ್ಮ ತಲಸ್ಪರ್ಶಿ ಅಧ್ಯಯನದಿಂದ ಕಂಡುಕೊಂಡ ಸತ್ಯ. ಅಂತೆಯೇ ಅವರು ಬಹುತ್ವದಿಂದ ಕೂಡಿದ ಭಾರತದಂತಹ ವೈವಿಧ್ಯತೆಯ ದೇಶದ ಸಾಮಾನ್ಯ ಜನರ ಹಿತಸಾಧಿಸುವ ಹಾಗೂ ಪ್ರತಿಯೊಬ್ಬ ಪ್ರಜೆಯ ವೈಯಕ್ತಿಕ ಘನತೆಯನ್ನು ಕಾಪಾಡುವ ಸಂವಿಧಾನ ಅನುಷ್ಠಾನಗೊಳಿಸಲು ಮುಂದಾದದ್ದು ಇತಿಹಾಸ. ಸಂವಿಧಾನ ರಚನೆಯ ಸಂದರ್ಭದಲ್ಲಿ ತಲೆದೋರಿದ ಎಲ್ಲ ಸವಾಲು, ಅಡ್ಡಿ–ಆತಂಕಗಳಿಗೆ, ಗೊಂದಲ–ಗೋಜಲುಗಳಿಗೆ ಸ್ಪಷ್ಟತೆಯನ್ನು ನೀಡುತ್ತಲೇ ತಮ್ಮ ಕಾನೂನು ಪಾಂಡಿತ್ಯವನ್ನು ಪ್ರದರ್ಶಿಸಿರುವರು. ತಮ್ಮ ಎದುರಾಳಿಗಳು ಎತ್ತುವ ಎಲ್ಲ ಸವಾಲು ಮತ್ತು ಪ್ರಶ್ನೆಗಳಿಗೆ ಅತ್ಯಂತ ನಿಷ್ಠೆಯಿಂದ ಹಾಗೂ ಬದ್ಧತೆಯಿಂದ ಉತ್ತರಿಸುತ್ತಲೇ ಸಂವಿಧಾನವು ಸರ್ಕಾರದ ಆಡಳಿತದ ರೂಪುರೇಷೆಯನ್ನು ಸ್ಪಷ್ಟಗೊಳಿಸುವಂಥ ಸಾರ್ವಕಾಲಿಕ ಶ್ರೇಷ್ಠ ಆಡಳಿತದ ಯಂತ್ರವನ್ನಾಗಿ ರೂಪಿಸುವಂತೆ ಮಾಡಿದ ಶ್ರೇಯಸ್ಸು ಡಾ॥ ಅಂಬೇಡ್ಕರರವರದ್ದು. ಅವರ ಸತತ ಪರಿಶ್ರಮ, ದೃಢಸಂಕಲ್ಪ, ಸ್ಪಷ್ಟತೆ ಹಾಗೂ ವಿಚಾರಶೀಲತೆಯ ಫಲಿತಾಂಶದಿಂದಾಗಿಯೇ ಕ್ರಿಯಾಶೀಲ ಮತ್ತು ಕ್ರಿಯಾತ್ಮಕ ಸಂವಿಧಾನವಾಗಿ ಭಾರತೀಯ ಸಂವಿಧಾನವೊಂದು ಹೊರಹೊಮ್ಮಿರುವುದು.

ಮೂಲಭೂತವಾದಿ, ಪ್ರಗತಿ ವಿರೋಧಿ ಪ್ರತಿಗಾಮಿ ಶಕ್ತಿಗಳು ಸಾಮಾಜಿಕ ಜಾಲತಾಣಗಳನ್ನು ವ್ಯವಸ್ಥಿತವಾಗಿ ಉಪಯೋಗಿಸಿಕೊಂಡು ತಳಸಮುದಾಯಗಳನ್ನು ಹತ್ತಿಕ್ಕುವಂತಹ ಕೃತ್ಯಗಳು ಹೆಚ್ಚಾಗುತ್ತಿವೆ. ಭಾರತೀಯ ಪತ್ರಿಕೋದ್ಯಮವು ಕೂಡಾ ಬಹುರಾಷ್ಟ್ರೀಯ ಕಂಪನಿಗಳ ಹಿಡಿತದಲ್ಲಿದ್ದು, ಆಳುವವರ ತುತ್ತೂರಿಯಂತೆ ವರ್ತಿಸುತ್ತಿರುವದು ಕೂಡಾ ಬೇಸರದ ಸಂಗತಿ. ಭಾರತೀಯತೆಯ ಪುನರುಜ್ಜೀವನದ ಮಂಪರಿನಲ್ಲಿರುವವರು ಧರ್ಮ ಮತ್ತು ಜಾತಿಯ ವಿಷದ ಅಮಲಿಗೆ ಒಳಗಾಗಿ ಮೈಮೇಲೆ ದೆವ್ವ, ಭೂತ ಹಿಡಿದವರಂತೆ ತಮ್ಮ ತತ್ವ ಸಿದ್ಧಾಂತಗಳನ್ನು ಒಪ್ಪದವರ ತಲೆಕಡಿಯುವ ಬೆದರಿಕೆ, ದೊಂಬಿ, ಗಲಭೆಯಂತಹ ಸನ್ನಿವೇಶ ಸೃಷ್ಟಿಸಿ ದೇಶದಲ್ಲಿ ಅರಾಜಕತೆ ಹರಡುತ್ತಿರುವುದು ಮತ್ತು ಅಂತಹದ್ದನ್ನು ದೇಶಪ್ರೇಮದ ನೆಪದಲ್ಲಿ ಪತ್ರಿಕೋದ್ಯಮವು ಹಾಡಿ ಹೊಗಳುತ್ತಿರುವದು ಬೆಂಕಿಯಲ್ಲಿ ತುಪ್ಪ ಸುರಿದಂತಾಗುತ್ತಿರುವದು. ಇಂಥದ್ದೊಂದು ಪರಿಸ್ಥಿತಿಯು ಉದ್ಭವಿಸಬಹುದೆಂದು ಮನಗಂಡಿದ್ದ ಡಾ॥ ಅಂಬೇಡ್ಕರರು ವ್ಯಕ್ತಿಗತ ಸ್ವಾತಂತ್ರ್ಯ ಮತ್ತು ವೈಯಕ್ತಿಕ ಘನತೆಯೇ ಸಂವಿಧಾನದ ಮೂಲಭೂತ ಆಶಯವಾಗಬೇಕೆಂಬುದನ್ನು ಒತ್ತಿ ಹೇಳಿದ್ದರು.

ಮುಂದುವರಿದು ಕೆಲವು ಜನ ಸಾಮಾಜಿಕ ಜಾಲತಾಣಗಳಲ್ಲಿ ತಮ್ಮ ಇಷ್ಟ ಅಥವಾ ಧೋರಣೆ–ತತ್ವಗಳನ್ನು ಮೂಗಿನ ನೇರಕ್ಕೆ ಅಪ್‌ಲೋಡ್ ಮಾಡುವ ಪ್ರವೃತ್ತಿ ಹೆಚ್ಚುತ್ತಿದೆ. ಅವುಗಳನ್ನು ವಿರೋಧಿಸುವವರ ಆಲೋಚನೆ ಮತ್ತು ವಿಚಾರಗಳನ್ನು ವ್ಯವಧಾನದಿಂದ ಕೇಳುವುದಾಗಲಿ ಮತ್ತು ಓದುವುದಾಗಲಿ ಮಾಡದೇ ಅಂತಹವರ ವಿರುದ್ಧ ಕತ್ತಿ ಮಸೆಯುವ ದ್ವೇಷದ–ಭಾವನೆಗಳನ್ನು ಹುಟ್ಟುಹಾಕುತ್ತಿರುವದು ದುರದೃಷ್ಟಕರ. ಸಾಮಾಜಿಕ ತಾಳ್ಮೆಯನ್ನು ಹದಗೆಡುವಂತೆ ಮಾಡುವ ಈ ವಿಚಾರ ಸರಣಿಗಳು ಸಮಾಜದ ಆರೋಗ್ಯ ಹದಗೆಡಲು ಕಾರಣೀಭೂತವಾಗುತ್ತಿವೆ. ಅಸಹನೆಯ ಮಟ್ಟವೂ ಕೂಡ ಹೆಚ್ಚುತ್ತಿದ್ದು, ಸಂವಿಧಾನಾತ್ಮಕ ಹಕ್ಕೊತ್ತಾಯದ ತಳಸಮುದಾಯಗಳ ಪ್ರಯತ್ನಗಳನ್ನು ಒಂದೆಡೆ ಸದೆಬಡಿಯುವ ಪ್ರಯತ್ನವನ್ನು ಪ್ರಬಲ ಜಾತಿಗಳು ಮಾಡುತ್ತಿವೆ. ಮಾತ್ರವಲ್ಲ, ಇನ್ನೊಂದೆಡೆ ಅಂತಹ



ಪ್ರಯತ್ನಗಳನ್ನು ತೀವ್ರ ಹತಾಶೆಯಿಂದ ಹತ್ತಿಕ್ಕುವ ಹವಣಿಕೆಯಲ್ಲಿರುವುದು ಕೂಡ ಅತ್ಯಂತ ಅಪಾಯಕಾರಿ ಬೆಳವಣಿಗೆಯಾಗಿದೆ.

ಅಸ್ಪೃಶ್ಯ ತಳಸಮುದಾಯಗಳು ಸಾಮಾಜಿಕ ಬಹಿಷ್ಕೃತತೆಯನ್ನು ವಿರೋಧಿಸಿ, ಸಂವಿಧಾನಾತ್ಮಕ ಪ್ರಯೋಜನ ಪಡೆದು ಸಮಾಜದ ಮುಖ್ಯ ವಾಹಿನಿಯಲ್ಲಿ ಬೆರೆಯುವುದೇ ಅಪರಾಧವೆನ್ನುವ ಅಸಹನೆಯ ಪದ್ಧತಿ ಇಂದು ತಲೆದೋರಿರುವುದು ಆಘಾತಕಾರಿ ಸಂಗತಿಯಾಗಿದೆ. ತಮ್ಮ ಮೇಲೆ ನಡೆಯುವ ನಿರಂತರ ಅತ್ಯಾಚಾರ, ದೌರ್ಜನ್ಯ ಮತ್ತು ದಮನಗಳನ್ನು ವಿರೋಧಿಸಿದರೆ ಅಂತಹ ತಳಸಮುದಾಯಗಳ ಪ್ರಯತ್ನಗಳನ್ನೇ ದೇಶದ್ರೋಹಿ ಎಂಬಂತೆ ಬಿಂಬಿಸಿ ಅಂತಹ ಪ್ರಯತ್ನಗಳನ್ನು ಕಟುವಾಗಿ ವಿರೋಧಿಸುವ ಸಂಪ್ರದಾಯವಾದಿ ಸನಾತನ ಶಕ್ತಿಗಳು ವಿಜೃಂಭಿಸುತ್ತಿರುವುದು ಅಪಾಯಕಾರಿ.

ಸಂವಿಧಾನವನ್ನು ಅಂಗೀಕರಿಸಿ ಏಳು ದಶಕಗಳೇ ಸಂದಿವೆ. ಅಸ್ಪೃಶ್ಯತೆಯನ್ನು ಆಚರಿಸುವುದು ಅಪರಾಧವೆಂದು ಸಂವಿಧಾನದಲ್ಲಿ ಘೋಷಿಸಿದ್ದರೂ ಅದು ಇಂದಿಗೂ ಜೀವಂತವಾಗಿದೆ. ವಾಸ್ತವವಾಗಿ ಅಸ್ಪೃಶ್ಯತೆ ಆಚರಣೆಯನ್ನು ತಡೆಗಟ್ಟಲು ಇಂದಿಗೂ ಸಂವಿಧಾನದ ಮೂರು ಅಂಗಗಳಿಗೂ ಸಾಧ್ಯವಾಗದಿರುವುದು ಅದರ ವ್ಯಾಪಕತೆಯನ್ನು ಬಿಂಬಿಸುತ್ತದೆ. ಅಸ್ಪೃಶ್ಯರ ಬವಣೆ–ಶೋಷಣೆಗೆ ಕಣ್ಣು–ಕಿವಿಯಾಗಬೇಕಾದ ಆಡಳಿತ ವ್ಯವಸ್ಥೆಯು ಕಣ್ಣಿದ್ದು ಕುರುಡಾಗಿದೆ ಮತ್ತು ಕಿವಿ ಇದ್ದು ಕಿವುಡಾಗಿದೆ. ಪ್ರತಿ ಗ್ರಾಮದಲ್ಲಿ ಅಸ್ಪೃಶ್ಯರ ವಿರುದ್ಧ ದೌರ್ಜನ್ಯ, ಅತ್ಯಾಚಾರ, ದಮನ ನಡೆಯುತ್ತಲೇ ಇದೆ. ಮೂಲಭೂತ ಸೌಕರ್ಯ ನಿರಾಕರಿಸಲಾಗುತ್ತಿದೆ. ಪ್ರತಿ ಹಳ್ಳಿಯಲ್ಲಿ ಅಸ್ಪೃಶ್ಯರಿಗೆ ಕುಡಿಯುವ ನೀರು, ವಸತಿ, ಅನ್ನ ಇತರ ಸೌಲಭ್ಯ ನಿರಾಕರಣೆಯಾಗುತ್ತಿದೆ ಎಂದು ಹೇಳಿದರೆ ಕಣ್ಣು ಕೆಂಪಾಗಿಸಿಕೊಳ್ಳುವವರ ಸಂಖ್ಯೆ ಹೆಚ್ಚುತ್ತಿರುವದು ತಳಸಮುದಾಯಗಳ ದುಗುಡಕ್ಕೆ ಕಾರಣವಾಗಿದೆ.

ಗ್ರಾಮಗಳಲ್ಲಿ ಅಸ್ಪೃಶ್ಯರು ಕೆರೆ–ಕಟ್ಟೆ, ಬಾವಿ, ಕೊಳವೆ ಬಾವಿಗಳಿಂದ ನೀರನ್ನು ಮುಕ್ತವಾಗಿ ಪಡೆಯುವ ಪರಿಸ್ಥಿತಿ ಇಲ್ಲ. ನೀರನ್ನು ಜೀವಜಲವೆನ್ನುತ್ತೇವೆ. ಪ್ರತಿಯೊಬ್ಬರಿಗೂ ಅವಶ್ಯವಾಗಿ ಬೇಕಾದ ವಸ್ತುವೇ ನೀರು. ಅಂತಹ ಅತೀ ಅವಶ್ಯಕ ನೈಸರ್ಗಿಕ ಸಂಪನ್ಮೂಲದಿಂದ ತಳಸಮುದಾಯಗಳನ್ನು ಹೊರಗಿಟ್ಟು ಸಾಮಾಜಿಕ ಬಹಿಷ್ಕೃತತೆ ಆಚರಿಸಲಾಗುತ್ತಿದೆ. ದೇವಾಲಯ ಪ್ರವೇಶ ನಿರಾಕರಿಸಲಾಗಿದೆ. ಈ ಬಗ್ಗೆ ಪ್ರಶ್ನಿಸಿದರೆ ಸಂಪ್ರದಾಯಶೀಲ ಬಲಾಢ್ಯ ಜಾತಿವಾದಿಗಳು ಪ್ರಶ್ನಿಸುವ ದಮನಿತ ತಳಸಮುದಾಯದ ಮೇಲೆ ದೌರ್ಜನ್ಯವೆಸಗುವದು ಸಾಮಾನ್ಯವಾಗಿದೆ. ಕ್ಷೌರಿಕರು ದಲಿತರ ಕ್ಷೌರ ಮಾಡುವುದಿಲ್ಲ. ಗ್ರಾಮಗಳಲ್ಲಿ ಚಹಾ ಅಂಗಡಿಗಳಲ್ಲಿ ಪ್ರತ್ಯೇಕ ವ್ಯವಸ್ಥೆಯನ್ನು ದಲಿತರಿಗೆ ಮಾಡುತ್ತಾ ಅಸ್ಪೃಶ್ಯತೆ ಆಚರಿಸುವದು ಇಂದಿಗೂ ನಿಂತಿಲ್ಲ. ಇಂಥ ಸಂದರ್ಭಗಳಲ್ಲಿ ಸಂವಿಧಾನದಲ್ಲಿ ಅಸ್ಪೃಶ್ಯತೆ ಆಚರಣೆ ಅಪರಾಧವೆಂದು ಘೋಷಿಸಿ ಅದಕ್ಕೆ ಶಿಕ್ಷೆ ವಿಧಿಸುವ ಎಚ್ಚರಿಕೆ ನೀಡಿದರೂ ಅದರಿಂದೇನೂ ಪ್ರಯೋಜನವಿಲ್ಲ. ಇಂದು ದಮನಿತ ತಳಸಮುದಾಯಗಳಿಗೆ ಉಳಿದಿರುವ ಏಕೈಕ ಮಾರ್ಗವೆಂದರೆ ಆಳವಾದ ಅಧ್ಯಯನ ಮತ್ತು ಅವರ ಆಶಯದ ಹೋರಾಟಗಳನ್ನು ಮುಂದುವರಿಸುವುದು, ಅವರ ಚಿಂತನೆಗಳನ್ನು ಪ್ರಸ್ತುತ ಸಂದರ್ಭಕ್ಕೆ ಅನ್ವಯಿಸುವುದರ ಮೂಲಕ ಅಂಬೇಡ್ಕರವಾದದ ಸತ್ವವನ್ನು ಜನಮನಕ್ಕೆ ತಲುಪಿಸುವುದು, ಸಮಾನ ಆಶಯದ ಚಿಂತನೆ, ಚಳುವಳಿಗಳಿಗೆ ಸ್ಪಂದಿಸುವುದು.

**ಡಾ॥ ಸದಾಶಿವ ಮರ್ಜಿ**
ರಾಸೋನಿ ಬಿಲ್ಡಿಂಗ್, ಉದಯ ಹಾಸ್ಟೆಲ್ ಹತ್ತಿರ, ಬಾರಾಕೋಟ್ರಿ ರಸ್ತೆ, ಧಾರವಾಡ – ೫೮೦೦೦೭



ಮರಾಠಿ ಮೂಲ : ಉತ್ತಮ ಕಾಂಬಳೆ
ಕನ್ನಡಕ್ಕೆ : ಗಿರೀಶ ಚಂದ್ರಕಾಂತ ಜಕಾಪುರೆ

# ಕೃಷಿ, ನೀರು, ವಿದ್ಯುತ್ ಮತ್ತು ಬಾಬಾಸಾಹೇಬ

ಇಂದು ವಿಶ್ವದ ಬಹುತೇಕ ಭಾಗದಲ್ಲಿ ಜಲಕಲಹಗಳು ನಡೆಯುತ್ತಿವೆ ಹಾಗೂ ಅವು ದಿನದಿನಕ್ಕೆ ತೀವ್ರವಾಗುತ್ತಿವೆ. ಜಲಕಲಹದ ಜೊತೆಜೊತೆಗೆ ಯೋಜನಾ ಸಂಘರ್ಷಗಳೂ ಹುಟ್ಟಿಕೊಳ್ಳುತ್ತಿವೆ. ಭಾರತದಂತಹ ದೇಶದಲ್ಲಿ ಈ ಯೋಜನೆಗಳ ವಿರೋಧಿ ನೆಲೆಯಲ್ಲಿ ರಕ್ತಪಾತಗಳೂ ನಡೆದಿವೆ. ಅಲ್ಲದೆ, ಈ ಕಲಹಗಳಿಂದಾಗಿ ಪ್ರಾದೇಶಿಕತೆಯೂ ತಲೆಯೆತ್ತುತ್ತಿದೆ. ಭಾರತಕ್ಕಷ್ಟೇ ಸೀಮಿತವಾಗಿ ಹೇಳುವುದಾದರೆ ಇತ್ತೀಚೆಗೆ ಕಾವೇರಿ ಜಲಸಮಸ್ಯೆಯಿಂದಾಗಿ ಕರ್ನಾಟಕ ಮತ್ತು ತಮಿಳುನಾಡು ರಾಜ್ಯಗಳ ನಡುವೆ ತಿಕ್ಕಾಟವೂ ನಡೆಯಿತು, ಈ ಅಲ್ಪಕಾಲಿಕ ಸಂಘರ್ಷವನ್ನು ನಾವೆಲ್ಲ ಕಂಡಿದ್ದೇವೆ. ಅಲ್ಲದೆ, ಯೋಜನಾ ನಿರಾಶ್ರಿತರ ಸಂಘರ್ಷಗಳನ್ನು ಕಾಲಾನುಕಾಲದಿಂದ ಕಾಣುತ್ತಲೇ ಇದ್ದೇವೆ. ಕೋಯನಾ ಅಣೆಕಟ್ಟಿಗೆ ೪೬ ವರ್ಷಗಳಾದವು, ಆದರೂ ಅಲ್ಲಿರುವ ಎರಡು-ಮೂರು ಸಾವಿರದಷ್ಟು ಯೋಜನಾ ನಿರಾಶ್ರಿತರ ಸಮಸ್ಯೆಗಳಿಗೆ ಇದುವರೆಗೂ ಸಂಪೂರ್ಣವಾಗಿ ಪರಿಹಾರ ಕಂಡುಕೊಳ್ಳಲಾಗಿಲ್ಲ. ಈ ಮೂರು ಅಂಶಗಳು ಇಂದು ವೈಶ್ವಿಕ ಸಮಸ್ಯೆಯ ಸ್ವರೂಪ ಪಡೆದಿವೆ. ಈ ಸಮಸ್ಯೆಗಳ ಕುರಿತು ಡಾ॥ ಬಾಬಾಸಾಹೇಬ ಅಂಬೇಡ್ಕರ್ ಅವರ ಚಿಂತನೆಗಳು ಏನು? ಅವರು ಈ ಸಮಸ್ಯೆಗಳ ಪರಿಹಾರಕ್ಕೆಂದು ಸೂಚಿಸಿದ ನೀತಿ, ಅನುಸರಿಸಿದ ಯೋಜನೆಗಳು ಯಾವುವು? – ಎಂಬುದನ್ನು ಅರಿಯುವುದು ಮತ್ತು ಅವುಗಳ ಪ್ರಸಾರ ಮಾಡುವುದು ಈ ಕಾಲದ ಅವಶ್ಯಕತೆ. ವಾಸ್ತವವೆಂದರೆ ಈ ಮೂರು ಮಹತ್ವದ ವಿಷಯಗಳ ಕುರಿತಾಗಿ ಅಂಬೇಡ್ಕರ್ ಅವರ ಚಿಂತನೆ ಹಾಗೂ ಅವರ ಕಾರ್ಯಗಳ ಬಗ್ಗೆ ಎಲ್ಲಿಯೂ ವ್ಯಾಪಕವಾಗಿ ಚರ್ಚೆಯಾಗಿಲ್ಲ. ವಿಶ್ವವಿದ್ಯಾಲಯ ಅನುದಾನ ಆಯೋಗದ ಅಧ್ಯಕ್ಷ ಸುಖದೇವ ಥೋರಾತ, ಪುಣೆ ವಿಶ್ವವಿದ್ಯಾಲಯದ ಕುಲಪತಿ ನರೇಂದ್ರ ಜಾಧವ ಮತ್ತು ನಿಯೋಜನ ಆಯೋಗದ ಸದಸ್ಯ ಭಾಲಚಂದ್ರ ಮುಣಗೆಕರ್ ಇವರು ಅಲ್ಲಲ್ಲಿ ಒಂದಿಷ್ಟು ಬೆಳಕು ಚೆಲ್ಲಿದ್ದಾರೆ. ಆದರೆ ಈ ವಿಷಯಗಳ ಕುರಿತು ಇನ್ನೂ ಹೆಚ್ಚು ಹೆಚ್ಚು ಚರ್ಚೆಗಳಾಗಬೇಕು. ಇಂದು ರೌದ್ರರೂಪ ತಾಳಿರುವ ಈ ಪ್ರಶ್ನೆಗಳಿಗೆ ಬಾಬಾಸಾಹೇಬರು ಅಂದಿನ ದಿನಗಳಲ್ಲಿಯೇ ಉತ್ತರ ಕಂಡುಕೊಳ್ಳಲೆಂದು ಮಾಡಿದ ಪ್ರಯತ್ನಗಳನ್ನೂ ಗಮನಿಸಬೇಕು. ೧೯೪೨ರಿಂದ ೧೯೪೬ರ ಕಾಲಾವಧಿಯಲ್ಲಿ ಡಾ॥ ಬಾಬಾಸಾಹೇಬ ಅಂಬೇಡ್ಕರರು ಕಾರ್ಮಿಕ ಮಂತ್ರಿಯಾಗಿದ್ದರು. ನೀರಾವರಿ ಮತ್ತು ಇಂಧನ ವಿಭಾಗಗಳು ಇದೇ ಇಲಾಖೆಯೊಂದಿಗೆ ಇದ್ದವು. ಈ ಕಾಲಾವಧಿಯಲ್ಲಿಯೇ ಈ ಮೂರೂ ವಿಭಾಗಗಳ ಮೂಲಭೂತ ರೂಪುರೇಷೆಗಳನ್ನು ನಿರ್ಧರಿಸಲಾಯಿತು. ಬಾಬಾಸಾಹೇಬರು ಯೋಜನಾ ನಿರಾಶ್ರಿತ ಪುನರ್ವಸತಿ ಸಮಿತಿಯ ಅಧ್ಯಕ್ಷರಾಗಿಯೂ ಕಾರ್ಯ ನಿರ್ವಹಿಸಿದರು. ಅಲ್ಲದೆ, ಕೃಷಿಯ ಬಗ್ಗೆ ಅವರು ಸಮಗ್ರ ಚಿಂತನೆ ಮಾಡಿದ್ದರು.

**ಯೋಜನಾ ನಿರಾಶ್ರಿತರ ಕುರಿತ ದೃಷ್ಟಿಕೋನ**

ಯೋಜನಾ ನಿರಾಶ್ರಿತರ ವಿಷಯದೊಂದಿಗೆ ನಾವು ಚರ್ಚೆ ಪ್ರಾರಂಭಿಸೋಣ. ನಮ್ಮ ದೇಶದ ಪ್ರಗತಿ ಮತ್ತು ವಿಕಾಸಕ್ಕೆಂದು ಸಣ್ಣ ಪ್ರಮಾಣದ ಮತ್ತು ದೊಡ್ಡ ಪ್ರಮಾಣದ ಹಲವಾರು ಯೋಜನೆಗಳ ಅವಶ್ಯಕತೆ ಇದೆ, ಇದೇ ಸಂದರ್ಭದಲ್ಲಿ ಜನಾಂದೋಲನದಿಂದಾಗಿ ಹಲವಾರು ಯೋಜನೆಗಳು ಸ್ಥಗಿತವಾಗಿವೆ ಎಂಬುದನ್ನೂ ಗಮನಿಸಬೇಕು. ಅಸಮರ್ಪಕ ಪುನರ್ವಸತಿ ಮತ್ತು ದೊರೆಯುವ ಲಾಭದ ವಿಷಮ ಹಂಚಿಕೆಯಿಂದಾಗಿ ಇಂತಹ ಸಮಸ್ಯೆಗಳು ಉದ್ಭವಿಸುತ್ತವೆ. ಯೋಜನೆಗಳಿಂದ ನಿರ್ಮಾಣವಾಗುವ ಪ್ರಗತಿ, ವಿಕಾಸ ಹಾಗೂ ಲಾಭದಲ್ಲಿ ಯೋಜನಾ

ಕೃಷಿಯ ಮೇಲೆ ಅವಲಂಬಿತರಾದವರ ಭಾರ ಕಡಿಮೆ ಮಾಡಿದರೆ ಸ್ವಾಭಾವಿಕವಾಗಿಯೇ ಉತ್ಪನ್ನ ಹೆಚ್ಚಾಗುತ್ತದೆ, ಗ್ರಾಮೀಣ ಪ್ರದೇಶಗಳ ವಿಕಾಸದಲ್ಲಿ ಒಂದಿಷ್ಟು ಸಹಕಾರವಾಗುತ್ತದೆ. ಒಟ್ಟು ಜನಸಂಖ್ಯೆ ಕೃಷಿಯನ್ನು ಅವಲಂಬಿಸುವುದು ಸಾಧ್ಯವಿಲ್ಲ. ವಿಕಾಸದ, ಪ್ರಗತಿಯ ಭಿನ್ನ, ವಿಭಿನ್ನ ಮಾರ್ಗಗಳ ಶೋಧವೂ ಈಗ ಅನಿವಾರ್ಯವಾಗಿದೆ. ಉದ್ಯೋಗ ದಂಧೆಗಳಿಗೆ ಸರಕಾರದಿಂದ ಸವಲತ್ತು ಸೌಲಭ್ಯಗಳು ದೊರೆಯುವಂತೆಯೇ ಕೃಷಿಗೂ ಸಹಾಯಹಸ್ತ ದೊರೆಯಬೇಕು. ತುಂಡು ಭೂಮಿಯ ಕೃಷಿ ಬಹುಕಾಲದವರೆಗೆ ಸೂಕ್ತವಲ್ಲ ಹಾಗೂ ಲಾಭದಾಯಕವೂ ಅಲ್ಲ. ತುಂಡು ಭೂಮಿಯ ಕೃಷಿಯಲ್ಲಿ ಬಂಡವಾಳ, ಉಳುಮೆ ಮತ್ತು ಉತ್ಪನ್ನಗಳ ಸಮತೋಲನ ಸಾಧಿಸಲಾಗದೆ ಗಂಭೀರ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಆ ಎಲ್ಲ ಸಮಸ್ಯೆಗಳಿಂದ ಮುಕ್ತಿ ಪಡೆಯಲೆಂದು ತುಂಡು ಕೃಷಿಯ ಬದಲಿಗೆ ಸಮೂಹ ಕೃಷಿ ಅಥವಾ ಸಮುದಾಯ ಕೃಷಿಯ ಪರ್ಯಾಯ ಮಾರ್ಗವನ್ನು ಅಂಬೇಡ್ಕರ್ ತೋರಿಸಿದ್ದಾರೆ.

ನಿರಾಶ್ರಿತರಿಗೆ ಸಮಾನ ಪಾಲು ಇರಬೇಕು. ಅವರಿಗೆ ಭೂಮಿಯ ಬದಲಿಗೆ ಭೂಮಿ ನೀಡಬೇಕು, ಅದು ಅವರಿಗೆ ಉಪಯುಕ್ತವಾಗುವಂತಹದ್ದಿರಬೇಕು. ಪುನರ್ವಸತಿಯ ಸಲುವಾಗಿ ಅತ್ಯಂತ ನಿಯೋಜನಾಬದ್ಧವಾದ ವ್ಯವಸ್ಥೆ ಇರಬೇಕು. ಯೋಜನೆಗಳು ಆಯಾ ರಾಜ್ಯಗಳಲ್ಲಿ ಅನುಷ್ಠಾನಗೊಳ್ಳುತ್ತಿರುವುದರಿಂದ ಪುನರ್ವಸತಿಯ ಸಂಪೂರ್ಣ ಭಾರ ಆಯಾ ರಾಜ್ಯ ಸರಕಾರಗಳ ಮೇಲೆ ಅಥವಾ ಯೋಜನಾಕರ್ತರ ಮೇಲೆ ಹೊರೆಸಬಾರದು ಎಂಬುದು ಬಾಬಾಸಾಹೇಬರ ಅಭಿಮತ. ಆದರೆ ವಾಸ್ತವ ಬೇರೆಯಿದೆ. ಯೋಜನೆಗಳಿಂದ ಯಾರಿಗೆ ಲಾಭವಾಗುತ್ತದೆಯೋ, ಯಾರ ಅಭಿವೃದ್ಧಿಯಾಗುತ್ತದೆಯೋ ಅವರು ತಮ್ಮ ಮುಷ್ಟಿಗೆಯಲ್ಲಿ ಹಿಡಿದಿಟ್ಟುಕೊಂಡಿರುವ ಪ್ರಗತಿಯಲ್ಲಿನ ಒಂದಿಷ್ಟು ಭಾಗವನ್ನು ಯೋಜನಾ ನಿರಾಶ್ರಿತ ಬಾಂಧವರಿಗಾಗಿ ಬಿಟ್ಟುಕೊಡುವುದಿಲ್ಲ. ಇದರ ಪರಿಣಾಮವೆಂದರೆ ಕೋಟಿಗಟ್ಟಲೆ ರೂಪಾಯಿ ವ್ಯಯಿಸಿ ಅನುಷ್ಠಾನಗೊಳಿಸಿದ ಯೋಜನೆಗಳಿಂದ ಸಮನಾದ ಪ್ರಗತಿ ಸಾಧ್ಯವಾಗದೆ ಕೆಲವರ ವಿಕಾಸವಾಗುತ್ತದೆ ಹಾಗೂ ಉಳಿದವರೆಲ್ಲರೂ ಬೀದಿಗೆ ಬೀಳುತ್ತಾರೆ. ಕೋಯನಾ ಯೋಜನೆಯ ಉದಾಹರಣೆಯನ್ನೇ ನೋಡಿ. ಸಾವಿರಾರು ಜನರ ಹೊಲ-ಮನೆಗಳು ನೀರಿನಡಿ ಸಿಲುಕಿದ ತರುವಾಯ ಅಲ್ಲಿ ವಿದ್ಯುತ್ ನಿರ್ಮಾಣ ಸಾಧ್ಯವಾಯಿತು, ವಿಪರ್ಯಾಸವೆಂದರೆ ಹೊಲ-ಮನೆಗಳನ್ನು ಕಳೆದುಕೊಂಡ ಅದೇ ಜನರಿಗೆ ಹಲವಾರು ವರ್ಷಗಳವರೆಗೆ ವಿದ್ಯುತ್ ನೀಡಲಾಗಿರಲಿಲ್ಲ. ಯೋಜನೆಗಳಿಂದ ದೊರೆಯುವ ಲಾಭ, ವಿಕಾಸ, ಪ್ರಗತಿಯಲ್ಲಿ ಪ್ರತಿಯೊಬ್ಬರ ಪಾಲು ಇರಬೇಕು ಎಂಬ ಸೂತ್ರದ ಮೇಲೆ ಅಂಬೇಡ್ಕರ್‌ರ ವಿಚಾರಗಳು ನೆಲೆಯೂರಿದ್ದವು. ನರ್ಮದಾ ಸರೋವರ ನಿರ್ಮಾಣ ಯೋಜನೆಯಿಂದಾಗಿ ನಿರಾಶ್ರಿತರಾದ ಜನರು ದಶಕಗಳವರೆಗೆ ಆಂದೋಲನ ಮಾಡಿದರು, ಪ್ರತಿಬಾರಿಯೂ ಅಂದಿನ ಸರಕಾರಗಳು ಬರೀ ಆಶ್ವಾಸನೆ ನೀಡಿದವು, ಪುನಃ ಆಂದೋಲನಕಾರಿಗಳು ತಮ್ಮ ಪುನರ್ವಸತಿಗೆಂದು ಆಂದೋಲನ ಮುಂದುವರಿಸಿದರು. ಇಂತಹ ಸನ್ನಿವೇಶಗಳಲ್ಲಿ ಯೋಜನಾ ನಿರಾಶ್ರಿತರನ್ನು ಯಾವ ದೃಷ್ಟಿಯಿಂದ ನೋಡಬೇಕು? ದಯೆಯ, ಕರುಣೆಯ, ಸಹಾಯದ ಅಥವಾ ಅವರು ಪುನರ್ವಸತಿಯ ಹಕ್ಕುದಾರರು ಎಂದು ತಿಳಿಯಬೇಕೆ? ಬಾಬಾಸಾಹೇಬರ ದೃಷ್ಟಿಯಲ್ಲಿ ಯೋಜನಾ ನಿರಾಶ್ರಿತರು ಅಭಿವೃದ್ಧಿ ಪ್ರಕ್ರಿಯೆಯಲ್ಲಿನ ಸಮಾನ ಹಕ್ಕುದಾರರಾಗಿದ್ದಾರೆ. ಅವರ ತ್ಯಾಗದಿಂದಲೇ ಪ್ರಗತಿಯ ದಾರಿಗಳಲ್ಲಿ ಬೆಳಕಾಗುತ್ತದೆ. ಆದ್ದರಿಂದಾಗಿ ವಿಕಾಸದ ಬೆಳಕು ಯೋಜನಾ ನಿರಾಶ್ರಿತರ ಬಾಳಿಗೂ ಆಸರೆಯಾಗಬೇಕು. ಯೋಜನೆಗಳಿಗೆ ಅಡಿಗಲ್ಲು ಹಾಕುವ ಸಂದರ್ಭದಲ್ಲಿಯೇ ಇಡೀ ಯೋಜನೆಯನ್ನು ಕಲಹಮುಕ್ತವಾಗಿಸುವುದು ಹೇಗೆ ಸಾಧ್ಯ? ಎಂಬ ವಿಚಾರ ಅತ್ಯಂತ ಅವಶ್ಯಕವಾಗಿದೆ. 'ಮೊದಲು ಪುನರ್ವಸತಿ, ನಂತರ ಯೋಜನಾ ಅನುಷ್ಠಾನ' ಎಂಬ ಘೋಷಣೆಗಳು ನಿರರ್ಥಕ. ಬದಲಿಗೆ, ಆ ಸಂದರ್ಭದ ಪುನರ್ವಸತಿ ಕಾರ್ಯಗಳು ಯಾವ ಗುಣಮಟ್ಟದ್ದಾಗಿರುತ್ತವೆ ಎಂಬುದನ್ನು ಗಮನಿಸುವುದು ಅಷ್ಟೇ ಮಹತ್ವದ್ದಾಗಿದೆ. ಇದರಲ್ಲಿ ಯಾವುದೂ ಸಮರ್ಪಕವಾಗಿ ಅನುಷ್ಠಾನಗೊಳ್ಳದಿರುವ ಕಾರಣದಿಂದಾಗಿಯೇ ಯೋಜನೆಗಳು



**ಕೋಯನಾ ಅಣೆಕಟ್ಟೆ**

ಕಾಲಾನುಕಾಲದವರೆಗೆ ನಿಂತುಬಿಡುತ್ತವೆ ಅಥವಾ ತೆವಳುತ್ತ ಸಾಗುತ್ತವೆ ಮತ್ತು ಅವುಗಳ ಅಂದಾಜು ವೆಚ್ಚ ಹೆಚ್ಚಾಗುತ್ತಲೇ ಇರುತ್ತದೆ, ದೊರೆಯುವ ಅಭಿವೃದ್ಧಿ, ಲಾಭವೂ ಮುಂದೆ ಮುಂದೆ ಹೋಗುತ್ತದೆ.

**ಪ್ರಾದೇಶಿಕತಾವಾದ ಮತ್ತು ಉತ್ತರ**

ಇತ್ತೀಚೆಗೆ ಮಹಾರಾಷ್ಟ್ರದಲ್ಲಿ ಮರಾಠಿಗರು ಮತ್ತು ಉತ್ತರಪ್ರದೇಶ, ಬಿಹಾರದಿಂದ ಬಂದ ಕಾರ್ಮಿಕ, ವ್ಯಾಪಾರಿ ವರ್ಗದ ನಡುವಿನ ಸಂಘರ್ಷವನ್ನು ನಾವು ಕಂಡಿದ್ದೇವೆ. ಇದಕ್ಕೂ ಮೊದಲು ಇಂತಹ ಸಂಘರ್ಷಗಳು ನಡೆದಿವೆ. ಅಲ್ಲದೆ, ಅವು ಬರೀ ಮಹಾರಾಷ್ಟ್ರದಲ್ಲಿ ಮಾತ್ರ ಸಂಭವಿಸುತ್ತವೆ ಎಂದೇನೂ ಇಲ್ಲ, ಆಗಾಗ ಅಲ್ಲಲ್ಲಿ ಇಂತಹ ಕಲಹಗಳು ನಡೆಯುತ್ತಿರುವುದೂ ಕಂಡುಬರುತ್ತದೆ. ಹೊರಗಿನ ಜನರು ಬಂದಾಗ ಅಲ್ಲಿನ ಮೂಲನಿವಾಸಿಗಳ ಅಭಿವೃದ್ಧಿ, ವಿಕಾಸ ಕುಸಿಯುತ್ತವೆ, ನಿರುದ್ಯೋಗ ಹೆಚ್ಚಾಗುತ್ತದೆ, ಸೇವಾವ್ಯವಸ್ಥೆಗಳು ಹಳಿತಪ್ಪುತ್ತವೆ ಎಂಬ ವಿವಿಧ ಆರೋಪಗಳು ಈ ಸಂಘರ್ಷಗಳ ಹಿನ್ನೆಲೆಯಲ್ಲಿ ಇರುತ್ತವೆ. ಇವೆಲ್ಲವೂ ಶುದ್ಧಸುಳ್ಳು ಎಂದು ಹೇಳಲೂ ಆಗದು, ಆದರೆ ಸಮಸ್ಯೆ ಉದ್ಭವಿಸಿದಾಗ ಅದಕ್ಕೊಂದು ದಾರಿ ಕಂಡುಕೊಳ್ಳಲೇಬೇಕು. ಅಂಬೇಡ್ಕರ್ ಅವರು 'ಹಳ್ಳಿಗಳನ್ನು ಬಿಟ್ಟು ಪಟ್ಟಣಗಳತ್ತ ನಡೆಯಿರಿ' ಎಂದು ತಮ್ಮ ಬಾಂಧವರಿಗೆ ಆದೇಶ ನೀಡಿದ್ದರು. ಮನುಷ್ಯ ಸದಾಕಾಲ ಅನ್ನ, ನೀರು ಮತ್ತು ವಿಕಾಸದ ಶೋಧದಲ್ಲಿ ಅಲೆಯುತ್ತಿರುತ್ತಾನೆ. ಮನುಷ್ಯನ ಆರಂಭದ ದಿನಗಳಿಂದಲೂ ಈ ಹುಡುಕಾಟ, ಅಲೆದಾಟ ನಿರಂತರವಾಗಿದೆ ಮತ್ತು ಮುಂದೂ ಇರುತ್ತದೆ. ಯಾವ ನಗರಗಳಲ್ಲಿ ಜನದಟ್ಟಣೆ ಹೆಚ್ಚಾಗುತ್ತಿದೆಯೋ ಆ ಪಟ್ಟಣಗಳು ತನ್ನ ಅಭಿವೃದ್ಧಿಯ ಯೋಜನೆಗಳನ್ನು, ವಿಕಾಸದ ಕಲ್ಪನೆಗಳನ್ನು ವಾಸ್ತವಕ್ಕೆ ತಕ್ಕಂತೆ ಬದಲಾಯಿಸಿಕೊಳ್ಳಬೇಕು. ನೂರಿನ್ನೂರು ವರ್ಷಗಳ ತರುವಾಯದ ಸ್ಥಿತಿಗಳನ್ನು ಊಹಿಸಿಕೊಂಡು ಯೋಜನೆಗಳನ್ನು ರೂಪಿಸಬೇಕು, ಸದ್ಯದ ಸ್ಥಿತಿಗಳಲ್ಲಿಯೂ ಯೋಗ್ಯ ಬದಲಾವಣೆಗಳನ್ನು ತಂದುಕೊಳ್ಳಬೇಕು. ಪ್ರಗತಿಯ ನೀಲನಕ್ಷೆ ಹಾಕಿಕೊಳ್ಳಬೇಕು, ಹೀಗಾಗದಿದ್ದಲ್ಲಿ ಜನದಟ್ಟಣೆ ಹೆಚ್ಚಾಗುತ್ತದೆ ಹಾಗೂ ಪ್ರಸ್ತುತ ಯೋಜನೆಗಳು ಯಾವುದಕ್ಕೂ ಸಾಲದೇ ಕುಸಿದುಬಿಡುತ್ತವೆ. ನಮ್ಮಲ್ಲಿಯ ಶಹರು, ಪಟ್ಟಣಗಳನ್ನು ನೆಲೆಗೊಳಿಸುವಾಗ ಭವಿಷ್ಯದ ಕುರಿತಾದ ದೃಷ್ಟಿಕೋನಕ್ಕೆ ಮಹತ್ವ ನೀಡಲಾಗಿಲ್ಲ, ನೀಡಲಾಗುತ್ತಿಲ್ಲ. ವಿಚಿತ್ರವೆಂದರೆ ಇಂದು ಮಾಡಿರುವ ರಸ್ತೆಗಳನ್ನು ನಾಳೆ ಅಗೆದು ತೆಗೆಯಲಾಗುತ್ತದೆ. ಜನಸಂಖ್ಯೆ ಹೆಚ್ಚಾದಂತೆ ಉದ್ಯೋಗಾವಕಾಶಗಳು ಕಡಿಮೆಯಾಗುತ್ತವೆ. ಕೊನೆಗೆ ಇಷ್ಟೆಲ್ಲ ಅನಾಹುತಗಳಿಗೆ ಹೊರಗಿನಿಂದ ಬಂದವರೇ ಕಾರಣ ಎಂದು ಅವರ ಮೇಲೆ ಗೂಬೆ ಕೂರಿಸಲಾಗುತ್ತದೆ, ಸಂಘರ್ಷಗಳು ಸಂಭವಿಸುತ್ತವೆ. 'ಸ್ಥಳಾಂತರ' ಎಂಬುದು ತಡೆಯಲಾಗದ ಅಂಶ, ಅದನ್ನು ನಿಲ್ಲಿಸಲಾಗದು. ಸ್ಥಳಾಂತರ ತತ್ವವನ್ನು ಸ್ವೀಕರಿಸುತ್ತ ವಿಕಾಸದ ಮಾರ್ಗವನ್ನು ಹೇಗೆ ಇನ್ನಷ್ಟು ವಿಸ್ತೃತಗೊಳಿಸುವುದು ಸಾಧ್ಯ ಎಂಬ ಯೋಚನೆ ಮಹತ್ವದ್ದಾಗಿದೆ.

**ಲಾಭದಾಯಕ ಕೃಷಿ**

ಭಾರತದಂತಹ ವಿಶಾಲ ದೇಶದಲ್ಲಿ ಇಂದೂ ಕೂಡ ಹೆಚ್ಚೂಕಡಿಮೆ ಕೃಷಿಯೇ ಮುಖ್ಯ ಕಸುಬಾಗಿದೆ. ಕೃಷಿ ಅವಲಂಬಿತರ ಸಂಖ್ಯೆ ಬಹುದೊಡ್ಡದು. ಹೀಗಿರುವಾಗ ಕೃಷಿಯ ಆದಾಯ ಅಷ್ಟಕ್ಕಷ್ಟೇ ಇರುವುದಕ್ಕಿಂತ, ಕೃಷಿ ಒಂದು ಲಾಭದಾಯಕ ವೃತ್ತಿಯಾಗಬೇಕು ಎಂಬುದು ಅಂಬೇಡ್ಕರ್ ಅವರ ಆಗ್ರಹವಾಗಿತ್ತು. ಅಲ್ಪೋತ್ಪನ್ನದ ಕೃಷಿಯಿಂದ ಬದುಕುವುದಷ್ಟೇ ಸಾಧ್ಯ; ಆದರೆ ಅಭಿವೃದ್ಧಿ ಸಾಧಿಸಬೇಕಾದರೆ 'ಅಷ್ಟಕ್ಕಷ್ಟೇ' ಎಂಬ ತತ್ವ ಸೂಕ್ತವಲ್ಲ. ಇದು 'ಬದುಕಲೂ ಬೇಡ, ಸಾಯಲೂ ಬೇಡ' ಎಂಬಂತಹ ಸ್ಥಿತಿ. ಈ ಶಬ್ದಗಳನ್ನು ನಮ್ಮಲ್ಲಿ ವರ್ಷಾನುವರ್ಷಗಳಿಂದ ಬಳಸಲಾಗುತ್ತಿದೆ.

ಕೃಷಿ ನಿಸರ್ಗಾಧಾರಿತವಾಗಿದೆ. ಕೆಲವೊಮ್ಮೆ ಕೃಷಿ ಅಷ್ಟಕ್ಕಷ್ಟೂ ಆಗುವುದಿಲ್ಲ. ಇದರ ಪರಿಣಾಮವೆಂದರೆ ಕೃಷಿಕ ಆರ್ಥಿಕ ಸಂಕಷ್ಟಕ್ಕೆ ಸಿಲುಕುತ್ತಾನೆ, ಸಾಹುಕಾರರ ಸಾಲದ ಪಾಶಕ್ಕೆ ಬೀಳುತ್ತಾನೆ. ಈ ನೇಣುಪಾಶ ಬಿಗಿಯಾದಂತೆಲ್ಲ ಕೃಷಿಯಿಂದ ಹಾನಿಗೊಳಗಾದಂತೆಲ್ಲ ರೈತ ಆತ್ಮಹತ್ಯೆಯ ದಾರಿ ತುಳಿಯುತ್ತಾನೆ. ಈ ಗಂಭೀರ ಸಮಸ್ಯೆಯ ಕುರಿತು ಬಾಬಾಸಾಹೇಬರ ಗುರು ಮಹಾತ್ಮ ಜ್ಯೋತಿಬಾ ಫುಲೆಯವರು ಸಾಕಷ್ಟು ವಿಚಾರ, ವಿಶ್ಲೇಷಣೆ ಮಾಡಿದ್ದಾರೆ. ಮಹಾಮಾರಿ ಊರು ಹೊಕ್ಕಾಗ, ಬೆಲೆಗಳು ಗಗನಕ್ಕೇರಿದಾಗ, ಅತಿವೃಷ್ಟಿಯಾದಾಗ ಮತ್ತು ಭಯಂಕರ ಬರ ಬಿದ್ದಾಗ ರೈತರು, ಬರೀ ರೈತರೇ ಏಕೆ ಸಾಯುತ್ತಾರೆ? - ಎಂಬುದು ಫುಲೆಯವರ ಪ್ರಶ್ನೆಯಾಗಿತ್ತು. ಅವರು ಈ ಪ್ರಶ್ನೆಗಳಿಗೆ ಉತ್ತರವನ್ನೂ ಹೇಳಿದ್ದಾರೆ. ಬಾಬಾಸಾಹೇಬರು ಇನ್ನೊಂದು ಹೆಜ್ಜೆ ಮುಂದೆ ಹೋಗಿ ಈ ಸಮಸ್ಯೆಯ



ಮೂಲವನ್ನೇ ಕೆದಕಿದರು. ಕೃಷಿಯನ್ನು ಉದ್ಯೋಗವೆಂದು ನೋಡಲಾಗುತ್ತಿಲ್ಲ, ಉದ್ಯೋಗ-ದಂಧೆಗಳಿಗೆ ಸರಕಾರ ನೀಡುವ ಸವಲತ್ತು-ಸೌಲಭ್ಯಗಳನ್ನೂ ಕೃಷಿಗೆ ನೀಡಲಾಗುತ್ತಿಲ್ಲ, ಅತ್ಯಂತ ನಗಣ್ಯ ಪ್ರಮಾಣದ ಸಹಾಯ ನೀಡಿದರೂ ಅದು ಯೋಗ್ಯವಾದ ಸಮಯಕ್ಕೆ ತಲುಪುವುದಿಲ್ಲ. ಇವೆಲ್ಲದರ ಪರಿಣಾಮವೆಂದರೆ ಕೃಷಿ ಒಂದು ರೀತಿಯಲ್ಲಿ ಜೂಜಿನಾಟವಾಗುತ್ತದೆ. ಉದಾಹರಣೆಗೆ, ಒಮ್ಮೊಮ್ಮೆ ಈರುಳ್ಳಿಯ ಬೆಲೆ ಗಗನಕ್ಕೇರುತ್ತದೆ. ಆದರೆ ಹಲವಾರು ಬಾರಿ ಈರುಳ್ಳಿಗೆ ಕಿಂಚಿತ್ತೂ ಬೆಲೆ ದೊರೆಯದೆ ರೈತರು ರಸ್ತೆಯ ಮೇಲೆ ಚೆಲ್ಲುವ ಪ್ರಸಂಗಗಳು ಜರುಗುತ್ತವೆ. ಸಮಾಜದಲ್ಲಿ ಮತ್ತು ರಾಜಕೀಯ ವಲಯದಲ್ಲಿ ಈ ಬಗ್ಗೆ ಒತ್ತಡ ನಿರ್ಮಾಣವಾದಾಗ ಮಾತ್ರ ಸರಕಾರ ಈರುಳ್ಳಿ ಖರೀದಿಸಲು ಮುಂದಾಗುತ್ತದೆ. ಆದರೆ ಅದೇನು ಶಾಶ್ವತವಾದ ಹಾಗೂ ಮೂಲಭೂತವಾದ ಪರಿಹಾರವಾಗಿರುವುದಿಲ್ಲ. ಅದು ಜನಪ್ರಿಯತೆಗಾಗಿ ಆ ಸಂದರ್ಭದಲ್ಲಿ ಬಳಸಿದ ತಂತ್ರ, ಅಷ್ಟೆ. ಆದರೆ ಮೂಲತಃ ಈರುಳ್ಳಿಯ ಬೆಲೆ ಕುಸಿಯದಂತೆ ನೋಡಿಕೊಳ್ಳುವ ಶಾಶ್ವತ ವ್ಯವಸ್ಥೆಯೊಂದರ ಅವಶ್ಯಕತೆ ಇದೆ. ಐಸ್ಕ್ರೀಂನ ಬೆಲೆ, ಬಟ್ಟೆಗಳ ಬೆಲೆ ಎಂದೂ ಕುಸಿಯುವುದಿಲ್ಲ, ಹೀಗಿರುವಾಗ ಈರುಳ್ಳಿಗಷ್ಟೇ ಏಕೆ ಈ ಕುಸಿತ ಮತ್ತು ರೈತನ ಉತ್ಪಾದನೆಗಳಿಗಷ್ಟೇ ಏಕೆ ಬೆಲೆ ಕುಸಿತ? - ಎಂಬುದನ್ನು ಗಂಭೀರವಾಗಿ ಚಿಂತಿಸಬೇಕಿದೆ, ಅರ್ಥೈಸಿಕೊಳ್ಳಬೇಕಿದೆ. ಆದ್ದರಿಂದ ಬಾಬಾಸಾಹೇಬರು ಕೃಷಿ ಮತ್ತು ಉದ್ಯೋಗ-ದಂಧೆಗಳು ಸಮನಾಗಿ ವಿಕಸಿತಗೊಳ್ಳಬೇಕು ಎಂದು ಏಕೆ ಹೇಳಿದ್ದಾರೆ ಎಂಬುದು ಮನದಟ್ಟಾಗುತ್ತದೆ.

**ಕೃಷಿ ಮತ್ತು ಆಧುನಿಕತೆ**

ಬಾಬಾಸಾಹೇಬರು ಕೃಷಿ ಮತ್ತು ಆಧುನಿಕತೆಗಳ ನಡುವೆ ಸಂಪರ್ಕ ಏರ್ಪಡಿಸುವ ಪ್ರಯತ್ನ ಮಾಡಿದರು. ಕೃಷಿಗೆ ಸಂಬಂಧಿಸಿದಂತೆ ಇನ್ನೊಂದು ಅಂಶವೆಂದರೆ, ಕೃಷಿಯನ್ನು ಅವಲಂಬಿಸಿರುವ ಜನರ ಸಂಖ್ಯೆ ಗಮನಾರ್ಹವಾಗಿ ಹೆಚ್ಚಾಗುತ್ತ ಸಾಗಿದೆ. ಆದರೆ ಆ ಪ್ರಮಾಣಕ್ಕೆ ತಕ್ಕಂತೆ ಉತ್ಪನ್ನ ಮಾತ್ರ ಹೆಚ್ಚಾಗಲಿಲ್ಲ. ಕೃಷಿಯ ಮೇಲಿನ ಭಾರವನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡಬೇಕಾದರೆ ಔದ್ಯೋಗೀಕರಣ ವೃದ್ಧಿಸಬೇಕು. ಹೀಗೆ ಹೇಳುವ ಸಂದರ್ಭದಲ್ಲಿಯೂ ಅಂಬೇಡ್ಕರ್‌ರು ಒತ್ತುಕೊಟ್ಟು ಹೇಳಿದ್ದೇನೆಂದರೆ, ಕೃಷಿ ಮತ್ತು ಔದ್ಯೋಗೀಕರಣಗಳ ವಿಕಾಸದಲ್ಲಿ ಅಸಮಾನತೆ ಇರಬಾರದು ಎಂದು. ಕೃಷಿಯ ಮೇಲೆ ಅವಲಂಬಿತರಾದವರ ಭಾರವನ್ನು ಕಡಿಮೆ ಮಾಡಿದರೆ ಸ್ವಾಭಾವಿಕವಾಗಿಯೇ ಉತ್ಪನ್ನ ಹೆಚ್ಚಾಗುತ್ತದೆ, ಗ್ರಾಮೀಣ ಪ್ರದೇಶಗಳ ವಿಕಾಸಕ್ಕೆ ಒಂದಿಷ್ಟು ಸಹಕಾರವಾಗುತ್ತದೆ. ಒಟ್ಟು ಜನಸಂಖ್ಯೆ ಕೃಷಿಯನ್ನು ಅವಲಂಬಿಸುವುದು ಸಾಧ್ಯವಿಲ್ಲ. ವಿಕಾಸದ, ಪ್ರಗತಿಯ ಭಿನ್ನ, ವಿಭಿನ್ನ ಮಾರ್ಗಗಳ ಶೋಧವೂ ಈಗ ಅನಿವಾರ್ಯವಾಗಿದೆ. ಉದ್ಯೋಗ ದಂಧೆಗಳಿಗೆ ಸರಕಾರದಿಂದ ಸವಲತ್ತು ಸೌಲಭ್ಯಗಳು ದೊರೆಯುವಂತೆಯೇ ಕೃಷಿಗೂ ಸಹಾಯಹಸ್ತ ದೊರೆಯಬೇಕು. ತುಂಡು ಭೂಮಿಯ ಕೃಷಿ ಬಹುಕಾಲದವರೆಗೆ ಸೂಕ್ತವಲ್ಲ ಹಾಗೂ ಲಾಭದಾಯಕವೂ ಅಲ್ಲ. ತುಂಡು ಭೂಮಿಯ ಕೃಷಿಯಲ್ಲಿ ಬಂಡವಾಳ, ಉಳುಮೆ ಮತ್ತು ಉತ್ಪನ್ನಗಳ ಸಮತೋಲನ ಸಾಧಿಸಲಾಗದೆ ಗಂಭೀರ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಆ ಎಲ್ಲ ಸಮಸ್ಯೆಗಳಿಂದ ಮುಕ್ತಿ ಪಡೆಯಲೆಂದು ತುಂಡು ಕೃಷಿಯ ಬದಲಿಗೆ ಸಮೂಹ ಕೃಷಿ ಅಥವಾ ಸಮುದಾಯ ಕೃಷಿಯ ಪರ್ಯಾಯ ಮಾರ್ಗವನ್ನು ಅಂಬೇಡ್ಕರ್ ತೋರಿಸಿದ್ದಾರೆ.

**ಬಹು ಉದ್ದೇಶೀಯ ಯೋಜನೆಗಳು**

ಕೃಷಿ ಮತ್ತು ಉದ್ಯೋಗಗಳ ವಿಕಾಸವಾಗಬೇಕಾದರೆ ನೀರು, ವಿದ್ಯುತ್, ಸಾರಿಗೆ ಮತ್ತು ನೀರಾವರಿಯಂತಹ ಅಂಶಗಳು ಮಹತ್ವದ್ದಾಗಿವೆ. ಭಾರತದಲ್ಲಿ ಅಪಾರ ಮಟ್ಟದಲ್ಲಿ ನೀರು ಇದೆ, ಸೂಕ್ತವಾದ ಗಾಳಿ ಇದೆ, ಸಾಕಷ್ಟು ಬಿಸಿಲೂ ಇದೆ, ಸುಂದರ ಹಾಗೂ ಸಮರ್ಪಕವಾದ ಋತುಗಳಿವೆ. ಹಲವಾರು ನದಿಗಳು ಹಾಗೂ ಸಮುದ್ರದ ಸಾನ್ನಿಧ್ಯವೂ ಇದೆ. ಇವೆಲ್ಲವನ್ನು ಬಳಸಿಕೊಂಡು ಸಾಕಷ್ಟು ವಿದ್ಯುತ್ ತಯಾರಿಸಬೇಕು ಹಾಗೂ ಅವಶ್ಯಕತೆ ಇರುವಷ್ಟು ಪ್ರಮಾಣದಲ್ಲಿ ಪೂರೈಸಬೇಕು. ಯಾವುದೇ ಒಂದು ಯೋಜನೆಯನ್ನು ಸಿದ್ಧಪಡಿಸುವಾಗ ಅದು ಹಲವಾರು ಉದ್ದೇಶಗಳನ್ನು ಹೊಂದಿರುವಂತೆ ನಿಯೋಜನೆ ಮಾಡಬೇಕು. ಒಂದು ಅಣೆಕಟ್ಟು ಕಟ್ಟುವ ಯೋಜನೆ ಇದ್ದು, ಅದರ ಮೂಲಕ ಕೃಷಿಗೆ ನೀರು ಒದಗಿಸುವ ಉದ್ದೇಶ ಇರುವಂತೆಯೇ ವಿದ್ಯುತ್ ನಿರ್ಮಾಣ ಮತ್ತು ಜಲಸಾರಿಗೆಯ ಪರ್ಯಾಯಗಳ ಬಗೆಗೂ ಯೋಚಿಸುವುದೂ ಅಷ್ಟೇ ಮಹತ್ವದ್ದಾಗಿದೆ ಎಂಬುದು ಅಂಬೇಡ್ಕರ್‌ರ ಧೋರಣೆಯಾಗಿತ್ತು. ಜಲಸಾರಿಗೆ ಬಹಳ ಕಡಿಮೆ ಖರ್ಚಿನದು. ಅಲ್ಲದೆ, ಜಲಸಾರಿಗೆಯ ಯೋಜನೆಗಳ ಮೇಲೆ ಬಾರಿ ಬಾರಿ ಬಂಡವಾಳ ತೊಡಗಿಸುವ ಅವಶ್ಯಕತೆ ಇರುವುದಿಲ್ಲ. ಆದ್ದರಿಂದ ವಿದ್ಯುತ್, ಸಾರಿಗೆ ಮತ್ತು ನೀರಾವರಿ ಹೀಗೆ ತ್ರಿವಿಧ ಸೂತ್ರವನ್ನು ಅನ್ವಯಿಸಿ ಇಂತಹ ಯೋಜನೆಗಳನ್ನು ರೂಪಿಸಬೇಕು. ಇಂಥ ಯೋಜನೆಗಳ ಅನುಷ್ಠಾನದ ಸಂದರ್ಭದಲ್ಲಿ ಉಂಟಾಗುವ ಸಂಘರ್ಷ, ಸಮಸ್ಯೆಗಳನ್ನು ನಿರ್ವಹಿಸಲು, ಪರಿಹರಿಸಲು ಸೂಕ್ತವಾದ ಪ್ರಾಧಿಕಾರದ ವ್ಯವಸ್ಥೆ ಇರಬೇಕು. ನೀರಿನ ಸಮಸ್ಯೆಯ ಕುರಿತಾದ ವಾದಗಳು ವೃದ್ಧಿಸದಂತೆ, ಆ ಕಾರಣದಿಂದಾಗಿ ಯೋಜನೆಗಳು ಸ್ಥಗಿತಗೊಳ್ಳದಂತೆ ಮತ್ತು ನಿರ್ಮಾಣದ ವೇಗ ಕುಂಠಿತವಾಗದಂತೆ ಎಚ್ಚರಿಕೆ ವಹಿಸಲೇಬೇಕು. ಈ ನಿಟ್ಟಿನಲ್ಲಿ ರಾಜ್ಯಗಳಿಗೆ ಎಷ್ಟು ಸ್ವಾಯತ್ತತೆಯನ್ನು ನೀಡಬೇಕು ಹಾಗೂ ಕೇಂದ್ರವು ಯಾವ ಭೂಮಿಕೆಯನ್ನು ನಿರ್ವಹಿಸಬೇಕು ಎಂಬ ಹಲವಾರು ಅಂಶಗಳ ಕುರಿತು ಬಾಬಾಸಾಹೇಬರು ಅತ್ಯಂತ ನಿಖರವಾದ ತಥ್ಯಗಳನ್ನು ಗುರುತಿಸಿದ್ದರು. ಈ ಎಲ್ಲ ಯೋಜನೆಗಳಲ್ಲಿ ಆಧುನಿಕ ತಂತ್ರಜ್ಞಾನದ ಸಮಾವೇಶ ಇರಲೇಬೇಕು ಎಂದುಕೊಂಡು ಇಲ್ಲಿನ ಎಂಜಿನಿಯರ್‌ಗಳನ್ನು ವಿದೇಶಗಳಿಗೆ ಕಳುಹಿಸಿ ಯೋಗ್ಯವಾದ ತರಬೇತಿ ಹಾಗೂ ಪ್ರಶಿಕ್ಷಣ ಕೊಡಿಸುವ ವಿಚಾರದ ಕುರಿತು ಅವರು ತಮ್ಮ ಮತ ಮಂಡಿಸಿದ್ದರು. ಕೃಷಿಯಲ್ಲಿ ಬರೀ ಮನುಷ್ಯಬಲವನ್ನಷ್ಟೇ ತೊಡಗಿಸದೆ ದೊಡ್ಡ ಪ್ರಮಾಣದ ಬಂಡವಾಳವನ್ನೂ ತೊಡಗಿಸಬೇಕು, ಬರೀ ಮನುಷ್ಯಬಲವನ್ನು ಹೆಚ್ಚಿಸುವುದರಿಂದ ತಲಾ ಆದಾಯ ಕಡಿಮೆಯಾಗುತ್ತದೆ, ವಿಶೇಷ ಸಂದರ್ಭಗಳಲ್ಲಿ ಮನುಷ್ಯಬಲವನ್ನು ಕಡಿಮೆಮಾಡಿ ಬಂಡವಾಳ ಹೆಚ್ಚಿಸಬೇಕು ಎಂದು ಅವರು ಸೂಚಿಸಿದ್ದಾರೆ. ವಾಸ್ತವದಲ್ಲಿ ದೇಶದ ಬಜೆಟ್‌ನಲ್ಲಿ ಕೃಷಿಕ್ಷೇತ್ರಕ್ಕೆ ತೊಡಗಿಸುವ ಬಂಡವಾಳ ಬಸವನಹುಳುವಿನಂತೆ ನಿಧಾನಗತಿಯಿಂದ ವೃದ್ಧಿಸುತ್ತಿದೆ. ಇದರ ಪರಿಣಾಮವಾಗಿ ದೇಶದ ನೀರಾವರಿ ಕ್ಷಮತೆ ಇಂದೂ ಕೂಡ ೫-೬%ಕ್ಕಿಂತ ಮುಂದುವರಿದಿಲ್ಲ.

**ನದಿಜೋಡಣೆ ಯೋಜನೆ ಕುರಿತು ಬಾಬಾಸಾಹೇಬ**

ಕಳೆದ ಹಲವಾರು ವರ್ಷಗಳಿಂದ ನಾವು ನದಿಜೋಡಣೆ ಯೋಜನೆಯ ಬಗ್ಗೆ ಚರ್ಚಿಸುತ್ತಿದ್ದೇವೆ, ಇದು ಒಳ್ಳೆಯ ಅಂಶ. ಆದರೆ ಈ ಬಗ್ಗೆ ಹಲವಾರು ಅನುಷ್ಠಾನಾರ್ಹ ಅಂಶಗಳನ್ನು ಬಾಬಾಸಾಹೇಬರು ನೂರು ವರ್ಷಗಳಿಗಿಂತಲೂ ಮೊದಲೇ ಗುರುತಿಸಿ ಪ್ರಸ್ತುತಪಡಿಸಿದ್ದಾರೆ. ನಮ್ಮಲ್ಲಿರುವ ದೊಡ್ಡ ನದಿಗಳು ಪ್ರತಿವರ್ಷ ೧,೧೧,೦೧೩ ದಶಲಕ್ಷ ಘನಮೀಟರ್ ನೀರನ್ನು ಸಮುದ್ರಕ್ಕೆ ಸೇರಿಸುತ್ತವೆ. ಈ ಸಂಪೂರ್ಣ ನೀರನ್ನು ಬಹುಉದ್ದೇಶೀಯ (ವಿದ್ಯುತ್, ಸಾರಿಗೆ, ನೀರಾವರಿ) ದೃಷ್ಟಿಯಿಂದ ಬಳಸಲು ಸಾಧ್ಯವಾದರೆ ಖಂಡಿತವಾಗಿಯೂ ವಿಕಾಸ ಸಾಧ್ಯವಿದೆ ಎಂಬುದರ ಬಗ್ಗೆ ಅವರಿಗೆ ವಿಶ್ವಾಸವಿತ್ತು. ನೈಸರ್ಗಿಕ ಸಂಪನ್ಮೂಲಗಳನ್ನು ಆಧುನಿಕ ಜ್ಞಾನದ ಆಧಾರದ ಮೇಲೆ ಯೋಗ್ಯ ರೀತಿಯಲ್ಲಿ ಬಳಸುವುದನ್ನು ರೂಢಿಸಿಕೊಳ್ಳಬೇಕು. ಇಲ್ಲಿ ಅವರು ಬಳಸಿರುವ 'ಬಹುಉದ್ದೇಶೀಯ' ಎಂಬ ಶಬ್ದ ಬಲು ಮಹತ್ವದ್ದು. ರೈಲು ಸಾರಿಗೆಗೆ ಪರ್ಯಾಯವಾಗಿ ಜಲಸಾರಿಗೆ ಇರಬೇಕು ಹಾಗೂ ಅದನ್ನು ಅಷ್ಟು ಪ್ರಮಾಣದಲ್ಲಿ ಅಭಿವೃದ್ಧಿಪಡಿಸುವುದು ಸಾಧ್ಯವಿದೆ ಎಂಬುದು ಅವರ ಅಭಿಪ್ರಾಯವಾಗಿತ್ತು. ಕೃಷಿ ಮತ್ತು ಅದರ ವಿಕಾಸಕ್ಕೆಂದು ಬಾಬಾಸಾಹೇಬರು 'ಜಲ ಆಯೋಗ'ವನ್ನು ಸ್ಥಾಪಿಸಿದ್ದರು.

ಮರಾಠಿ ಮೂಲ : **ಉತ್ತಮ ಕಾಂಬಳೆ** ಕನ್ನಡಕ್ಕೆ : **ಗಿರೀಶ ಚಂದ್ರಕಾಂತ ಜಕಾಪುರೆ**
ನಂ. ೧೭೬೫, 'ಶಾರದ ನಿವಾಸ', ಮೈಂದರಗಿ ಪೋಸ್ಟ್, ಅಕ್ಕಲಕೋಟೆ ತಾ॥
ಸೊಲ್ಲಾಪುರ ಜಿಲ್ಲೆ, ಮಹಾರಾಷ್ಟ್ರ - ೪೧೩೨೧೭

# ಜಾಗತೀಕರಣ ಸಂದರ್ಭದ ಸಣ್ಣಕಥೆಗಳ ಆಶಯ

ಗಂಗಾಧರ ಈ. ಮಾಸನಕಟ್ಟಿ

> ಈ ಹಿಂದೆ ಹೆಚ್ಚಾಗಿ ಕಾಣಿಸಿಕೊಂಡಿದ್ದ ಸಾಂಪ್ರದಾಯಿಕತೆ, ಕಾಲ್ಪನಿಕತೆಯ ಮೆರಗು ಹಾಗೂ ಅವುಗಳನ್ನು ಕುರಿತಾದ ಪ್ರತಿರೋಧ ಆಧುನಿಕೋತ್ತರದಲ್ಲಿ ಗೌಣವಾಗಿದೆ. ನೇರವಾಗಿ ವಾಸ್ತವ ಚಿತ್ರಣಗಳನ್ನೆ ಮುಖ್ಯವಾಗಿರಿಸಿಕೊಂಡ ಆಧುನಿಕೋತ್ತರ ಕನ್ನಡ ಸಣ್ಣಕಥೆಗಳು ಅವುಗಳನ್ನೆ ಕಥಾಹಂದರವನ್ನಾಗಿಸಿ ಕೊಂಡಿವೆ. ಜಾಗತೀಕರಣದ ಪ್ರಭಾವದಿಂದಾಗಿ ನವಸಮಾಜದಲ್ಲಿ ಉಂಟಾಗುತ್ತಿರುವ ಉದ್ವಿಗ್ನತೆಗಳು, ಅನಾರೋಗ್ಯ, ಕೋಮುವಾದ, ಆಂತರಿಕ ಸಂಘರ್ಷ, ಮಾನವ ಸಂಬಂಧದ ಆಂತರಿಕ ವಿಘಟನೆ, ವ್ಯಾಪಾರ ಮನೋವೃತ್ತಿ, ವೈಯಕ್ತಿಕ ಬೆಳವಣಿಗೆಗೆ ಪ್ರೋತ್ಸಾಹ ನೀಡುವ ವಾತಾವರಣ ಹಾಗೂ ಮಾನವ ಆಕರ್ಷಣೆಯ ಕೇಂದ್ರಗಳು ಮುಂತಾದವುಗಳನ್ನು ಕುರಿತು ಚರ್ಚಿಸುವ ಹೊಸ ಹಾದಿಯನ್ನು ತುಳಿದಿವೆ. ಇದು ಜಗತ್ತಿನ ಸೂಕ್ಷ್ಮಾತಿ ಸೂಕ್ಷ್ಮ ಸಂಗತಿಗಳನ್ನು ಬಯಲುಗೊಳಿಸಲು ಕಂಡುಕೊಂಡ ಮಾರ್ಗವೆಂದೇ ಹೇಳಬಹುದಾಗಿದೆ. ಇಂತಹ ಹೊಸ ಹೆಜ್ಜೆಯಡಿಗೆ ದಾಪುಗಾಲಿಟ್ಟಿರುವ ಹೊಸತಲೆಮಾರಿನ ಬಹುತೇಕ ಕಥೆಗಳು ಇದನ್ನು ಮೈಗೂಡಿಸಿಕೊಂಡಿವೆ.

ಆಧುನಿಕೋತ್ತರ ಕನ್ನಡ ಸಾಹಿತ್ಯವು ಅದರದೆ ಆದ ವಿಶಿಷ್ಟತೆಯನ್ನು ಹೊಂದಿದೆ. ಕಾವ್ಯ, ಕಥೆ, ಕಾದಂಬರಿ, ನಾಟಕ, ವಿಮರ್ಶೆಗಳಂಥ ವಿವಿಧ ಆಧುನಿಕ ಸಾಹಿತ್ಯ ಪ್ರಕಾರಗಳನ್ನೇ ಮೈಗೂಡಿಸಿದ್ದರೂ ಅವುಗಳಲ್ಲಿ ಬಳಸಲಾದ ವಿಷಯವಸ್ತು, ವಿಚಾರಧಾರೆಗಳು ಆಧುನಿಕ ಕಾಲದ ವಿವಿಧ ಚಳುವಳಿಗಿಂತ ವಿಭಿನ್ನವಾಗಿವೆ. ಅತಿಯಾದ ಮಾಹಿತಿ ತಂತ್ರಜ್ಞಾನದ ಬಳಕೆಯಿಂದಾಗಿ ಮಾನವನ ಬದುಕಿನ ವಿನ್ಯಾಸ ಬದಲಾವಣೆಯನ್ನು ಕಂಡಿದ್ದು, ಅದರ ವಿವಿಧ ಮಗ್ಗಲುಗಳನ್ನು ಆಧುನಿಕೋತ್ತರ ಸಾಹಿತ್ಯವು ಬಿಂಬಿಸುತ್ತಿದೆ. ಜಾಗತಿಕ ಮಟ್ಟದಲ್ಲಿ ಏರ್ಪಟ್ಟ ಆರ್ಥಿಕ ಒಲವು, ವ್ಯಾಪಾರ–ವಹಿವಾಟು, ಸಮಯದ ಒತ್ತಡ, ಅಂತರರಾಷ್ಟ್ರಗಳ ಸಮನ್ವಯ ಮೊದಲಾದ ಕಾರ್ಯ ಚಟುವಟಿಕೆಗಳು ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಹಾಗೂ ಸಾಂಸ್ಕೃತಿಕವಾಗಿ ಬಹುದೊಡ್ಡ ಪರಿಣಾಮ ಗಳನ್ನು ಸೃಷ್ಟಿಸಿವೆ. ಉದಾರೀಕರಣ, ಖಾಸಗೀಕರಣ ಹಾಗೂ ಜಾಗತೀಕರಣಗಳಂತಹ ಪ್ರಮುಖ ಪ್ರವೃತ್ತಿಗಳ ಅಳವಡಿಕೆ ಇಂಥದ್ದೊಂದು ಸೃಷ್ಟಿಗೆ ಕಾರಣವಾಗಿದೆ. ಹೀಗಾಗಿಯೇ ಇಂದು ಜಾಗತೀಕರಣದ ಕುರಿತು ಹಲವಾರು ವಿಷಯಗಳು ಅಂತರರಾಷ್ಟ್ರೀಯ ಮಟ್ಟದಲ್ಲಿ ಬಹುದೊಡ್ಡ ಚರ್ಚೆಗೆ ಗ್ರಾಸವಾಗುತ್ತಿವೆ. ಇದಕ್ಕೆ ಕನ್ನಡ ಸಾಹಿತ್ಯವೂ ಹೊರತಾಗಿಲ್ಲ. ಈ ಕಾಲಘಟ್ಟದ ಕಥೆಗಳು ಸಮಾಜ, ಅರ್ಥವ್ಯವಸ್ಥೆ, ರಾಜಕೀಯ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು ಪ್ರಾದೇಶಿಕತೆಯಿಂದ ದೂರಸರಿಯುತ್ತಿವೆ ಎಂಬ ನಿಲುವನ್ನು ಸ್ಪಷ್ಟಪಡಿಸುತ್ತವೆ. ಅದರಲ್ಲೂ ಕನ್ನಡ ಸಾಹಿತ್ಯದ ಕಾವ್ಯ ಮತ್ತು ಸಣ್ಣಕಥೆಗಳು ಸಮಕಾಲೀನ ಜನರ ಆಶೋತ್ತರಗಳನ್ನು ಸಮರ್ಪಕವಾಗಿ ಬಿಂಬಿಸುವಲ್ಲಿ ಯಶಸ್ಸನ್ನು ಪಡೆದುಕೊಂಡಿವೆ.

ಈ ಕಾಲದ ಕನ್ನಡ ಸಣ್ಣಕಥೆಯ ಸ್ವರೂಪವನ್ನು ವಿವೇಚಿಸಿದಾಗ, ಅದರ ಎರಡು ಮುಖ್ಯ ಲಕ್ಷಣಗಳು ಗೋಚರವಾಗುತ್ತವೆ. ಮೊದಲನೆಯದು, ಪರಿವರ್ತನೆಯ ಪ್ರಕ್ರಿಯೆಯನ್ನು ಹಿಡಿದಿಡುವ ಬಲವಾದ ಪ್ರಯತ್ನ. ಕಳೆದ ಎರಡೂವರೆ ದಶಕದ ಕನ್ನಡ ಸಣ್ಣಕಥೆ ನಡೆದು ಬಂದ ದಾರಿಯನ್ನು ಅವಲೋಕಿಸಿದರೆ ಈ ಪ್ರಕ್ರಿಯೆ ಹಲವಾರು ಆಯಾಮಗಳಲ್ಲಿ, ಅಂದರೆ ಸಾಮಾಜಿಕ, ರಾಜಕೀಯ, ಆರ್ಥಿಕ ಹಾಗೂ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ಗೋಚರವಾಗುತ್ತದೆ. ಅದರಲ್ಲೂ ಸಮಕಾಲೀನ ಸಂದರ್ಭದಲ್ಲಿ ಮನುಷ್ಯಲೋಕ ವ್ಯಕ್ತಿಗತ, ಕೌಟುಂಬಿಕ, ಗ್ರಾಮೀಣ, ನಗರ ಸಮುದಾಯ ಹಾಗೂ ರಾಷ್ಟ್ರ ಬದುಕಿನಲ್ಲಿ ಎದುರಿಸುತ್ತಿರುವ ಬಿಕ್ಕಟ್ಟುಗಳನ್ನು ಕಥಾಹಂದರವನ್ನಾಗಿಸಿ ಅಲ್ಲಿಯ ಬದಲಾವಣೆ ಪ್ರಕ್ರಿಯೆಯನ್ನು ಪ್ರತಿಬಿಂಬಿಸುತ್ತದೆ. ಎರಡನೆಯ ಲಕ್ಷಣವೆಂದರೆ, ಕನ್ನಡ ಸಣ್ಣಕಥೆಯ ಮೂಲಕ ಸಾಂಸ್ಕೃತಿಕ ಸಂವಾದವನ್ನು ನಡೆಸುವುದು, ತನ್ಮೂಲಕ ಆಗಬಹುದಾದ ಪರಿಣಾಮಗಳನ್ನು ಕುರಿತು ಚರ್ಚಿಸುತ್ತದೆ. ಕನ್ನಡ ಕಥೆಗಾರರು ಕೇವಲ ಅನುಕರಣಶೀಲರಾಗಿಲ್ಲ. ಸಣ್ಣಕಥೆಯ ರೂಪದಲ್ಲಿ ಅವರು ಪ್ರಕೃತಿ – ಪ್ರಾದೇಶಿಕತೆಗಳ ಜೊತೆಗೆ ಮನುಷ್ಯ ನಡೆಸುವ ಸಂವಾದವನ್ನೇ ಸಾಹಿತ್ಯದಲ್ಲಿ ಅಭಿವ್ಯಕ್ತಿಸಿದ್ದಾರೆ. ಜಾಗತೀಕರಣದಿಂದ ಮನುಷ್ಯರನ್ನಾಳುತ್ತಿರುವ ಸ್ವಾರ್ಥ ಸ್ವಭಾವವು ಪ್ರಕೃತಿ, ಪ್ರಾದೇಶಿಕತೆಯಿಂದ ಅವರನ್ನು ವಿಮುಖರನ್ನಾಗಿಸುತ್ತಿರುವ ಪ್ರಕ್ರಿಯೆಯನ್ನು ಅನಾವರಣ ಮಾಡುತ್ತಿದೆ.

ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖ ಘಟ್ಟಗಳಾದ ನವೋದಯ, ಪ್ರಗತಿಶೀಲ, ನವ್ಯ ಹಾಗೂ ದಲಿತ ಬಂಡಾಯಗಳು ಈಗಾಗಲೇ ಸಮಾಜದ ವಿಭಿನ್ನ ನೆಲೆಗಳನ್ನು ಪರಿಚಯಿಸಿವೆ. ಆದರೆ ಅವುಗಳಲ್ಲಿ ಕೆಲವು ಅಂಶಗಳು ಮಾತ್ರ ಗಣನೀಯ ಪ್ರಮಾಣದಲ್ಲಿ ಕಾಣಿಸಿಕೊಳ್ಳುವ ಮೂಲಕ ಆಯಾ ಕಾಲಮಾನದ ವಸ್ತುಸ್ಥಿತಿಯನ್ನು ಪ್ರತಿನಿಧಿಸಲು ಪ್ರಯತ್ನಿಸಿವೆ. ಕನ್ನಡ ಸಾಹಿತ್ಯವು ನವೋದಯ ಸಂದರ್ಭದಲ್ಲಿ ಪ್ರಕೃತಿ ಸೌಂದರ್ಯ, ವಿಸ್ಮಯತೆ ಹಾಗೂ ಮಾನವನ ಸಂಬಂಧದ ಗಾಢತೆಯನ್ನು ಪ್ರತಿನಿಧಿಸಿದರೆ, ಪ್ರಗತಿಶೀಲದಲ್ಲಿ ಸ್ವಾತಂತ್ರ್ಯದ ನಿಲುವು, ವರ್ಗ ಸಮಾನತೆಯ ಒಲುವುಗಳನ್ನು ಕಾಣಬಹುದು. ನವ್ಯದಲ್ಲಿ ವ್ಯಕ್ತಿಕೇಂದ್ರ ಬದುಕಿನ ಚಿತ್ರಣಗಳು ಪ್ರಮುಖ ಸ್ಥಾನ ವಹಿಸಿಕೊಂಡಿವೆ. ಈ ಮೂರು ಘಟ್ಟಗಳಲ್ಲಿನ ಸಾಹಿತ್ಯಿಕ ನಡೆ ಸಮಾಜದ ಧನಾತ್ಮಕ ಹಾಗೂ ಋಣಾತ್ಮಕ ವಿಷಯಗಳ ಮಿಶ್ರ ಪ್ರತಿಕ್ರಿಯೆಯನ್ನು ಒಡ್ಡಿದರೂ, ತಲೆತಲೆಮಾರಿನಿಂದ ಮುಂದುವರಿಸಿ ಕೊಂಡು ಬಂದ ಧರ್ಮನಿಷ್ಠೆ, ಸಂಪ್ರದಾಯಕತ್ವಗಳ ಅಸ್ತಿತ್ವ ಜನಸಮುದಾಯದಿಂದ ಸಂಪೂರ್ಣವಾಗಿ ದೂರಸರಿಯಲು ಸಾಧ್ಯವಾಗಲಿಲ್ಲ. ದೇಸೀಯ ನೆಲೆಯಲ್ಲಿ ನಿಂತುಕೊಳ್ಳುವ ಇಂತಹ ಅಸ್ತಿತ್ವ ಆಂತರಿಕ ಭಿನ್ನಾಭಿಪ್ರಾಯಕ್ಕೆ ಎಡೆಮಾಡಿಕೊಟ್ಟಿತು. ದಲಿತ–ಬಂಡಾಯದಲ್ಲಿನ ಪ್ರತಿರೋಧದ ನಿಲುವು ಇಂತಹ ಆಂತರಿಕ ಭಿನ್ನಾಭಿಪ್ರಾಯಗಳನ್ನು ಸಮರ್ಥವಾಗಿ ಜನಮುಖಿಗೊಳಿಸಿತು. ಈ ಎಲ್ಲ ಸಾಹಿತ್ಯಿಕ ಘಟ್ಟಗಳಿಗಿಂತ ಭಿನ್ನ ನೆಲೆಯನ್ನು ಜಾಗತೀಕರಣ ಸಂದರ್ಭದ ಸಾಹಿತ್ಯ ಒಳಗೊಳ್ಳುತ್ತಿದೆ. ಕಾವ್ಯ, ಸಣ್ಣಕಥೆಗಳು ಈ ಹಂತದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಈ ಚರ್ಚೆಗಳು ಸಮಾಜದಲ್ಲಿನ ಋಣಾತ್ಮಕ ಚಟುವಟಿಕೆಗಳಿಗೆ ಹೆಚ್ಚು ಒತ್ತು ನೀಡಿದಂತಿದೆ. ಸಾಮಾಜಿಕ ಸ್ತರದ ಎಲ್ಲ ವಲಯಗಳನ್ನು ಪ್ರಶ್ನಾತೀತವಾಗಿ ಚರ್ಚಿಸುವ ಮೂಲಕ ಜಾಗತಿಕ ಪ್ರಜ್ಞೆಯನ್ನು ಸಮರ್ಥವಾಗಿ ತಿಳಿಸುವ ಪ್ರಯತ್ನವನ್ನು ಮಾಡುತ್ತಿದೆ. ಹೀಗಾಗಿ ನವೋದಯ, ಪ್ರಗತಿಶೀಲ, ನವ್ಯ, ದಲಿತ ಹಾಗೂ ಬಂಡಾಯಗಳಿಗಿಂತ ಜಾಗತೀಕರಣ ಸಂದರ್ಭದ ಸಾಹಿತ್ಯಿಕ ನೆಲೆ ಮತ್ತು ಮನೋಧೋರಣೆ ವಿಭಿನ್ನವಾಗಿದೆ.

ಈ ಹಿಂದೆ ಹೆಚ್ಚಾಗಿ ಕಾಣಿಸಿಕೊಂಡಿದ್ದ ಸಾಂಪ್ರದಾಯಿಕತೆ, ಕಾಲ್ಪನಿಕತೆಯ ಮೆರಗು ಹಾಗೂ ಅವುಗಳನ್ನು ಕುರಿತಾದ ಪ್ರತಿರೋಧ ಆಧುನಿಕೋತ್ತರದಲ್ಲಿ ಗೌಣವಾಗಿದೆ. ನೇರವಾಗಿ ವಾಸ್ತವ ಚಿತ್ರಣಗಳನ್ನೆ ಮುಖ್ಯವಾಗಿರಿಸಿಕೊಂಡ ಆಧುನಿಕೋತ್ತರ ಕನ್ನಡ ಸಣ್ಣಕಥೆಗಳು ಅವುಗಳನ್ನೆ ಕಥಾಹಂದರವನ್ನಾಗಿಸಿ ಕೊಂಡಿವೆ. ಜಾಗತೀಕರಣದ ಪ್ರಭಾವದಿಂದಾಗಿ ನವಸಮಾಜದಲ್ಲಿ ಉಂಟಾಗುತ್ತಿರುವ ಉದ್ವಿಗ್ನತೆಗಳು, ಅನಾರೋಗ್ಯ, ಕೋಮುವಾದ, ಆಂತರಿಕ ಸಂಘರ್ಷ, ಮಾನವ ಸಂಬಂಧದ ಆಂತರಿಕ ವಿಘಟನೆ, ವ್ಯಾಪಾರ ಮನೋವೃತ್ತಿ, ವೈಯಕ್ತಿಕ ಬೆಳವಣಿಗೆಗೆ ಪ್ರೋತ್ಸಾಹ ನೀಡುವ ವಾತಾವರಣ ಹಾಗೂ ಮಾನವ ಆಕರ್ಷಣೆಯ ಕೇಂದ್ರಗಳು ಮುಂತಾದವುಗಳನ್ನು ಕುರಿತು ಚರ್ಚಿಸುವ ಹೊಸ ಹಾದಿಯನ್ನು ತುಳಿದಿವೆ. ಇದು ಜಗತ್ತಿನ ಸೂಕ್ಷ್ಮಾತಿಸೂಕ್ಷ್ಮ ಸಂಗತಿಗಳನ್ನು ಬಯಲುಗೊಳಿಸಲು ಕಂಡುಕೊಂಡ ಮಾರ್ಗವೆಂದೇ ಹೇಳಬಹುದಾಗಿದೆ. ಇಂತಹ ಹೊಸ ಹೆಜ್ಜೆಯೆಡೆಗೆ ದಾಪುಗಾಲಿಟ್ಟಿರುವ ಹೊಸತಲೆಮಾರಿನ ಬಹುತೇಕ ಕಥೆಗಳು ಇದನ್ನು ಮೈಗೂಡಿಸಿಕೊಂಡಿವೆ. ಈ ಹಿನ್ನೆಲೆಯಲ್ಲಿ ಆಧುನಿಕ ಕನ್ನಡ ಸಣ್ಣಕಥೆಗಳ ವಿಷಯವಸ್ತುವಿಗೂ ಆಧುನಿಕೋತ್ತರ ಕನ್ನಡ ಸಣ್ಣಕತೆಗಳ ವಿಷಯವಸ್ತುವಿಗೂ ಆಂತರಿಕ ಸಾಮ್ಯತೆಯಲ್ಲಿ ಸಾಕಷ್ಟು ಅಂತರವಿರುವುದನ್ನು ಗುರುತಿಸಬಹುದಾಗಿದೆ.

ಇತ್ತೀಚಿನ ಸಣ್ಣಕಥೆಗಳ ಓದು ಮಾನವರ ವೈಯಕ್ತಿಕ ಮನೋಭಾವನೆಯಿಂದ ಹಿಡಿದು ಕುಟುಂಬ, ಗ್ರಾಮ, ನಗರ, ಸಮುದಾಯ ಹಾಗೂ ವಿಶ್ವ ಬದುಕಿನ ವಿವಿಧ ಮಗ್ಗಲುಗಳಲ್ಲಾದ ಬದಲಾವಣೆಯನ್ನು ಚರ್ಚಿಸುತ್ತವೆ. ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದಂತೆ; ಪ್ರತಿಯೊಂದು ಚಟುವಟಿಕೆಗಳಲ್ಲಿಯೂ ವ್ಯಾಪಾರ ಮನೋವೃತ್ತಿ ತಾಳಿರುವುದು, ಜಾಗತಿಕ ವ್ಯಕ್ತಿ ಬದುಕು ದೇಸೀಯತೆಯಿಂದ ವಿಮುಖಗೊಳ್ಳುತ್ತಿರುವುದು, ಕೆಲಸದ ಒತ್ತಡ, ಐಶಾರಾಮಿ ಬದುಕು, ಸ್ವಾರ್ಥ ಸಾಧನೆ ಮಾನವನನ್ನು ಮಾನಸಿಕ ಖಿನ್ನತೆಗೆ ಒಳಗಾಗುವಂತೆ ಮಾಡಿರುವುದು, ಮನುಷ್ಯ ಯಾಂತ್ರಿಕ ಬದುಕನ್ನು ಸಾಗಿಸುತ್ತಿರುವುದು ಹಾಗೂ ನಿಸರ್ಗದ ಮೇಲೆ ಮನುಷ್ಯನ ಅಟ್ಟಹಾಸ ನಿರಂತರವಾಗಿ ಎಗ್ಗಿಲ್ಲದೆ ಸಾಗುತ್ತಿರುವುದನ್ನು ಕಥೆಗಳು ನಿರೂಪಿಸುತ್ತವೆ. ಕುಟುಂಬದಲ್ಲಿನ ಬದ್ಧತೆ, ಸಾಂಪ್ರದಾಯಿಕತೆಗಳು ಇಲ್ಲವಾಗುತ್ತಿರುವುದು ಹಾಗೂ ಅವಿಭಕ್ತ ಕುಟುಂಬಗಳು ಸಂಪೂರ್ಣವಾಗಿ ನೆಲಕಚ್ಚಿರುವುದಲ್ಲದೆ ಸಂಬಂಧಗಳಲ್ಲಿ ಬಹುದೊಡ್ಡ ಬಿರುಕುಗಳು ನಿರ್ಮಾಣವಾಗುತ್ತಿರುವುದು ಕೌಟುಂಬಿಕ ಬದುಕನ್ನು ಅತಂತ್ರಗೊಳಿಸುತ್ತಿರುವುದರ ಸಂಕೇತ. ಅದರಂತೆ ಗ್ರಾಮೀಣ ಬದುಕು ವಿನಾಶದಂಚಿನ ಕಡೆಗೆ ಸಾಗುತ್ತಿರುವುದು, ಗ್ರಾಮೀಣ ಪ್ರದೇಶದ ಮೂಲ ವೃತ್ತಿಗಳು ನೆಲಕಚ್ಚುತ್ತಿರುವುದು ಮತ್ತು ಗ್ರಾಮೀಣ ಜನರ ಬದುಕು ನಗರ ಬದುಕಿನ ಕಡೆಗೆ ಹೆಚ್ಚಿನ ಒಲವು ತೋರಿಸುತ್ತಿರುವುದು ಇವನ್ನೆಲ್ಲ ಇತ್ತೀಚಿನ ಕನ್ನಡ ಸಣ್ಣಕಥೆಗಳು ನಿರೂಪಿಸುತ್ತವೆ. ಅಷ್ಟೇ ಅಲ್ಲದೆ, ನಗರೀಕರಣದಿಂದಾಗಿ ಜನಸಂಖ್ಯಾ ಸ್ಫೋಟ ಉಲ್ಬಣಗೊಳ್ಳುತ್ತಿರುವುದು, ನಗರಗಳು ಅನೈತಿಕ ಚಟುವಟಿಕೆಗಳ ತಾಣಗಳಾಗಿ ಮಾರ್ಪಾಡುಗಳಾಗುತ್ತಿರುವುದು, ಸಮುದಾಯಗಳ ಮಧ್ಯೆ ಕೋಮುವಾದ ಉಲ್ಬಣಗೊಳ್ಳುತ್ತಿರುವುದು, ಹೋರಾಟದ ಹಾದಿ ಅಹಿಂಸಾತ್ಮಕತೆಯಿಂದ ಆರಂಭವಾಗಿ ಹಿಂಸಾತ್ಮಕತೆಯೊಂದಿಗೆ ಅಂತ್ಯಗೊಳ್ಳುತ್ತಿರುವುದು, ಸಮುದಾಯಗಳಲ್ಲಿನ ಧಾರ್ಮಿಕ ಭಾವನೆ ವ್ಯಕ್ತಿಯ ವಿಕೃತ ಭಾವನೆಗಳಿಗೆ ಪ್ರಚೋದಿಸುತ್ತಿರುವಂತಿರುವುದು ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಸಮನ್ವಯ ಸಿದ್ಧಾಂತದ ಅಳವಡಿಕೆಯಿಂದಾಗಿ ಮತ್ತಷ್ಟು ಅಂತರ ಮತ್ತು ತಾರತಮ್ಯ ಭಾವನೆಗಳು ಸೃಷ್ಟಿಗೊಳ್ಳುತ್ತಿರುವುದು, ಜಾಗತಿಕ ಜಗತ್ತಿನ ಅಸಮಾನತೆಗೆ ಹಿಡಿದ ಕೈಗನ್ನಡಿಯಾಗಿದೆ. ಇದರ ಜೊತೆಗೆ ವಿಶ್ವಬದುಕನ್ನು ಗುರುತಿಸಿಕೊಳ್ಳುವಲ್ಲಿ ಮಾನವ ತನ್ನ ಮೂಲ ನೆಲೆಯನ್ನು ಕಳೆದುಕೊಳ್ಳುತ್ತಿರುವುದು ಆತ ಮತ್ತೆ ಅಲೆಮಾರಿ ಜೀವನದ ಕಡೆಗೆ ವಾಲುತ್ತಿರುವುದರ ಸಂಕೇತದಂತೆ ಭಾಸವಾಗುತ್ತದೆ. ಇಂತಹ ವಿಚಾರಗಳನ್ನು ಜಾಗತೀಕರಣ ಸಂದರ್ಭದ ಕನ್ನಡ ಸಣ್ಣಕಥೆಗಳು ತಮ್ಮ ಒಡಲೊಳಗೆ ಹೊತ್ತುಕೊಂಡು ಓದುಗನ ಮನಸ್ಸನ್ನು ಜಾಗೃತಗೊಳಿಸುವ ಪ್ರಯತ್ನದಲ್ಲಿ ತೊಡಗಿಕೊಂಡಿವೆ. ಇಂತಹ ಜಾಗೃತಿಯು ಇಂದಿನ ಸಮಾಜಕ್ಕೆ ಅನಿವಾರ್ಯವೂ ಆಗಿದೆ.

ಬದುಕು ಮತ್ತು ಸಾಹಿತ್ಯದ ಕುರಿತಾದ ಅಂತರ ಸಂಬಂಧದ ಚರ್ಚೆಗೆ ಸಾವಿರಾರು ವರುಷಗಳ ಇತಿಹಾಸವಿದೆ. ನಿರಂತರ ಪರಿವರ್ತನಾಶೀಲವಾದ ಬದುಕು ಹಾಗೂ ಸಾಹಿತ್ಯಗಳ ಸಂಬಂಧದ ಚರ್ಚೆಯಲ್ಲಿ ಪ್ರಮುಖ ಪಲ್ಲಟಗಳು ಶೋಧಿತವಾಗಿವೆ. ಜಾಗತೀಕರಣದ ಆರ್ಥಿಕ ವಿನ್ಯಾಸವು ಜಗತ್ತಿನಾದ್ಯಂತ ಸಾಮಾಜಿಕ – ಸಾಂಸ್ಕೃತಿಕ ಸಂರಚನೆಗಳ ಮೇಲೂ ಪ್ರಭಾವ ಬೀರುತ್ತಿದೆ. ಸಾಹಿತ್ಯದ ಪ್ರಕಾರಗಳಲ್ಲಿ ಹೊಸ ಪ್ರಮೇಯಗಳು, ಪಲ್ಲಟಗಳು ಗೋಚರಿಸುತ್ತಿವೆ. ಸಾಹಿತ್ಯದ ಪ್ರಕಾರಗಳು ಜಾಗತೀಕರಣಕ್ಕೆ ಮುಖಾಮುಖಿಯಾಗಿವೆ ಮತ್ತು ಅಲ್ಲಿಯ ಪಲ್ಲಟಗಳನ್ನು ಪರಿಣಾಮಗಳನ್ನು ವಿಮರ್ಶಾತ್ಮಕವಾಗಿ ಶೋಧನೆಗೆ ಒಳಪಡಿಸಿವೆ. ಈ ಹಿನ್ನೆಲೆಯಲ್ಲಿ ಎರಡು ದಶಕಗಳ ಕನ್ನಡ ಸಣ್ಣಕತೆಗಳು ಜಾಗತೀಕರಣದ ಭಾರತೀಯ ಬದುಕಿನ ಅನುಭವ ಪ್ರಪಂಚವನ್ನು ಅತ್ಯಂತ ಸಮರ್ಪಕವಾಗಿ ಸಮಾಜಮುಖಿಗೊಳಿಸುವಲ್ಲಿ ಯಶಸ್ಸನ್ನು ಸಾಧಿಸಿವೆ.

**ಗಂಗಾಧರ ಈ. ಮಾಸನಕಟ್ಟಿ**
ಸಂಶೋಧನ ವಿದ್ಯಾರ್ಥಿ, ಎಸ್.ಡಿ.ಎಂ. ಕಾಲೇಜ್, ಹಂಪಿ ವಿಶ್ವವಿದ್ಯಾಲಯ ಮಾನ್ಯತೆ, ಧಾರವಾಡ

## ಮನದಾಳ

ಬಗ್ಗಿ ನೋಡಲು ಕಂಡೆವು
ಮನವೆಂಬ ಬಾವಿ ನೀರಿನ
ಮೇಲ್ಪದರ, ಪ್ರತಿಬಿಂಬ
ಹೊಕ್ಕು ನೋಡಲು ಅಸಾಧ್ಯ
ಮುಳುಗಿ ಮುಟ್ಟಲದರ ತಳ
ಅರಿಯಲದರ ಅಂತರಾಳ.

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು – ೫೬೦ ೦೯೪

## ಸಿ. ವಿ. ರಾಜಗೋಪಾಲ ಪುರಸ್ಕಾರ

ಶ್ರೀ ಸಿ. ವಿ. ರಾಜಗೋಪಾಲ ಅವರು ಕನ್ನಡದ ಪತ್ರಕರ್ತರಾಗಿ ವಿಶೇಷ ಖ್ಯಾತಿಗಳಿಸಿದ್ದವರು. 'ಪ್ರಜಾವಾಣಿ'ಯಲ್ಲಿ ಅನೇಕ ವರ್ಷಗಳ ಕಾಲ ಸೇವೆ ಸಲ್ಲಿಸಿದ್ದ ಮಾನ್ಯ ರಾಜಗೋಪಾಲ್ ನಿವೃತ್ತಿಯ ನಂತರ "ಕೆಂಬಾವುಟ" ಪತ್ರಿಕೆಗೂ ಬರೆಯುತ್ತಿದ್ದವರು. ಅಂತೆಯೇ ಬೇರೆ ಕೆಲವು ಪತ್ರಿಕೆಗಳ ಅಂಕಣಕಾರರಾಗಿ ವಿಶಿಷ್ಟ ವಿಶ್ಲೇಷಣೆಗಳಿಗೆ ಹೆಸರಾಗಿದ್ದವರು. ಅವರ ಸ್ಮರಣಾರ್ಥ ಚಿಣ್ಯ ಕುಟುಂಬದವರು 'ಹೊಸತು' ಪತ್ರಿಕೆಯ ಎರಡು ಉತ್ತಮ ಲೇಖನಗಳಿಗೆ ತಲಾ ರೂ. ೫,೦೦೦/- ಪುರಸ್ಕಾರ ೨೦೧೩-೧೪ರಿಂದ ನೀಡುತ್ತಿದ್ದಾರೆ. ಪ್ರತಿ ವರ್ಷ, ಹೊಸತು ಪತ್ರಿಕೆಯ ಆಗಸ್ಟ್ ತಿಂಗಳ ಸಂಚಿಕೆಯಿಂದ ಮುಂದಿನ ಜುಲೈವರೆಗಿನ ಸಂಚಿಕೆಗಳಲ್ಲಿ ಪ್ರಕಟವಾಗುವ ಲೇಖನಗಳನ್ನು ಈ ಪುರಸ್ಕಾರಕ್ಕೆ ಪರಿಗಣಿಸಲಾಗುತ್ತದೆ. ೨೦೧೭-೨೦೧೮ರ ಬಹುಮಾನಗಳನ್ನು **ಡಾ॥ ಬಿ. ಆರ್. ಮಂಜುನಾಥ (ನವೆಂಬರ್ ಕ್ರಾಂತಿ ಮತ್ತು ಭವಿಷ್ಯದ ಹಾದಿ** – *ನವೆಂಬರ್ ೨೦೧೭)* ಮತ್ತು **ಎಂ. ಬಿ. ಶ್ವೇತಾ (ವಸಾಹತು ನೀತಿ ಮತ್ತು ಸ್ಥಳೀಯ ಆರ್ಥಿಕತೆಯ ಮುಖಾಮುಖಿ : ಜನಪದ ಆಕರಗಳು** – *ಮೇ ೨೦೧೮)* ಅವರಿಗೆ ನೀಡಲಾಗಿದೆ. ಪುರಸ್ಕರಿಸಿದ ಚಿಣ್ಯ ಕುಟುಂಬದವರಿಗೂ, ಪುರಸ್ಕೃತರಿಗೂ 'ಹೊಸತು' ಅಭಿನಂದಿಸುತ್ತದೆ.

– ***ಸಂ.***





# ದಲಿತ ಕಥೆಗಳಲ್ಲಿ ಅಧ್ಯಾತ್ಮದ ಸ್ವರೂಪ

**ಪ್ರೊ॥ ಪ್ರಮೀಳ**

**ಕ**ನ್ನಡ ಸಾಹಿತ್ಯ ಪರಂಪರೆಯು ಸುದೀರ್ಘ ಇತಿಹಾಸವನ್ನು ಒಳಗೊಂಡಿದೆ. ಅದು ನಿತ್ಯ ಹರಿಯುವ ಹೆದ್ದೊರೆಯಾಗಿ, ಸದಾ ಕ್ರಿಯಾಶೀಲತೆಯನ್ನುಳ್ಳ ಕನ್ನಡ ಸಾಹಿತ್ಯವು ನವೋದಯ, ಪ್ರಗತಿಶೀಲ, ನವ್ಯ ಮತ್ತು ದಲಿತ ಬಂಡಾಯ ಸಾಹಿತ್ಯ ಪಂಥಗಳಾಗಿ ಮೂಡಿಬಂದಿದೆ.

ಈ ನಾಲ್ಕು ಪಂಥಗಳಲ್ಲಿ ದಲಿತ – ಬಂಡಾಯ ಸಾಹಿತ್ಯವು ತನ್ನದೇ ಆದ ರೀತಿಯಲ್ಲಿ ಬೆಳೆದು ಬಂದಿರುವುದನ್ನು ಕಾಣುತ್ತೇವೆ. ಶತಶತಮಾನಗಳಿಂದ ಹಸಿವು, ಅನ್ಯಾಯ, ಅಕ್ರಮ, ದೌರ್ಜನ್ಯ ಮತ್ತು ತುಳಿತಕ್ಕೊಳಗಾಗಿ ಬೆಂದು ಹೋಗಿದ್ದ ದಲಿತರಲ್ಲೇ ಮೂಡುವ ಧ್ವನಿ ಸಹಜವಾಗಿಯೇ ರೊಚ್ಚು ಆವೇಶಗಳನ್ನೊಳಗೊಂಡು ಮೂಡಿಬಂದಿತು. ಅಸ್ಪೃಶ್ಯತೆ, ಜಾತಿ, ಲಿಂಗ, ವರ್ಗಗಳ ಅಸಮಾನತೆಯ ವಿರುದ್ಧ ಬಂಡೆದ್ದ ಸಾಹಿತ್ಯ ಇದಾಗಿರುವುದರಿಂದ ಇದನ್ನು ದಲಿತ – ಬಂಡಾಯ ಸಾಹಿತ್ಯ ಎಂದು ನೋಡಲಾಗಿದೆ. ಇದು ಸಮಾಜದಲ್ಲಿರುವ ಪ್ರಗತಿಪರ ಹಾಗೂ ದಲಿತ ಬರಹಗಾರರಿಂದ ಸೃಷ್ಟಿಯಾಗುತ್ತಿರುವ ಸಾಹಿತ್ಯ. ತಮ್ಮೊಳಗಿನ ನೋವಿಗೆ, ಭಾವಕ್ಕೆ ತಾವೇ ಕಥಾ ರೂಪವನ್ನು ಕೊಟ್ಟು ದಲಿತರೇ ಬರೆಯಲು ಪ್ರಾರಂಭಿಸಿದಾಗ ನಿಜವಾದ ದಲಿತರ ಬದುಕು ಸಾಹಿತ್ಯದಲ್ಲಿ ಮೂಡಿಬಂದಿತು. ಸಮಾಜದಲ್ಲಿ 'ದಲಿತಪ್ರಜ್ಞೆ' ರೂಪುಗೊಂಡಾಗ ಸಮಾಜ ದಲಿತರನ್ನು ನೋಡುವ ದೃಷ್ಟಿಕೋನ ಬದಲಾಯಿತು.

ದಲಿತ ಸಾಹಿತ್ಯ ಪ್ರಕಾರದ ವಿಶಿಷ್ಟತೆಯನ್ನು ಗಮನಿಸಿದರೆ, ಈ ಪ್ರಕಾರ ಮುಖ್ಯವಾಹಿನಿಯಲ್ಲಿಲ್ಲದ ನಿರ್ಲಕ್ಷಿತ ಸಮುದಾಯದ ಚಿತ್ರಣವನ್ನು ದಾಖಲಿಸುತ್ತದೆ. ದಲಿತ ಸಾಹಿತ್ಯವು ತನಗಿಂತ ಹಿಂದೆ ಬಂದ ನವೋದಯ, ನವ್ಯ ಸಾಹಿತ್ಯದ ಮಿತಿಗಳನ್ನು ಪ್ರಶ್ನಿಸಿ, ವಿಮರ್ಶಿಸುವ ಕೆಲಸವನ್ನು ಮಾಡಿತು. ಎಡಪಂಥೀಯ ಒಲವು ಶೋಷಿತರ ಪರವಾದ ಹೋರಾಟ, ಅಸ್ಪೃಶ್ಯತೆ, ಜಾತಿಪದ್ಧತಿ ಮತ್ತು ಲಿಂಗತಾರತಮ್ಯಗಳ ವಿರುದ್ಧ ಧ್ವನಿ ಎತ್ತುವ ಕೆಲಸವನ್ನು ದಲಿತ ಸಾಹಿತ್ಯ ಮಾಡಿತು. ಅಲ್ಲದೆ, ಸಮಾನತೆಯ ಸಮಾಜವನ್ನು ಕಟ್ಟುವ ಕನಸನ್ನು ಕಾಣತೊಡಗಿತು. ಹೀಗೆ ತನ್ನದೇ ಆದ ತತ್ವ ಮತ್ತು ಮೌಲ್ಯಗಳನ್ನು ಮುಂದಿಡುವ ದಲಿತ ಕಥನಗಳು ಸಾಹಿತ್ಯ ಸಂಶೋಧನೆಗೆ ವಿಪುಲ ಅವಕಾಶಗಳನ್ನು ಒದಗಿಸಿವೆ.

**ಅಧ್ಯಾತ್ಮದ ಕುರಿತು**

ಅಧ್ಯಾತ್ಮ ಅಂದಾಗ ಅನೇಕರಿಗೆ ಅನೇಕ ರೀತಿಯ ಅರ್ಥ ವಿನ್ಯಾಸಗಳು, ಪ್ರತಿಮೆಗಳು ಮೂಡುವುದು ಸಹಜ. ಕೆಲವರಿಗೆ ಧಾರ್ಮಿಕ ಭಾವನೆಯೆಂದರೆ ಕೇವಲ ದೇವರಲ್ಲಿ ನಂಬುಗೆ ಹಾಗೂ ತಲೆಬಾಗುವ, ಪ್ರಾರ್ಥಿಸುವ ಒಂದು ಆಚರಣೆ ಆಗಿರಬಹುದು. ಇನ್ನು ಕೆಲವರಿಗೆ ಇದು ಮೂಢನಂಬಿಕೆಯ ಸಂಪ್ರದಾಯಸ್ಥ ಆಲೋಚನೆಗಳ ಕಂತೆ ಎನಿಸಬಹುದು. ಇನ್ನು ಕೆಲವರಿಗೆ ಇದು ಆತ್ಮ ಪರಮಾತ್ಮನ ಕುರಿತ ಜಿಜ್ಞಾಸೆ ಅಥವಾ ತತ್ವಶಾಸ್ತ್ರದ ಮೂಲ ತತ್ವ ಎನಿಸಬಹುದು. ಕೆಲವರಿಗೆ ಇದು ಬದುಕಿನ ಧಾರ್ಮಿಕ ಮತ್ತು ಅನುಭಾವದ ನೆಲೆಯ ಒಟ್ಟು ಪರಿಕಲ್ಪನೆ ಎನಿಸಬಹುದು.

ಅಧ್ಯಾತ್ಮದ ಕುರಿತು ಭಾರತೀಯ ಪಾರಂಪರಿಕ ದೃಷ್ಟಿಕೋನವನ್ನು ಭಿನ್ನ ದೃಷ್ಟಿಯಿಂದ ವ್ಯಾಖ್ಯಾನಿಸಿದ್ದು ಮತ್ತು ಹೊಸ ಬಗೆಯಲ್ಲಿ ಕಂಡುಕೊಂಡದ್ದು ೧೨ನೇ ಶತಮಾನದ ವಚನ ಚಳುವಳಿ. ವಚನ ಚಳುವಳಿಯ ಅನೇಕ ಅನುಭಾವಿಗಳು ಶ್ರೇಣೀಕೃತ ವ್ಯವಸ್ಥೆಯು ಒಪ್ಪಿಕೊಂಡ ಧಾರ್ಮಿಕ ಮತ್ತು ಆಧ್ಯಾತ್ಮಿಕ ಚಿಂತನೆಗಳನ್ನು ಬದಲಾಯಿಸಿ ಕಾಯಕ ನಿಷ್ಠ, ಸಮಾಜಮುಖಿಯಾದ, ಅಂತರಂಗ ಶುದ್ಧಿಯ ಅಧ್ಯಾತ್ಮವನ್ನು ಮುಂದಿಟ್ಟಿತು. ಕನ್ನಡಕ್ಕೆ ಸಂಬಂಧಿಸಿದಂತೆ ಇದೊಂದು ಕ್ರಾಂತಿಕಾರಿ ಹೆಜ್ಜೆಯಾಗಿದ್ದು, ವಚನಕಾರರ ಈ ಅಧ್ಯಾತ್ಮದ ದೃಷ್ಟಿಕೋನ ಮುಂದಿನ ಮಾನವೀಯ ಕಾಳಜಿಯುಳ್ಳ, ಪ್ರಗತಿಪರ ಚಿಂತಕರ ಸ್ವಸ್ಥ ಸಮಾಜ ನಿರ್ಮಾಣದ ಚಿಂತನೆಯ ಭಾಗವಾಯಿತು.

ಆಧ್ಯಾತ್ಮಿಕತೆಗೆ ಸಮಾನಾರ್ಥಕಗಳನ್ನು ನೋಡುವುದಾದರೆ ಪಾರಮಾರ್ಥ, ಆತ್ಮವಿದ್ಯೆ, ಬ್ರಹ್ಮವಿದ್ಯೆ ಎಂಬ ಪದಗಳಿವೆ. ಆದರೆ ವಚನಕಾರರು 'ಅನುಭಾವ' ಎನ್ನುವ ಪದವನ್ನು ಬಳಸಿದರು. ವಚನಕಾರರು ತಮ್ಮ ವಿಶಿಷ್ಟ ಆಧ್ಯಾತ್ಮಿಕ ಅನುಭೂತಿಯನ್ನು ಸೂಚಿಸಲು ಅನುಭಾವವೆಂದು ವಿಶಿಷ್ಟ ಪದವನ್ನು ಬಳಸಿದ್ದಾರೆ. ಹಾಗೆಯೇ ವಚನಕಾರರು ಆಧ್ಯಾತ್ಮಿಕ ಅನುಭವವನ್ನು ನಿರ್ವಹಿಸಿದ ಬಗೆಯೂ ವಿಶಿಷ್ಟವಾದದ್ದು. ಈ ದೃಷ್ಟಿಯಿಂದ ಅವರು ವೇದ ಪುರಾಣ ಆಗಮಗಳಿಗಿಂತಲೂ ಅಡವಿ–ಗಿರಿ–ಗಹ್ವರಗಳಲ್ಲಿ ಅಡಗಿ ಕುಳಿತಿರುವ ಧರ್ಮಗಳಿಗಿಂತಲೂ, ಕೇವಲ ಮಲ – ಮೂತ್ರಗಳನ್ನು ಭುಂಜಿಸುವ ಅಧೋಗತಿಗಿಳಿದಿದ್ದ ತಾಂತ್ರಿಕ ಪಂಥಗಳಿಗಿಂತಲೂ, ಮಡಕೆ, ಮೊರ ಅಂತ ಬೆಂತರ, ಕಾಳಯ್ಯ, ಧೂಳಯ್ಯ ಮುಂತಾದ ಜನಪದ ದೈವಗಳನ್ನು ಪೂಜಿಸುವ ಧಾರ್ಮಿಕತೆಗಿಂತಲೂ ಭಿನ್ನವಾದ ಆಧ್ಯಾತ್ಮಿಕ ದೃಷ್ಟಿಯನ್ನು ನೀಡಿದ್ದಾರೆ.

ಅಲ್ಲಮನ ಪ್ರಕಾರ ಆಧ್ಯಾತ್ಮಿಕ ಸಾಧನೆ ಎನ್ನುವುದು ಎಲ್ಲಾ ಬಂಧನಗಳಿಂದ ಕಳಚಿಕೊಂಡ ಮುಕ್ತ ಸ್ಥಿತಿಯ ಒಂದು ಹಂತ. ಆದರೆ ಅದೇ ಗುರಿಯಲ್ಲ.

ಅಧ್ಯಾತ್ಮವೆಂದರೆ ವೈಚಾರಿಕತೆಗೆ ವಿರುದ್ಧವಾದುದೆಂದು ಸಾಮಾನ್ಯವಾಗಿ ತಿಳಿಯಲಾಗುತ್ತದೆ. ಕುವೆಂಪುರವರ ಸಾಹಿತ್ಯ

ಕೃಷಿಯನ್ನು ಗಮನಿಸಿದರೆ ಅಧ್ಯಾತ್ಮದ ಚಿಂತನೆ ಮೂಡಿಬರುತ್ತದೆ. ತೀವ್ರ ವಿಚಾರವಾದಿ, ಅಧ್ಯಾತ್ಮವಾದಿ, ಅಧ್ಯಾತ್ಮ ಜೀವಿಯಾದ ಕುವೆಂಪು ಸುಲಭಗ್ರಾಹ್ಯರಲ್ಲ. ಅವರು ವಿಚಾರವಾದಿ ನಿಜ, ಆದರೆ ಕೇವಲ ಭೌತವಾದಿಯಲ್ಲ. ನಿರಂಕುಶಮತಿಗಳಾಗಿ ಎಂದು ಅವರು ನೀಡುವ ಕರೆ, ಆತ್ಮಶ್ರೀಗಾಗಿಯೇ ಇದೆ.

ವೆಸ್ಲಿ ಎಂಬಾತನು ಅಧ್ಯಾತ್ಮದ ಬಗ್ಗೆ ಹೇಳುತ್ತಾ ಅದೊಂದು 'ಆತ್ಮ ದರ್ಶನ' ಎನ್ನುವನು.

ಗಾಂಧೀಜಿ 'ಸತ್ಯವೇ ದೇವರು' ಎಂದು ಪ್ರತಿಪಾದಿಸುವರು.

೧೨ನೇ ಶತಮಾನದ ವಚನಕಾರರ ಆ ಕಾಲಘಟ್ಟದಿಂದ ಪ್ರಸ್ತುತ ಕಾಲಘಟ್ಟದವರೆಗೂ ನಿಂತು ನೋಡಿದಾಗ ದಲಿತರ ಕಥೆಗಳಲ್ಲಿನ ಅಧ್ಯಾತ್ಮದ ಸ್ವರೂಪ ಭಿನ್ನವಾಗಿದೆ. ಪರಂಪರಾನುಗತವಾದ ಆರಾಧನೆ ಅಧ್ಯಾತ್ಮದ ಚಿಂತನೆ ದಲಿತರಲ್ಲಿ ಇಲ್ಲ. ವಚನಕಾರರ ಅನುಭಾವದ ಮೂಲಕ ಅಧ್ಯಾತ್ಮದ ನೋಟ ಅನ್ನುವುದು ಏನಿದೆ, ಆ ನೆಲೆಯಲ್ಲೇ ದಲಿತರ ಅಧ್ಯಾತ್ಮದ ಚಿಂತನೆಯನ್ನು ಗಮನಿಸಬಹುದು. ಮಂಟೇಸ್ವಾಮಿ, ಮಾದೇಶ್ವರ, ಜುಂಜಪ್ಪ ಇವರೆಲ್ಲರೂ ಕೆಳವರ್ಗದ ಜನಾಂಗಕ್ಕೆ ಸೇರಿದವರು. ಹಾಗೆಯೇ ಕಾಟಮರಾಜು ಅಥವಾ ಪಾಲ್ನಾಟಿ ವೀರ ಚರಿತ್ರೆಯಲ್ಲಿ ಬರತಕ್ಕಂಥವರು. ಆದರೆ ಇವರೆಲ್ಲರ ಕುರಿತಾದ ವಿವರ ದಶಾವತಾರ ಕಥೆಯಲ್ಲಿ ಇದೆ ಎನ್ನುವುದು ದಲಿತರ ಅಧ್ಯಾತ್ಮ ಲೋಕದ ವಿವರ. (ಸಾಹಿತ್ಯ ವಿಮರ್ಶೆ–೨೦೦೧–(ಸಂ) ಜನಾರ್ಧನ್ ಭಟ್, ಸಾಹಿತ್ಯ ಅಕಾಡೆಮಿ)

ಇಲ್ಲಿ ಮಂಟೇಸ್ವಾಮಿ–ಬ್ರಹ್ಮ, ಜುಂಜಪ್ಪ–ಕೃಷ್ಣ, ಬೀರಪ್ಪ–ಶಿವ, ಪಾಬೂಜಿ–ಲಕ್ಷ್ಮಣ ಎಂಬುದಾಗಿ ಸಮೀಕರಿಸಲಾಗಿದೆ. ದಲಿತರಲ್ಲಿನ ಅಧ್ಯಾತ್ಮ ಅನ್ನುವುದು ಸಂಸ್ಕೃತಿಯ ಭಾಗದಂತೆ, ಅಂದರೆ ಸಂಸ್ಕೃತಿ ಒಂದು ಸಮುದಾಯ ಬದುಕುವ ಪರಿಭಾಷೆ. (ಸಾಂಸ್ಕೃತಿಕ ಅಧ್ಯಯನ – ರಹಮತ್ ತರೀಕೆರೆ, ಕರ್ನಾಟಕ ಸಾಹಿತ್ಯ ಅಕಾಡೆಮಿ–೨೦೧೪) ಅದು ದಲಿತರೂ ಕೂಡ ಅಧ್ಯಾತ್ಮವನ್ನು ಒಂದು ಸಮುದಾಯ ಬದುಕುವ, ಆಲೋಚಿಸುವ ನೆಲೆಯಲ್ಲೇ ನೋಡುತ್ತದೆ.

ಕೆಲವೊಂದು ಉದಾಹರಣೆಗಳನ್ನು ನೋಡುವುದಾದರೆ :

- ಡಿ.ವಿ.ಜಿ ಅವರ 'ದೇವರು' ಲೇಖನ
- ಮಂಟೇಸ್ವಾಮಿ, ಜುಂಜಪ್ಪ, ಸಿರಿ ಮೊದಲಾದ ಜನಪದ ಕಾವ್ಯ ಚಿತ್ರಣ
- ಕುಂ. ವೀರಭದ್ರಪ್ಪ ಅವರ ದೇವರ ಹೆಣ, ನಿಜಲಿಂಗ, ಡೋಮ ಮತ್ತಿತರ ಕಥೆಗಳು...
- ದೇವನೂರ ಮಹಾದೇವ ಅವರ 'ಅಮಾಸ' ಕಥೆ
- ಬಿ. ಟಿ. ಲಲಿತಾನಾಯಕ್ ಅವರ ಹಬ್ಬ ಮತ್ತು ಬಲಿ ಕಥೆ

ಡಿ.ವಿ.ಜಿ.ಯವರ ಲೇಖನದಲ್ಲಿ ಭಾರತೀಯ ಪಾರಂಪರಿಕ ಅಧ್ಯಾತ್ಮದ ವಿವರಗಳಿದ್ದರೆ ಮಂಟೇಸ್ವಾಮಿ, ಜುಂಜಪ್ಪ, ಸಿರಿ ಕಾವ್ಯಗಳಲ್ಲಿ ತಳವರ್ಗದ ಜನ ಕಟ್ಟಿಕೊಂಡ ಪರ್ಯಾಯ ಅಧ್ಯಾತ್ಮದ ಸ್ವರೂಪವನ್ನು ಕಾಣಬಹುದಾಗಿದೆ. ಈ ಪರ್ಯಾಯವೇ ದಲಿತ ಅಧ್ಯಾತ್ಮದ ಮೂಲ ಬೇರು. ಇಲ್ಲಿ ವೈದಿಕ, ಸನಾತನ ಪರಂಪರೆ ಮೀರಿ ನಿಂತ, ಬೇರೆಯದೇ ಆದ ಅಧ್ಯಾತ್ಮದ ಸ್ವರೂಪ ಕಾಣುತ್ತೇವೆ. ದೇವನೂರ, ಕುಂ.ವೀ, ಬಿ.ಟಿ. ಲಲಿತಾನಾಯಕ್, ಗೀತಾ ನಾಗಭೂಷಣ, ಮೊಗಳ್ಳಿ ಗಣೇಶ್, ಸೋಮಣ್ಣ ಹೊಂಗಳ್ಳಿ ಮೊದಲಾದ ಹಲವು ದಲಿತ ಬರಹಗಾರರ ಕಥೆಗಳಲ್ಲಿ ಈ ಚಿಂತನೆ ಭಿನ್ನ ಭಿನ್ನ ರೂಪದಲ್ಲಿ ಕಾಣಿಸಿಕೊಂಡಿದೆ.

ದಲಿತ ಕಥಾ ಸಾಹಿತ್ಯದಲ್ಲೂ, ದಲಿತರಲ್ಲೂ ಒಂದು ಭಿನ್ನವಾದ ಅಧ್ಯಾತ್ಮ ಲೋಕ ಇದೆ. ಅದು ಹೇಗೆ, ಯಾವ ಸ್ವರೂಪದ್ದು ಎಂದು ತಿಳಿಯಬೇಕಾದದ್ದು ಮಹತ್ವದ ವಿಚಾರವಾಗಿದೆ. ದಲಿತ ವಚನಕಾರರು ಜನಪದ ದೈವಗಳನ್ನು ಪೂಜಿಸುವುದು ಸನಾತನ ಧಾರ್ಮಿಕ ವಿಧಾನಕ್ಕಿಂತಲೂ ಭಿನ್ನವಾದ ಆಧ್ಯಾತ್ಮಿಕ ಚಿಂತನೆಯತ್ತ ದೃಷ್ಟಿಯನ್ನು ನೀಡಿದ್ದಾರೆ.

ಮೇಲ್ವರ್ಗದ ಅಧ್ಯಾತ್ಮ ಚಿಂತನೆಗಿಂತ ಭಿನ್ನವಾದ ಅಧ್ಯಾತ್ಮದ ಸ್ವರೂಪ ದಲಿತರಲ್ಲಿ ಹೇಗೆ ಇದೆ, ದಲಿತ ಜಗತ್ತಿನಲ್ಲೂ ಅಧ್ಯಾತ್ಮ ಇದೆ, ದಲಿತರ ಅಧ್ಯಾತ್ಮದ ಸ್ವರೂಪ ಯಾವುದು, ಅಲ್ಲಿರುವ ಹಾಗೂ ಪರಂಪರಾನುಗತವಾದ ಚೌಕಟ್ಟಿಗಿಂತ ಹೇಗೆ ದಲಿತರ ಅಧ್ಯಾತ್ಮ, ಆರಾಧನಾ ಸ್ವರೂಪ ಭಿನ್ನ ಇದೆ ಎನ್ನುವುದನ್ನು ನೋಡಿದಾಗ –

ಬಿ. ಟಿ. ಲಲಿತಾನಾಯಕ್ ಅವರ 'ಹಬ್ಬ ಮತ್ತು ಬಲಿ' ಕಥೆಯಲ್ಲಿ ಟಗರನ್ನು ಬಲಿ ಕೊಡುವ ವಿಧಾನ ನೋಡಿದರೆ, ಅಲ್ಲಿ ಸಾಲ ಮಾಡಿ ಟಗರನ್ನು ಖರೀದಿಸಿ, ದೇವರಿಗೆ ಬಲಿ ಕೊಡುವ ಅವರ ನಂಬಿಕೆ, ಅಧ್ಯಾತ್ಮ ಚಿಂತನೆ ಭಿನ್ನವಾಗಿದೆ ಎಂದು ತಿಳಿಯಬಹುದು. ಕುಂ. ವೀರಭದ್ರಪ್ಪನವರ 'ದೇವರ ಹೆಣ' ಕಥೆಯಲ್ಲಿ ಸತ್ತಿರುವ ಪ್ರಾಣಿಯನ್ನು ದೇವರೆಂದು ಪೂಜಿಸುವ ರೀತಿ, ಸಿದ್ಧಲಿಂಗಯ್ಯನವರು ಬರೆದ 'ಕತ್ತೆ ಮತ್ತು ಧರ್ಮ' ಕಥೆಯಲ್ಲಿ ಇಡೀ ಊರಿನ ಜನರು ಆರಾಧಿಸುವ ಸಿದ್ಧಯ್ಯ ಸಾಕಿದ ಮಣ್ಣಾದ ಕತ್ತೆಯ ಚಿತ್ರಣ – ಇವೆಲ್ಲವನ್ನು ಗಮನಿಸಿದಾಗ ದಲಿತ ಕಥೆಗಳಲ್ಲಿನ ಅಧ್ಯಾತ್ಮದ ಚಿಂತನೆ, ಸ್ವರೂಪ ಬೇರೆಯಾಗಿರುವುದನ್ನು ಗಮನಿಸಬಹುದು. ಆರಾಧನಾ ಚಿಂತನೆ ಸನಾತನ ಪರಂಪರೆಗಿಂತ ಭಿನ್ನವಾಗಿರುವುದನ್ನು ಕಾಣಬಹುದು. ಭಗವಂತನ ಕುರಿತು ಜನಪದರು "ಬೆಳಗಾಗ ನಾನೆದ್ದು ಯಾರ್‍ಯಾರ ನೆನೆಯಲಿ..." ಎನ್ನುವ ಸಾಲುಗಳು ಒಂದು ಬೇರೆಯದೇ ಆದ ನಿಲುವುಗಳನ್ನು ವ್ಯಕ್ತಪಡಿಸಿದರೆ, ದಲಿತರ ಕಥೆಗಳಲ್ಲಿನ ದಲಿತರ ಭಗವಂತನ ಕುರಿತ ಚಿಂತನಾ ರೂಪ ಇನ್ನೊಂದು ರೀತಿಯದು. ಕುವೆಂಪುರವರು 'ಜಲಗಾರ' ನಾಟಕದ ಮೂಲಕ ಅಧ್ಯಾತ್ಮದ ಚಿಂತನೆಯನ್ನು ಬೇರೆಯಾಗಿ ಚಿತ್ರಿಸುತ್ತಾರೆ. ಬ್ರಾಹ್ಮಣ್ಯವನ್ನು ವಿರೋಧಿಸುತ್ತ, ಭಗವಂತನ ಆರಾಧನೆ ಕಾಯಕದ ನಿಷ್ಠೆ, ಪ್ರಾಮಾಣಿಕತೆ ಮೂಲಕ ಎಂದು ಜಲಗಾರನ ಮೂಲಕ ಹೇಳುವರು.

ದಲಿತ ಕಥೆಗಳು ಅಲೌಕಿಕ ಲೋಕದ ಧ್ಯಾನದಲ್ಲಿ ಪಲಾಯನಗೊಳ್ಳುವುದಿಲ್ಲ ಬದಲಾಗಿ, ವರ್ತಮಾನದ ಸ್ಥಿತಿಯ ಬಗ್ಗೆಯೇ ಪ್ರಧಾನವಾದ ಚಿಂತನೆಯನ್ನು ಒಳಗೊಂಡಿವೆ. ದಲಿತರು ಮಾರಮ್ಮನ ಕೊಂಡದಲ್ಲಿ ಅಗ್ನಿಯನ್ನು ತುಳಿಯುತ್ತಾರೆ. ಆ ಮೂಲಕ ತನ್ನ ಸಂಸ್ಕೃತಿಯನ್ನು ಪಾಲಿಸುತ್ತಾರೆ.

ಮಧ್ಯಮ ಜಾತಿಗಳ ಈ ಜಾತಿಯಾಧಾರಿತ ಯಾಜಮಾನ್ಯದ ಪೈಪೋಟಿಯೇ ದಲಿತರನ್ನು ಹೊಸ ಬಗೆಯ ಅಸ್ಪೃಶ್ಯತೆಗೂ ಸಿಲುಕಿಸಿದೆ. ಹೀಗಾಗಿಯೇ ಆಧುನಿಕ ರಾಜಕಾರಣ ಬಲಗೊಂಡು, ಹಿಂದೂ ಧಾರ್ಮಿಕ ಪ್ರಭುತ್ವ ಗಟ್ಟಿಯಾಗಿ ಬೇರೂರುವುದು. ಇದರ ಪರಿಣಾಮದಿಂದ ದಲಿತರ ಮೇಲೆ ಧಾರ್ಮಿಕ ಒತ್ತಡಗಳನ್ನು ಮೌಢ್ಯತೆಯಲ್ಲೇ ಇರಿಸಲಾಯಿತು.

ದೇವನೂರ ಅವರ 'ಗ್ರಸ್ತರು' ಕತೆಯಲ್ಲಿ ಮಠ ಮತ್ತು ಮಠಾಧೀಶರ ಬಗೆಗೆ ಅಸಹನೆ ತೀವ್ರವಾಗಿ ಪ್ರಕಟವಾಗಿದೆ. ಗ್ರಾಮ ದೈವಗಳ ನೆಲೆಯಲ್ಲಿ ದಲಿತ ಮಹಿಳಾ ಸಮಾಜವು ತನಗೆ ಬೇಕಾದ ಸಾಂಸ್ಕೃತಿಕ ಪರಿಸರವನ್ನು ನಿರ್ಮಿಸುತ್ತದೆ. ಅಲ್ಲದೆ ಪುರುಷ ಸಮಾಜದ ಮುಂದೆ ವೀರಭದ್ರ, ಹನುಮಂತ, ಮೈಲಾರ, ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ.... ಹೀಗೆ ಅನೇಕ ಪುರುಷ ಪ್ರಧಾನ ಆಚರಣೆ ದಲಿತ ಸಮುದಾಯದಲ್ಲಿ ಕಂಡುಬಂದಿದೆ. ಅವರ ಅಧ್ಯಾತ್ಮದ ಚಹರೆಗಳು ಮತ್ತು ರೂಪಗಳು ಸನಾತನ ಪರಂಪರೆಗಿಂತ ಭಿನ್ನವಾಗಿದೆ ಎಂಬುದನ್ನು ಇಲ್ಲಿ ಗಮನಿಸಬಹುದು. ಇಲ್ಲಿ ಸ್ತ್ರೀಯರನ್ನು ಆಚರಣೆಗಳ ಮೂಲಕ ನಿಯಂತ್ರಣದಲ್ಲಿ ಇರಿಸಿಕೊಂಡಿರುವುದನ್ನು ಗಮನಿಸಬಹುದು. ಗ್ರಾಮ ದೈವಗಳ ಮೂಲಕ ಬುಡಕಟ್ಟು ದೈವಾರಾಧನೆಯ ಮೂಲಕ ದಲಿತ ಮಹಿಳೆಯರು ತಮ್ಮ ಅಭಿವ್ಯಕ್ತಿಯ ಅಸ್ತಿತ್ವದ ಸ್ಥಾನವನ್ನು ರೂಪಿಸಿಕೊಂಡಿದ್ದ ಸ್ತ್ರೀಯರು ಸಂಕೇತ ಪ್ರತಿಮೆಗಳನ್ನೇ ಊಳಿಗಮಾನ್ಯ ವ್ಯವಸ್ಥೆಯು ದಾಳವಾಗಿ ಬಳಸಿಕೊಂಡು ಅಂತಹ ಮಹಿಳೆಯ ದೈವಗಳಿಂದಲೇ ಮಹಿಳೆಯನ್ನು ತನ್ನ ಅಗತ್ಯಕ್ಕೆ ಬಳಸಿಕೊಂಡಿದೆ. ಮೇಲಿನ ವಿವರಗಳಲ್ಲಿ ದಲಿತರ ಆರಾಧನಾ ಸ್ವರೂಪದ ಚಿಂತನೆ ಭಿನ್ನವಾಗಿರುವುದನ್ನು ನೋಡಬಹುದು.

'ಮುಂಡನ' ಕಥೆಯಲ್ಲಿ ಅರವಿಂದ ಮಾಲಗತ್ತಿಯವರು ದಲಿತರು ಶೋಷಣೆಗೆ ಒಳಗಾಗುವುದನ್ನು ವಿವರಿಸುತ್ತಾರೆ. ಹೆಂಗಸರ ತಲೆ ಬೋಳಿಸುವ ಧಾರ್ಮಿಕ ಆಚರಣೆ ಇಂದು ದಲಿತರಲ್ಲಿದೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ದಲಿತರ ಅಧ್ಯಾತ್ಮ ಚಿಂತನೆ ಭಿನ್ನವಾಗಿದೆ ಎಂದು ತಿಳಿಯಬಹುದು.

ವೈದಿಕ ಪರಂಪರೆ ಗುರುತಿಸಿದ ಅಧ್ಯಾತ್ಮ ಅನ್ನುವುದು ಜಾತಿಕೇಂದ್ರಿತವಾದ, ಸ್ವಪ್ರತಿಷ್ಠೆಯ, ಮೇಲುವರ್ಗದ ಚೌಕಟ್ಟಿನ ಸೀಮಿತಕ್ಕೆ ಒಳಗಾಗಿರುವಂತಹದು. ಆದರೆ ದಲಿತರ ಅಧ್ಯಾತ್ಮಸ್ವರೂಪ ವಚನಕಾರರ ಅನುಭಾವದ ನೆಲೆಯ ಸ್ವರೂಪದ್ದೂ ಆಗಿದೆ.

**ಪ್ರೊ॥ ಪ್ರಮೀಳ**
ಸಹ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು, ಕನ್ನಡ ವಿಭಾಗ
ಸೇಂಟ್ ಆನ್ಸ್ ಮಹಿಳಾ ಪದವಿ ಕಾಲೇಜು, ಹಲಸೂರು
ಬೆಂಗಳೂರು – ೫೬೦ ೦೦೮

“ಭಾರತದಲ್ಲಿ ಹರಡಿರುವ ಮತಧಾರ್ಮಿಕ ನಿಲುವುಗಳಲ್ಲಿ ಮತ್ತು ಆಚರಣೆಗಳಲ್ಲಿ ಸುಪ್ತವಾಗಿರುವ ಚೈತನ್ಯ ಎಂಬುದಾಗಿ ರಾಧಾಕೃಷ್ಣನ್‌ರವರು ಈ ‘ಏಕತೆ’ಯನ್ನು ವ್ಯಾಖ್ಯಾನಿಸುತ್ತಾರೆ ಮತ್ತು ಈ ಏಕತೆಯ ಅನುಪಸ್ಥಿತಿಯಲ್ಲಿ ಹಿಂದೂ ಧರ್ಮದ ಸಾಧನೆಗಳನ್ನು ಅರ್ಥೈಸಿಕೊಳ್ಳಲಾಗದು ಎಂಬ ಕಾರಣಕ್ಕಾಗಿ ಈ ದೃಷ್ಟಿಕೋನವನ್ನು ಅವರು ಸಮರ್ಥಿಸಿಕೊಳ್ಳುತ್ತಾರೆ.” ರಾಧಾಕೃಷ್ಣನ್‌ರವರು ಸ್ಪಷ್ಟ ಪಡಿಸಲು ಯತ್ನಿಸಿದ ಈ ಸಾಧನೆ ಯಾವುದು ಎಂದರೆ ಅದು “ವೈದಿಕ ಪರಂಪರೆಯ ಪಾವಿತ್ರ್ಯ”ವಾಗಿದೆ. ಈ “ಪಾವಿತ್ರ್ಯ”ದಿಂದಾಗಿ ನಾಗರಿಕತೆಯ ಪ್ರಸರಣ ಮತ್ತು ನಿತ್ಯತೆ ಸಾಧಿತವಾಗುತ್ತದೆ. ಅಲ್ಲದೆ, ಈ ಏಕತೆ ಒಂದು ಪರಂಪರೆಗೆ ಅಧಿಕಾರದ ಅಸಾಧಾರಣ ಅನುಕೂಲತೆಯನ್ನೂ ಒದಗಿಸುತ್ತದೆ.



# ‘ಹಿಂದೂ ಜೀವನ ದರ್ಶನ’ದಲ್ಲಿ ರಾಧಾಕೃಷ್ಣನ್‌ರವರ ಹಿಂದೂ ಧರ್ಮದ ಮಂಡನೆ

**ಹಿಂದೂ** ಜೀವನ ದರ್ಶನಕ್ಕೆ ಸಂಬಂಧಿಸಿದಂತೆ ಸರ್ವಪಲ್ಲಿ ರಾಧಾಕೃಷ್ಣನ್ ಅವರ ವಿಚಾರಗಳನ್ನು ವಿದ್ವತ್ತಿನ ಒರೆಹಚ್ಚಿ ನೋಡುವ ಅಗತ್ಯವಿದೆ. ರಾಧಾಕೃಷ್ಣನ್ ೧೯೨೬ರಲ್ಲಿ ಆಕ್ಸ್‌ಫರ್ಡ್‌ನ ಮ್ಯಾಂಚೆಸ್ಟರ್ ಕಾಲೇಜ್‌ನಲ್ಲಿ ಅಪ್ಟನ್ ಉಪನ್ಯಾಸಗಳನ್ನು ನೀಡುತ್ತಾರೆ. ಈ ಉಪನ್ಯಾಸಗಳು ನಂತರ ಅವರ ‘ಹಿಂದೂ ಜೀವನ ದರ್ಶನ’ ಗ್ರಂಥಕ್ಕೆ ವಸ್ತುವನ್ನು ಒದಗಿಸುತ್ತವೆ. ಈ ಉಪನ್ಯಾಸಗಳಲ್ಲಿ ಅವರು ಧರ್ಮದ ಬಗ್ಗೆ ಈಗಾಗಲೇ ಸ್ವೀಕೃತವಾದ ಒಂದು ನಿರ್ದಿಷ್ಟ ನಿಲುವನ್ನು ಹೊಂದಿರುವುದು ಮತ್ತು ದೇಸೀ ಧರ್ಮವಾಗಿ ಹಿಂದೂ ಧರ್ಮವು ಅಸ್ತಿತ್ವದಲ್ಲಿದೆ ಎಂಬ ಪೂರ್ವ ಕಲ್ಪನೆಯನ್ನು ಹೊಂದಿರುವುದು ಸ್ಪಷ್ಟವಾಗಿ ಕಾಣುತ್ತದೆ. ಈ ಗ್ರಹಿಕೆ ಮತ್ತು ಪೂರ್ವ ಕಲ್ಪನೆಯನ್ನು ಹಿಂದೂ ಧರ್ಮದ ಆಧುನಿಕ ಅಧ್ಯಯನಗಳ ಹಿನ್ನೆಲೆಯಲ್ಲಿ ಪರಿಶೀಲಿಸಬೇಕಾಗಿದೆ.

ಈ ಉಪನ್ಯಾಸದ ಆರಂಭದಲ್ಲಿ ಅವರು ಹಿಂದೂ ಧರ್ಮವನ್ನು ವ್ಯಾಖ್ಯಾನಿಸುವ ಕಷ್ಟದೆಡೆಗೆ ಗಮನವನ್ನು ಹೀಗೆ ಸೆಳೆಯುತ್ತಾರೆ: “ಹಿಂದೂ ಧರ್ಮವು ತನ್ನ ಸಂಪರ್ಕಕ್ಕೆ ಬಂದ ಜನರ ಸಂಪ್ರದಾಯಗಳನ್ನು ಹಾಗೂ ವಿಚಾರಗಳನ್ನು ಅನಾಯಾಸವಾಗಿ ಹಾಗೂ ಕ್ರಮವಾಗಿ ಒಳಗೊಳ್ಳುತ್ತಾ ಹೋಗಿದೆ. ಅದರ ವಿವಿಧ ರೂಪಗಳನ್ನು ಬೆಸೆವ ಸಮಾನ ಅಂಶವನ್ನು ಗುರುತಿಸುವುದು ಇದನ್ನು ಕಂಡುಕೊಳ್ಳುವಷ್ಟೇ ಮಹತ್ವವಾದದ್ದು ಮತ್ತು ಕಷ್ಟಕರವಾದದ್ದು ಆಗಿದೆ.”

ಹಿಂದೂ ಧರ್ಮದ ವ್ಯಾಖ್ಯಾನದ ಈ ಅನ್ವೇಷಣೆಯನ್ನು ಸಂಘಪರಿವಾರದ ಅನುಯಾಯಿಗಳು ಸಹ ಈ ರೀತಿಯಲ್ಲಿ ಗುರುತಿಸುತ್ತಾರೆ. ಈ ಅನ್ವೇಷಣೆಯ ಅರ್ಥವಿಷ್ಟೆ; ಹಿಂದೂ ಧರ್ಮವು ಅಪ್ಪಟ ಭಾರತೀಯ ಮೂಲದ ಮತಧರ್ಮ. ಇದು ದೇಶೀಯವಾದದ್ದು ಎಂಬುದಕ್ಕಾಗಿಯೇ ಆರ್. ಎಸ್. ಎಸ್. ಸಿದ್ಧಾಂತಿ ಮತ್ತು ಮುಖ್ಯಸ್ಥರಾಗಿದ್ದ ಎಂ. ಎಸ್. ಗೊಲ್ವಾಲ್‌ಕರ್‌ರವರು ಹಿಂದೂ ಧರ್ಮವನ್ನು ತಮ್ಮ ಹಿಂದೂ ರಾಷ್ಟ್ರದ ಪರಿಕಲ್ಪನೆಯ ಮಹತ್ವದ ಭಾಗವಾಗಿಸಿಕೊಂಡು ಹಿಂದೂ ಧರ್ಮದ ಸಾರವನ್ನು ತಮ್ಮದೇ ಆದ ರೀತಿಯಲ್ಲಿ ಮುಂದಿಟ್ಟರು. ತಮ್ಮ ನಾಲ್ಕು ಉಪನ್ಯಾಸಗಳ ಮಾಲೆಯಲ್ಲಿ ಹಿಂದೂ ಧರ್ಮದ ಸಾರವನ್ನು ಒಂದು ನಿರ್ದಿಷ್ಟ ರೀತಿಯಲ್ಲಿ ಮಂಡಿಸುವ ಪ್ರಯತ್ನವನ್ನು ರಾಧಾಕೃಷ್ಣನ್‌ರವರೂ ಸಹ ಮಾಡುತ್ತಾರೆ. ಆಧ್ಯಾತ್ಮಿಕತೆ ಮತ್ತು ಅನುಭಾವಗಳನ್ನು ವೈಭವೀಕರಿಸುವ ಅವರ ವಾಗ್ವೈಭವವು ಅವರ ಅಭಿಪ್ರಾಯಗಳನ್ನು ಮತ್ತು ವಿಶ್ಲೇಷಣೆಗಳನ್ನು ಮಸುಕು ಮಾಡುತ್ತದೆ.

ರಾಧಾಕೃಷ್ಣನ್‌ರವರಿಗೆ ಈ ನಾಡಿನಲ್ಲಿ ಚರಿತ್ರೆಯುದ್ದಕ್ಕೂ ಸಂಘರ್ಷಕ್ಕೆ ಕಾರಣವಾದ ವಿವಿಧ ಮತಧರ್ಮಗಳ ವೈವಿಧ್ಯಮಯ ನಂಬಿಕೆಗಳು ಹಾಗೂ ಆಚರಣೆಗಳ ಅರಿವಿದ್ದರೂ ಸಹ ಅವುಗಳ ನಡುವೆ ಒಂದು ಬಂಧವನ್ನು ಕಾಣುವ ಅವರ ಹಂಬಲವು ಎದ್ದು ಕಾಣುತ್ತದೆ. ಇಲ್ಲಿನ ಜನತೆಯ ಮತಧಾರ್ಮಿಕ ಅನುಭವಗಳನ್ನು ಬೆಸೆಯುವ ಒಂದು ನಿರ್ದಿಷ್ಟ ಚೈತನ್ಯಕ್ಕೆ ಅವರು ಕೊಡುವ ಒತ್ತು ಈ ಹಂಬಲಕ್ಕೆ ಸಾಕ್ಷಿಯಾಗಿದೆ. ರಾಬರ್ಟ್ ಎನ್. ಮಿನೊರ್ ಹೇಳುವಂತೆ ಈ ಪ್ರಯತ್ನ, ‘ಹಿಂದೂ’ ಎಂಬ ಒಂದು ಪ್ರಭೇದದ ಅಡಿಯಲ್ಲಿ ಈ ಬಂಧವನ್ನು ಹಿಡಿದಿಡುವ ಮತ್ತು

ಮೂಲ : **ಡಾ॥ ಎಸ್. ಕೆ. ಅರುಣ್ ಮೂರ್ತಿ**     ಅನುವಾದ : **ಡಾ॥ ಮಾಧವಿ ಎಂ. ಕೆ.**

ತಾತ್ವಿಕ ಚೌಕಟ್ಟನ್ನು ಕೊಡುವ ಪ್ರಯತ್ನವಾಗಿದೆ. ಆರಂಭದಲ್ಲಿ ವೈವಿಧ್ಯದ ಬಗ್ಗೆ ಚರ್ಚಿಸಿದ ನಂತರ ಹಿಂದೂ ಧರ್ಮದ ಬೇರು ವೇದಗಳಲ್ಲಿದೆ ಎಂಬ ಜಾಡಿಗೆ ಬಿದ್ದ ಪರಿಕಲ್ಪನೆಯ ಸುತ್ತ ಅವರ ವಿವರಣೆಯು ಸುತ್ತುತ್ತದೆ. ವೇದಗಳು, ಉಪನಿಷತ್ತುಗಳು ಮತ್ತು ಭಗವದ್ಗೀತೆ ಅವರ ಪ್ರಕಾರ ಹಿಂದೂ ಧರ್ಮದ ಪವಿತ್ರ ಗ್ರಂಥಗಳು. ಅವರ ಪರಿಕಲ್ಪನೆಯಲ್ಲಿ ಹಿಂದೂ ಧರ್ಮವೆಂಬುದು ಒಂದು ಏಕಶಿಲೆ; ಎಲ್ಲರ ನಂಬಿಕೆಗಳನ್ನು ರೂಢಿ ಮತ್ತು ಆಚರಣೆಗಳನ್ನು ಹೀರಿಕೊಳ್ಳುವ ಸಾಮರ್ಥ್ಯವಿರುವ ಅಸ್ತಿತ್ವ. ಈ ಮೂಲ ಕಲ್ಪನೆಯನ್ನು ಅವರು ಮಂಡಿಸುತ್ತಾರೆ. ಅವರ ದೃಷ್ಟಿಯಲ್ಲಿ ಈ ವೈವಿಧ್ಯವು ಹಿಂದೂ ಧರ್ಮದ ಏಕಶಿಲಾಕಾರದ ಕಲ್ಪನೆಗೆ ತೊಡಕಾಗುವುದಕ್ಕೆ ಬದಲಾಗಿ ಅದನ್ನು ಅತ್ಯಂತ ಜೀವಂತವಾಗಿರಿಸಿದೆ. ಹಿಂದೂ ಧರ್ಮವು ಭಾರತೀಯತೆಯನ್ನು ಅಷ್ಟೊಂದು ಸ್ಪಂದನಶೀಲಗೊಳಿಸುತ್ತದೆ. (ಬಹುಶಃ ಇದೇ ವಾದವು ಮುಂದೆ ಇತರರ ವಿವರಣೆಗಳಲ್ಲಿ 'ವೈವಿಧ್ಯದಲ್ಲಿ ಏಕತೆ' ಎಂದು ಕೊಂಡಾಡಲ್ಪಟ್ಟಿತು.) ಮುಂದುವರಿದು, ಎಲ್ಲವನ್ನು ಒಳಗೊಳ್ಳುವ ಈ ಸಾಮರ್ಥ್ಯವು ಹಿಂದೂಗಳ ಚಿಂತನೆಗಳಲ್ಲಿ ಕಂಡುಬರುವ ಅಭಿವೃದ್ಧಿಶೀಲ, ಪ್ರಗತಿಪರ ಮತ್ತು ಸಂರಕ್ಷಕ ಗುಣಗಳೆಂದೂ, ಆದರೆ ಇವುಗಳ ಬೇರು ವೇದಾಂತದಲ್ಲಿದೆಯೆಂದೂ ಅವರು ಬಿಂಬಿಸುತ್ತಾರೆ. ಹಿಂದೂ ಧರ್ಮವು ಏಕಶಿಲಾಕಾರದ್ದು ಎಂಬ ಪರಿಕಲ್ಪನೆಗೆ ಪೂರಕವಾಗಿ ಯಾವ ವಾದವನ್ನೂ ಸಹ ಮಂಡಿಸದೆ ವಾದಕ್ಕೆ ಅತೀತವಾದ ಸತ್ಯವೆಂಬಂತೆ ಅದನ್ನು ಕಾಣುತ್ತಾರೆ. ಹಿಂದೂ ಚಿಂತನೆಯ ಆಳದಲ್ಲಿರುವುದು ಆಧ್ಯಾತ್ಮಿಕ ಏಕತೆ ಎಂದು ಅವರು ಭಾವೋದ್ವೇಗದಿಂದ ಮೊರೆಯಿಡುತ್ತಾರೆ. "ರಾಧಾಕೃಷ್ಣನ್ : ಒಂದು ಮತ ಧಾರ್ಮಿಕ ಜೀವನ ಚರಿತ್ರೆ" ಎಂಬ ಕೃತಿಯಲ್ಲಿ ಮಿನೊರ್ ಹೀಗೆ ಉಲ್ಲೇಖಿಸುತ್ತಾರೆ.



**ಮುಂದಿನ ಚಿತ್ರ ಕಥೆ ಬರೆಯಲು ತೋಚುತ್ತಾ ಇಲ್ವಾ.. ಹಾಗಿದ್ದರೆ ಒಂದು ಎರಡು ವಾರ ಬ್ಲಾಕ್ ಅಂಡ್ ವೈಟ್‌ನಲ್ಲಿ ಹಳೆ ನೆನಪುಗಳನ್ನು ಜ್ಞಾಪಿಸುವ ತರಹ ಡೈರೆಕ್ಟ್ ಮಾಡಿದರಾಯ್ತು.**

"ಭಾರತದಲ್ಲಿ ಹರಡಿರುವ ಮತಧಾರ್ಮಿಕ ನಿಲುವುಗಳಲ್ಲಿ ಮತ್ತು ಆಚರಣೆಗಳಲ್ಲಿ ಸುಪ್ತವಾಗಿರುವ ಚೈತನ್ಯ ಎಂಬುದಾಗಿ ರಾಧಾಕೃಷ್ಣನ್‌ರವರು ಈ 'ಏಕತೆ'ಯನ್ನು ವ್ಯಾಖ್ಯಾನಿಸುತ್ತಾರೆ ಮತ್ತು ಈ ಏಕತೆಯ ಅನುಪಸ್ಥಿತಿಯಲ್ಲಿ ಹಿಂದೂ ಧರ್ಮದ ಸಾಧನೆಗಳನ್ನು ಅರ್ಥೈಸಿಕೊಳ್ಳಲಾಗದು ಎಂಬ ಕಾರಣಕ್ಕಾಗಿ ಈ ದೃಷ್ಟಿಕೋನವನ್ನು ಅವರು ಸಮರ್ಥಿಸಿಕೊಳ್ಳುತ್ತಾರೆ."

ರಾಧಾಕೃಷ್ಣನ್‌ರವರು ಸ್ಪಷ್ಟಪಡಿಸಲು ಯತ್ನಿಸಿದ ಈ ಸಾಧನೆ ಯಾವುದು ಎಂದರೆ, ಅದು "ವೈದಿಕ ಪರಂಪರೆಯ ಪಾವಿತ್ರ್ಯ". ಈ "ಪಾವಿತ್ರ್ಯ"ದಿಂದಾಗಿ ನಾಗರಿಕತೆಯ ಪ್ರಸರಣ ಮತ್ತು ನಿತ್ಯತೆ ಸಾಧಿತವಾಗುತ್ತದೆ. ಅಲ್ಲದೆ, ಈ ಏಕತೆ ಒಂದು ಪರಂಪರೆಗೆ ಅಧಿಕಾರದ ಅಸಾಧಾರಣ ಅನುಕೂಲತೆಯನ್ನೂ ಒದಗಿಸುತ್ತದೆ.

ಅವರ ಮತಧರ್ಮದ ಮತ್ತು ಹಿಂದೂ ಧರ್ಮದ ಸಾರವನ್ನು ಸಂಗ್ರಹರೂಪವಾಗಿ ಹೀಗೆ ಹೇಳಬಹುದು: "ಮತಧರ್ಮ ಎಂಬುದು ಸತ್ಯವನ್ನು ಅಂತರ್ ದೃಷ್ಟಿಯ ನೆಲೆಯಿಂದ ನೋಡುತ್ತದೆ. ಇದು ಹೀಗೆ ಕಂಡುಕೊಂಡ ತತ್ವಗಳಲ್ಲಿ ಪರಿಣತಿಯನ್ನು ಸಾಧಿಸಿರುವವರಿಂದ ಕೂಡಿರುವ ಕ್ಷೇತ್ರ. ಅಂತರ್ ದೃಷ್ಟಿಯು ವೈಚಾರಿಕತೆಗೆ ತೊಡಕಾಗುವುದಿಲ್ಲ. ಎಲ್ಲಾ ನಂಬುಗೆಗಳು ಮತ್ತು ಅನುಭವಗಳನ್ನು ಒಳಗೊಂಡ ವಿಶ್ವಾತ್ಮಕ ಮತಧರ್ಮ ಹಿಂದೂ ಧರ್ಮ ಮತ್ತು ಅವರ ಪ್ರಕಾರ ವೈದಿಕ ಸಾಹಿತ್ಯವು ಅಂತಹ ಅನುಭವಗಳ ಬೌದ್ಧಿಕ ನಿವೇದನೆಯಾಗಿದೆ."

ಮತಧರ್ಮದ ಮತ್ತು ಹಿಂದೂ ಧರ್ಮದ ಬಗ್ಗೆ ಅವರು ಬೆಳೆಸಿಕೊಂಡಿರುವ ಈ ಗ್ರಹಿಕೆಯು ಈ ವಿಷಯದ ಬಗ್ಗೆ ವ್ಯಾಪಕವಾಗಿ ಹರಡಿರುವ ಸಮಕಾಲೀನ ಅಧ್ಯಯನಗಳಿಗೆ ಹೊಂದುವಂತೆ ಕಂಡುಬರುವುದಿಲ್ಲ.

ಈ ಹಿನ್ನೆಲೆಯಲ್ಲಿ ಮತಧರ್ಮದ ಅರ್ಥ ಮತ್ತು ಲಕ್ಷಣಗಳು ಮಹತ್ವವನ್ನು ಪಡೆದುಕೊಳ್ಳುತ್ತವೆ. ತಮ್ಮ ಮೇರು ಕೃತಿ 'ದ ಮೀನಿಂಗ್ ಅಂಡ್ ಎಂಡ್ ಆಫ್ ರಿಲಿಜನ್' (೧೯೬೨) ಎಂಬ ಗ್ರಂಥದಲ್ಲಿ ವಿಲಿಯಂ ಕ್ಯಾಂಟ್‌ವೆಲ್ ಸ್ಮಿತ್‌ರವರು ಬಹು ಸಮರ್ಥವಾಗಿ ಹೀಗೆ ವಾದಿಸುತ್ತಾರೆ. "ಮತಧರ್ಮವೆಂಬ ಪರಿಕಲ್ಪನೆ, ಇಂದು ನಾವು ಗ್ರಹಿಸಿರುವ ಅರ್ಥದಲ್ಲಿ ಗತಕಾಲದಲ್ಲಿ ಅಸ್ತಿತ್ವವನ್ನು ಹೊಂದಿರಲಿಲ್ಲ. ಆದರೆ ಅಮೂರ್ತತೆಯಿಂದ ಮೂರ್ತೀಕರಣದೆಡೆಗಿನ ಪ್ರಕ್ರಿಯೆಯಲ್ಲಿ ಒಂದು ವ್ಯವಸ್ಥಿತ ರೂಪವಾಗಿ ವಿಕಾಸ ಹೊಂದಿತು." ಮತಧರ್ಮದ ಇಂದಿನ ಗ್ರಹಿಕೆಯೇ ಪಾಶ್ಚಾತ್ಯ ಮೂಲದ್ದು. ಲ್ಯಾಟಿನ್ ಪದ 'ರಿಲಿಜಿಯೊ' ಎಂಬುದರ ಅರ್ಥ ಬದಲಾವಣೆಯಾಗಿ ಅದರ ಸ್ವರೂಪವೂ ಬದಲಾಯಿತು. ಆದ್ದರಿಂದ ಮತಧರ್ಮದ ತಿರುಳು ಎಂದಿಗೂ ಒಂದೇ ಎಂಬ ವಾದಕ್ಕೆ ಯಾವ ಸಮರ್ಥನೆಯೂ ಇಲ್ಲ. ಇದರೊಂದಿಗೆ ಅವರು ತೋರಿಸಿಕೊಟ್ಟಂತೆ ವಿವಿಧ ಮತಧರ್ಮಗಳನ್ನು ಹೆಸರಿಸುವ ಪ್ರಕ್ರಿಯೆಯೇ ಹೊರಗಿನವರ ಕಾಣಿಕೆ. ಅಮೂರ್ತವನ್ನು ಮೂರ್ತೀಕರಣಗೊಳಿಸಿದ ಪ್ರಕ್ರಿಯೆಯ ಭಾಗ ಈ ನಾಮಕರಣದ ಪ್ರಕ್ರಿಯೆ. ಉದಾಹರಣೆಗೆ, ನಮಗೆ ಪರಿಚಿತ ಮತಧರ್ಮಗಳಾದ ಬೌದ್ಧ, ಜೈನ, ಹಿಂದೂ, ಸಿಖ್ ಮುಂತಾದುವೆಲ್ಲ ಮತಗಳಾಗಿ ಆರಂಭವಾಗಲಿಲ್ಲ. ಹಾಗಾಗಿ ಆರಂಭದಿಂದಲೇ ಈ ಹೆಸರುಗಳಿರುವುದೂ ಸಾಧ್ಯವಿಲ್ಲ. ಎರಡು ಪ್ರಶ್ನೆಗಳು ಈ ಹಂತದಲ್ಲಿ ಏಳುತ್ತವೆ; (ಅ) ಇತಿಹಾಸದುದ್ದಕ್ಕೂ ಒಂದು ಭೂಭಾಗದ ಜನರು ಹೊಂದಿರುವ ನಂಬುಗೆಗಳು, ಪುರಾಣಗಳು ಮತ್ತು ಹಲ ಬಗೆಯ ಆಚರಣೆಗಳನ್ನು ಮತಧರ್ಮ ಎಂದು ವರ್ಗೀಕರಿಸಬಹುದೆ? (ಆ) ಇವೆಲ್ಲವನ್ನೂ ಒಟ್ಟುಗೂಡಿಸಿ ಹಿಂದೂ ಮತಧರ್ಮ ಎಂಬ ಏಕೀಕೃತ ಮತಧರ್ಮದ ಚೌಕಟ್ಟಿನಲ್ಲಿ ಗುರುತಿಸಬಹುದೆ?


**ರಾಧಾಕೃಷ್ಣನ್‌ರವರು ಮಕ್ಕಳ ಜೊತೆ ಆಡುತ್ತಿರುವುದು**

ಮತಧರ್ಮವನ್ನು ಕುರಿತು ಸೂಕ್ಷ್ಮ ವಿಶ್ಲೇಷಣೆಯನ್ನು ನೀಡಿರುವ ಸ್ಮಿತ್‌ರವರ ಜಾಡಿನಲ್ಲಿ ಮುಂದುವರಿದ

ರಾಚನಿಕವಾದಿಗಳೆಂದು ಕರೆಯಲ್ಪಡುವ ಗಣನೀಯ ಸಂಖ್ಯೆಯ ವಿದ್ವಾಂಸರು ಹೀಗೆ ವಾದಿಸುತ್ತಾರೆ : "ಹಿಂದೂ ಮತಧರ್ಮವು ಆವಿಷ್ಕರಿಸಲಾದ ಮತಧರ್ಮ." 'ಆವಿಷ್ಕರಿಸಲಾದ' ಎಂಬುದನ್ನು ಸರಿಯಾದ ಅರ್ಥದಲ್ಲಿ ಗ್ರಹಿಸಬೇಕು. ಚರಿತ್ರೆಯ ವಿವಿಧ ಘಟ್ಟಗಳಲ್ಲಿ ಜನರಲ್ಲಿ ಪ್ರಚಲಿತವಿದ್ದ ನಾನಾ ಪಂಥಗಳು, ಪಂಗಡಗಳು, ಆಚರಣೆಗಳು ಮತ್ತು ನಂಬುಗೆಗಳ ವೈವಿಧ್ಯಮಯ ಸಮೂಹಗಳನ್ನು ಒಂದು ಅಜ್ಞಾತ ವಿಧಾನದಲ್ಲಿ, ನಿರ್ದಿಷ್ಟ ಚೌಕಟ್ಟಿನಲ್ಲಿ ಪರಕೀಯರು (ಪೌರಾತ್ಯವಾದಿಗಳು, ಸಾಮ್ರಾಜ್ಯಶಾಹಿಗಳು ಮತ್ತು ಕ್ರೈಸ್ತವಾದಿಗಳು) ಅಳವಡಿಸಿದ್ದರಿಂದ ಉತ್ಪತ್ತಿಯಾದ ಒಂದು ಮತಧರ್ಮವೇ ಹಿಂದೂ ಧರ್ಮ. ಹಿಂದೂ ಮತಧರ್ಮವು ಇಂತಹ ಒಂದು ಸಂಘಾತವೆಂಬ ವಾದದ ಮೂಲವನ್ನು ಎಚ್. ಎಚ್. ವಿಲ್ಸನ್‌ರ "ಸ್ಕೆಚ್ ಆನ್ ದ ರಿಲಿಜಿಯಸ್ ಸೆಕ್ಟ್ಸ್ ಆಫ್ ದ ಹಿಂದೂಸ್" ಎಂಬ ಪ್ರಖ್ಯಾತ ಅಧ್ಯಯನದಲ್ಲಿ ಕಾಣಬಹುದು. ಈ ಪಂಥೀಯ ವೈವಿಧ್ಯದ ಉಲ್ಲೇಖದೊಂದಿಗೆ ವಿಲ್ಸನ್‌ರವರು ತಮ್ಮ ಅಧ್ಯಯನವನ್ನು ಹೀಗೆ ಆರಂಭಿಸುತ್ತಾರೆ : "ಹಿಂದೂ ಮತಧರ್ಮ ಎಂಬ ಪದವು ಇಲ್ಲಿಯವರೆಗೂ ಒಂದು ಸಮೂಹ ಎಂಬ ಅರ್ಥದಲ್ಲಿ ಬಳಸಲ್ಪಟ್ಟಿದ್ದು ಅದು ಕೊನೆಯೇ ಇಲ್ಲದಷ್ಟು ವೈವಿಧ್ಯಮಯ ಚಹರೆ ಮತ್ತು ಆರಾಧನೆಗಳನ್ನು ಸಂಕೇತಿಸುತ್ತದೆ. ಇವುಗಳಲ್ಲಿ ಕೆಲವು ವೈವಿಧ್ಯಗಳ ಜಾಡು ಹಿಡಿಯುವುದು ಈ ಅಧ್ಯಯನದ ಧ್ಯೇಯವಾಗಿದೆ."

ರಾಧಾಕೃಷ್ಣನ್‌ರವರು ತಮ್ಮ ಮೊದಲ ಉಪನ್ಯಾಸದಿಂದಲೇ ಹಿಂದೂ ಎಂಬುದು ಒಂದು ಏಕೀಕೃತ ಧರ್ಮ (ಅಥವಾ ನಾಗರಿಕತೆ ಅಥವಾ ಸಂಸ್ಕೃತಿ) ಎಂಬ ನೋಟವನ್ನು ಪ್ರತಿಪಾದಿಸತೊಡಗುತ್ತಾರೆ. ಅವರಿಗೆ ಅದು ಆವಿಷ್ಕಾರ ಮತ್ತು ನಿರ್ಮಾಣಗಳ ಫಲ ಎಂಬುದು, ಅದರಲ್ಲಿಯೂ ಅದು ವಸಾಹತುಶಾಹಿ ಕಾಲದಲ್ಲಾಗಿದ್ದು ಮತ್ತು ಸ್ವಾಮಿ ವಿವೇಕಾನಂದರು ಕೈಗೆತ್ತಿಕೊಂಡು ಜನಪ್ರಿಯಗೊಳಿಸಿದ ಪರಿಕಲ್ಪನೆ ಎಂಬುದು ತಿಳಿಯುವುದೇ ಇಲ್ಲ. 'ಹಿಂದೂ ಜೀವನ ದರ್ಶನ'ವು ಜಾಳುಜಾಳಾದ ಹೇಳಿಕೆಗಳಿಂದ ಮತ್ತು ಹೋಲಿಕೆಗಳಿಂದ ತುಂಬಿದೆ. ಅದು ಹಿಂದೂ ಧರ್ಮವನ್ನು ಕೊಂಡಾಡುವ ನಿರೂಪಣೆಯಾಗಿದೆಯೇ ವಿನಹ ಒಬ್ಬ ತತ್ತ್ವಜ್ಞಾನಿಯಿಂದ ನಿರೀಕ್ಷಿಸಲಾಗುವ ವಿಶ್ಲೇಷಣಾತ್ಮಕವಾದ ಮನಸ್ಥಿತಿಯಿಂದ ಈ ನಿರೂಪಣೆಯು ರೂಪುಗೊಂಡಂತೆ ಕಾಣುವುದಿಲ್ಲ. ಒಬ್ಬ ತತ್ತ್ವಜ್ಞಾನಿಯಿಂದ ನಿರೀಕ್ಷಿಸಲಾಗುವ ಹಿಂದೂ ಧರ್ಮದ ವಿಶ್ಲೇಷಣಾತ್ಮಕ ತಿಳುವಳಿಕೆಯು ಈ ಕೃತಿಯಿಂದ ಕಾಣೆಯಾಗಿರುವಂತೆ ಭಾಸವಾಗುತ್ತದೆ. ಗೌರೀ ವಿಶ್ವನಾಥನ್‌ರವರು ತಮ್ಮ ಟಿಪ್ಪಣಿಯಲ್ಲಿ ಇಂತಹ ಆಧುನಿಕ ವಿದ್ವತ್ತಿನ ತಿಳುವಳಿಕೆಯನ್ನು ಉತ್ತಮವಾಗಿ ಹಿಡಿದಿಡುತ್ತಾರೆ. "ಆಧುನಿಕ ಅಧ್ಯಯನಗಳಲ್ಲಿ ಎದ್ದು ಕಾಣುವ ಬೆಳವಣಿಗೆಯೆಂದರೆ ನಿರಂತರವಾಗಿ ಮುಂದುವರಿದ ಹಿಂದೂ ಪರಂಪರೆಯೆಂಬುದಿಲ್ಲ; ಅದು ಕೇವಲ ವಿಭಿನ್ನ ಪರಂಪರೆಗಳು ಮತ್ತು ಆಚರಣೆಗಳ ಒಂದು ಗುಂಪಾಗಿದ್ದು ಹಿಂದೂ ಮತಧರ್ಮ ಎಂಬ ದೊಡ್ಡ ಸಮೂಹದೊಳಕ್ಕೆ ಮರುಜೋಡಣೆ ಹೊಂದಿದ್ದಾಗಿದೆ ಎಂಬುದಾಗಿದೆ. (ಫ್ರೈಕೆನ್‌ಬರ್ಗ್ ೧೯೮೯; ವೋನ್‌ಸ್ಟೈಟೆನ್‌ಕ್ರೋನ್, ೧೯೮೯). ಈ ಅಧ್ಯಯನಗಳಲ್ಲಿ ಭಿನ್ನಾಭಿಪ್ರಾಯಗಳೇನಾದರೂ ಇದ್ದಲ್ಲಿ, ಅದು ಹಿಂದೂ ಧರ್ಮವೆಂಬುದು ಸಂಪೂರ್ಣವಾಗಿ ಭಾರತವನ್ನು ಕುರಿತು ಅಧ್ಯಯನವನ್ನು ನಡೆಸುತ್ತಿದ್ದ ಪಾಶ್ಚಾತ್ಯ ವಿದ್ವಾಂಸರ ನಿರ್ಮಿತಿಯೇ ಅಥವಾ ಒಂದು ವಸಾಹತುಪೂರ್ವ ರಾಷ್ಟ್ರೀಯ ಚಹರೆಯನ್ನು ಪಡೆಯುವ ಸಾಧನವಾಗಿ ಒಂದಕ್ಕೊಂದು ಸಂಬಂಧವಿಲ್ಲದ ಆಚರಣೆಗಳನ್ನು ಒಂದು ವ್ಯವಸ್ಥೆಗೊಳಪಡಿಸಲು ಯತ್ನಿಸುತ್ತಿದ್ದ ವಸಾಹತು ವಿರೋಧಿ ಹಿಂದೂಗಳ ಕೂಸೇ ಎಂಬುದರ ಬಗೆಗಷ್ಟೆ."

ಆದರೆ ರಾಧಾಕೃಷ್ಣನ್‌ರವರ ಮಂಡನೆಯು ಸಾಂಸ್ಕೃತಿಕವಾಗಿ ಶ್ರೇಷ್ಠವಾದ, ಏಕಶಿಲಾಸದೃಶವಾದ, ಅಂತಃಸತ್ವವಾದಿಯಾದ, ಸ್ಥಳೀಯವಾಗಿ ಬೆಳೆದು ಬಂದ ಹಿಂದೂ ಧರ್ಮದ ನೋಟವೊಂದನ್ನು ಕಟ್ಟಿಕೊಡುತ್ತದೆ. ಈ ದೃಷ್ಟಿಯು ಆರ್. ಎಸ್. ಎಸ್. ಮತ್ತು ಅದರ ಅನುಯಾಯಿಗಳಾದ ಹಿಂದುತ್ವವಾದಿಗಳ ಕಾರ್ಯಸೂಚಿಗೆ ಅತ್ಯುತ್ತಮವಾಗಿ ಹೊಂದುತ್ತದೆ ಮತ್ತು ನೆರವಾಗುತ್ತದೆ. ಆದರೆ ತತ್ತ್ವಶಾಸ್ತ್ರದ ಮತ್ತು ಇತಿಹಾಸದ ಜ್ಞಾನಶಿಸ್ತುಗಳ ವಿದ್ವತ್ತಿನ ಮಾನದಂಡಗಳನ್ನು ಅನ್ವಯಿಸಿ ನೋಡಿದಾಗ ಈ ನಿರೂಪಣೆಯು ತುಂಬ ಕೆಳಮಟ್ಟದಲ್ಲಿರುವುದು ಗೋಚರವಾಗುತ್ತದೆ.

ಮೂಲ : **ಡಾ॥ ಎಸ್. ಕೆ. ಅರುಣ್ ಮೂರ್ತಿ**
ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಎಜುಕೇಷನ್ ಅಂಡ್ ರೀಸರ್ಚ್
ಮೊಹಾಲಿ, ಪಂಜಾಬ್ – ೧೪೦ ೩೦೬
ಅನುವಾದ : **ಡಾ॥ ಮಾಧವಿ ಎಂ. ಕೆ.**
ಇತಿಹಾಸ ಸಹ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಟಿ. ನರಸೀಪುರ ಜಿಲ್ಲೆ, ಮೈಸೂರು – ೫೭೧ ೧೨೪

# ನೀರಿಗ್ಹೋಗದವರು



**ಊ**ರ ಗೌಡರ ಮಗಳು
ನಾ ನೀರಿಗೋಗಲೇ ಇಲ್ಲ
ಹರಿವ ನೀರಿನ ಚಂದ ಕಾಣಲಿಲ್ಲ
ನಾದ ಕೇಳಲಿಲ್ಲ..
ಹೊಳೆದಂಡೆಗೆ ಬಟ್ಟೆ ಸೆಣೆಯಲು ಹೋದವರು
ಸೆಣೆದಾಡಲು ಕಲಿತರಂತೆ ಬದುಕಿನೊಡನೆ
ದನ ಕುರಿಯ ದಂಡೆಯ ಗರಿಕೆಗೆ ಬಿಟ್ಟು ಕೂತವರು
ಕಲ್ಲು ಮಣ್ಣ ಹಾದಿಯಲಿ ಗುರಿಯ ಸೇರಿದರಂತೆ
ಈಜುಬಿದ್ದು ಮುಳುಮುಳುಗಿ ಎದ್ದವರು
ಜಯಿಸುವೆವು ಜಗವ ಅಂದರಂತೆ
ನನ್ನಂತೆ ಹಲವರು ಗೋಡೆಯೊಳಗೇ ಕುಳಿತರು
ಹಗಲುಗನಸುಗಳಲ್ಲೇ ಹರಿದುಹೋದರು
ಜನರ ಕಣ್ಗಾವಲುಗಳಲ್ಲೇ ಕಳೆದುಹೋದರು
ಬೆಟ್ಟ ಹತ್ತಲಿಲ್ಲ,
ಗುಡ್ಡ ಇಳಿಯಲಿಲ್ಲ,
ಕಾಡ ನೋಡಲಿಲ್ಲ
ಆಗೊಮ್ಮೆ ಈಗೊಮ್ಮೆ ಕಣ್ಮುಚ್ಚಿ ಗುಡಿಯ ಸುತ್ತಿದರು
ಹೊಳೆಯ ಸುಳಿಯನಾಗಲೀ, ಸೊಬಗನಾಗಲೀ
ಕಣ್ತುಂಬಿಕೊಳ್ಳಲಿಲ್ಲ
ಕಣ್ಕಟ್ಟು ಕಟ್ಟಿಕೊಂಡೇ ನಡೆದು ಬಂದ
ನಮ್ಮೂರ ಬಾಲೆಯರು
ಊರ ನೀರಿಗೆ ಹೋಗಲೇ ಇಲ್ಲ...

**ಪಿ. ಶಿಲ್ಪಾ**
ನಂ. ೪೨೧, ನ್ಯೂ ಎಕ್ಸ್‌ಟೆನ್ಷನ್, ಹೊಸಹುಂಡಿ ವಿಲೇಜ್
ಮೈಸೂರು – ೫೭೦೦೨೫

ನಾನು ಓದಿದ ಪುಸ್ತಕ

# ಪರಿಶಿಷ್ಟ ಜಾತಿ/ವರ್ಗ–ಅಲೆಮಾರಿ, ಅರೆ ಅಲೆಮಾರಿ, ಸೂಕ್ಷ್ಮ ಮತ್ತು ಅತಿಸೂಕ್ಷ್ಮ ಸಮುದಾಯಗಳ ಅಧ್ಯಯನ

ಕೃತಿಗಳು ಮತ್ತು ಲೇಖಕರ ಹೆಸರುಗಳು :

೧. **ಮಾಂಗ್ ಗಾರುಡಿ,** *ಹರ್ಷಕುಮಾರ್ ಕುಗ್ವೆ*
೨. **ಪಂಬದ,** *ಪದ್ಮಾ ಶಿವಮೊಗ್ಗ*
೩. **ಮಾಲ ಸನ್ಯಾಸಿ,** *ಪಾರ್ವತೀಶ ಬಿಳಿದಾಳೆ*
೪. **ಮಾಸ್ತೀಕರು,** *ಸದಾನಂದ ಗಂಗನಬೀಡು*
೫. **ಆಸಾದಿ,** ಬಿ. ಆರ್. ಭಾಸ್ಕರ್ ಪ್ರಸಾದ್
೬. **ಹಳ್ಳೇರ್,** ಮಹೇಂದ್ರಕುಮಾರ್ ಬಿ. ಪಿ.
೭. **ಹಂದಿಜ್ಯೋಗಿ,** ದಿನೇಶ್ ಕುಮಾರ್ ಎಸ್. ಪಿ.
೮. **ಭಂಗಿ,** ದಯಾನಂದ ಟಿ. ಕೆ.

(ಪುಟಗಳು ೧೫೦ ರಿಂದ ೩೦೦
ಪ್ರತಿಯೊಂದು ಪುಸ್ತಕದ ಬೆಲೆ ೧೦೦ ರೂ.)

ಪ್ರಧಾನ ಸಂಪಾದಕರು : **ಪ್ರೊ॥ ಆರ್. ಅನುರಾಧ ಪಟೇಲ್**
ಮಾರ್ಗದರ್ಶಕರು : **ಡಾ॥ ಸಿ. ಎಸ್. ದ್ವಾರಕಾನಾಥ್**

**ಡಾ॥ ಬಿ. ಆರ್. ಅಂಬೇಡ್ಕರ್ ಸಂಶೋಧನಾ ಸಂಸ್ಥೆ**
ಡಾ॥ ಬಿ. ಆರ್. ಅಂಬೇಡ್ಕರ್ ಭವನ, ವಸಂತನಗರ
ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು

**ಡಾ॥ ಎಂ. ವೆಂಕಟಸ್ವಾಮಿ**

**ನ**ನ್ನ ಕೈಗೆ ಸಿಕ್ಕಿದ ಮೇಲಿನ ಎಂಟು ಕೃತಿಗಳನ್ನು ಸಾವಕಾಶವಾಗಿ ಓದಿದ ಮೇಲೆ ನನ್ನ ಕೆಲವು ಅನಿಸಿಕೆಗಳನ್ನು ಇಲ್ಲಿ ದಾಖಲಿಸಿದ್ದೇನೆ: ದಯಾನಂದರ 'ಭಂಗಿ'ಯಲ್ಲಿ ಕೆಲವು ತಪ್ಪುಗಳಿವೆ ಎನಿಸುತ್ತದೆ. ಉದಾಹರಣೆ: ಮಲ ಹೊರುವವರನ್ನೆಲ್ಲ ಭಂಗಿಗಳು ಎಂದೇ ಕರೆಯಲಾಗಿದೆ. ಕರ್ನಾಟಕದ ಒಂದು ರಾಜ್ಯದಲ್ಲಿಯೇ ಇವರನ್ನು ಬೇರೆಬೇರೆ ಸ್ಥಳಗಳಲ್ಲಿ ಬೇರೆಬೇರೆ ಹೆಸರುಗಳಿಂದ ಕರೆಯಲಾಗುತ್ತದೆ. ಭಂಗಿಗಳು ಮೂಲವಾಗಿ ಪಂಜಾಬ್ ಮತ್ತು ಬಂಗಾಳದ ಕಡೆಯಿಂದ ಬಂದವರು ಎನ್ನಲಾಗಿದೆ. ತಮಿಳುನಾಡಿನಲ್ಲಿ ಇವರನ್ನು ಚಕ್ಕಲಿಯಾನ್ ಎಂದರೆ ಆಂಧ್ರಾದಲ್ಲಿ ಮಾದಿಗರು ಎನ್ನುತ್ತಾರೆ. ಕೆಜಿಎಫ್‌ನಲ್ಲಿ ಇರುವವರು ಮೂಲವಾಗಿ ಆಂಧ್ರದ ನೆಲ್ಲೂರು ಕಡೆಯಿಂದ ಬಂದವರು ಎಂದು ತಿಳಿದುಬರುತ್ತದೆ. ಆದರೆ ಲೇಖಕರು ಎಲ್ಲರನ್ನು 'ಭಂಗಿ' ಎಂದೇ ಉಲ್ಲೇಖಿಸಿದ್ದಾರೆ. ಇದೇ ಕೃತಿಯ ಪುಟ ೧೫೩ರ ಅನುಬಂಧದಲ್ಲಿ ಹಲವು ಹೆಸರುಗಳಿದ್ದು ಅವುಗಳಲ್ಲಿ ಭಂಗಿ ಒಂದು ಉಪಜಾತಿಯ ಹೆಸರು ಮಾತ್ರ ಆಗಿದೆ. ಇನ್ನು ಕೆಜಿಎಫ್ ಗಣಿಗಳು ನಿಂತ ಮೇಲೆ (೨೦೦೧) ಇವರು ಬೇರೆ ದಾರಿಯಿಲ್ಲದೆ ಮಲಹೊರುವ ಕೆಲಸಗಳಿಗೆ ಸೇರಿಕೊಂಡರು ಎನ್ನುತ್ತಾರೆ. ಗಣಿಗಳು ನಡೆಯುತ್ತಿದ್ದ ಕಾಲದಲ್ಲೂ ಇವರು ಇದೇ ಕೆಲಸ ಮಾಡುತ್ತಿದ್ದರು. ಕೆಲವರು ಮಾತ್ರ ಅಪವಾದವೆಂಬಂತೆ ಗಣಿಗಳಲ್ಲಿ ಇತರ ಸಣ್ಣಪುಟ್ಟ ಕೆಲಸಗಳನ್ನು ಮಾಡುತ್ತಿದ್ದರು. ಭಂಗಿ ಎನ್ನುವ ಪದವನ್ನು ಕೆಜಿಎಫ್‌ನಲ್ಲಿ ನಾನು ಇದುವರೆಗೂ ಕೇಳಿಯೇ ಇಲ್ಲ.

ಪಾರ್ವತೀಶ ಬಿಳಿದಾಳೆ ಅವರ ಕೃತಿ 'ಮಾಲ ಸನ್ಯಾಸಿ'ಯಲ್ಲಿ ಮಾಲ ದಾಸಿರಿ, ಮಾಲ ಜಂಗಮ ಇತ್ಯಾದಿಯ ಇಪ್ಪತ್ತು ಉಪಜಾತಿಗಳ ಪಟ್ಟಿ ಇದೆ. ಈ ಪಟ್ಟಿಯಲ್ಲಿ ಸೇರದ ಅನೇಕ ಮಾಲ ಜಾತಿಗಳಿದ್ದು, ಇನ್ನೂ ಎಷ್ಟು ಉಪ ಜಾತಿಗಳಿರಬಹುದು ಎನ್ನುವ ಪ್ರಶ್ನೆ ಏಳುತ್ತದೆ. ಇವೆಲ್ಲ ಹೇಗೆ ಕವಲೊಡೆದುಕೊಂಡವು ಎನ್ನುವ ಆಶ್ಚರ್ಯವೂ ಮೂಡುತ್ತದೆ. ಹಂದಿಜ್ಯೋಗಿಗಳು ತೆಲುಗು ಮೂಲದವರಾಗಿದ್ದು, ಇವರು ಕರ್ನಾಟಕದಲ್ಲಿ ವೀರಶೈವ /ಲಿಂಗಾಯಿತ ಮಠಗಳಿಗೆ ನಡೆದುಕೊಂಡರೂ, ವೈಷ್ಣವ ಮನೆದೇವರುಗಳನ್ನು ಹೊಂದಿರುವುದು ವಿಶೇಷ. ಇವರ ಮೂಲಪುರುಷ ವರಾಹ, ವಿಷ್ಣುವಿನ ಅವತಾರ. ಪ್ರತೀ ಉಪಜಾತಿಯೂ ಹಲವಾರು ಪೌರಾಣಿಕ ಐತಿಹ್ಯ ಕಥೆಗಳೊಂದಿಗೆ ಹೆಣೆದುಕೊಂಡಿರುವುದು ಎಲ್ಲಾ ಕಡೆಯೂ ಕಾಣಿಸುತ್ತದೆ. ಆದಿಮ ಪರಂಪರೆಯ ಬೇರುಗಳನ್ನು ಬಗೆದಂತೆಲ್ಲ ಅವುಗಳಲ್ಲಿ ಅನೇಕ ರೀತಿಯ ಹೊಸ ಹೊಸ ಹೊಳಹುಗಳು ದೊರಕುತ್ತವೆ. ಸಿಂಧ್ಬಾಗವತರು ಹಾಡುವ ಗಂಗಭಾರತದಲ್ಲಿ ನೆಲಮೂಲದ ಸಂಸ್ಕೃತಿಯ ಬೇರುಗಳಿದ್ದು, ಇದು ಕೂಡ ಎಲ್ಲ ನೆಲಮೂಲ ಸಂಸ್ಕೃತಿಯನ್ನು ಒಳಗೊಂಡಿದೆಯೇ ಅಥವಾ



ಅದೊಂದು ಭಾಗವಾಗಿದೆಯೇ ಎನ್ನುವುದು ತಿಳಿದಿಲ್ಲ. ಕೆಲವರು ಕೆಲವು ಭಾಗಗಳನ್ನು ಮಾತ್ರ ಹಾಡುತ್ತಾರೆ ಎನ್ನಲಾಗಿದೆ. ಕಾಲಾಂತರದಲ್ಲಿ ಈ ನೆಲಮೂಲ ಜನರ ಮೇಲೆ ನಾಥ, ಶೈವ, ವೈಷ್ಣವ, ದಾಸ, ಭಕ್ತಿ ಇತ್ಯಾದಿ ಪಂಥಗಳು ಪ್ರಭಾವ ಬೀರಿದವು. ಸಿಂಧ್ಭಾಗವತ ಹಾಡುವ ಜನರು ಆಂಧ್ರದಲ್ಲಿ ಇರುವರು ಎಂಬುದಾಗಿ ತಿಳಿದುಬರುತ್ತದೆ. ಇದು ಗೇಯ ಕಥೆಯಾಗಿ ಉಳಿದುಕೊಂಡಿದೆ!

ಮಾದಿಗರಿಗೆ ಮೂಲಪುರುಷ ಆದಿಜಾಂಬವ ಎನ್ನುವುದು ಎಲ್ಲ ಕಡೆಯೂ ಕಾಣಿಸುತ್ತದೆ. ಅದೇ ರೀತಿ ಮಾತಂಗ, ರೇಣುಕಾದೇವಿಯರ ಹೆಸರುಗಳು ಎಲ್ಲ ಪುರಾಣಗಳಲ್ಲೂ ಬರುತ್ತವೆ. ದ್ರಾವಿಡ ದೇಶದಲ್ಲಿ ಮೊದಲಿಗೆ ಬುಡಕಟ್ಟು ಜಾತಿಗಳ ಮಹಿಳೆ ಕೊಳ್ಳಗಳನ್ನು ಸ್ಥಾಪಿಸಿ ಕೃಷಿಯನ್ನು ಕಂಡುಹಿಡಿದ ಕಾರಣ ಮಾತೃಪ್ರಧಾನ ಸಮಾಜವಿತ್ತು. ಅನಂತರ ದಕ್ಷಿಣ ಮಧ್ಯಏಷ್ಯಾ ಕಡೆಯಿಂದ ಆಗಮಿಸಿದ ಆರ್ಯರು (ಪಿತೃಪ್ರಧಾನ) ಎಲ್ಲವನ್ನು ಛಿದ್ರಗೊಳಿಸಿ ಬುಡಕಟ್ಟು ಜಾತಿಗಳನ್ನು ಕೆಳಮಟ್ಟಕ್ಕೆ ತಂದುಬಿಟ್ಟರು. ಈ ನಡುವೆ ನೂರಾರು ವರ್ಷಗಳ ಕಾಲ ಆರ್ಯರು ಮತ್ತು ದ್ರಾವಿಡರ ಮಧ್ಯೆ ಯುದ್ಧಗಳು ನಡೆದಿರಬೇಕು. ಆದರೆ ದ್ರಾವಿಡ ಜನಾಂಗಗಳ ಪ್ರತಿಭಟನೆ ಅನೇಕ ರೀತಿಯಲ್ಲಿ ಇಂದಿಗೂ ಎಲ್ಲೆಲ್ಲೂ ಕಾಣಿಸುತ್ತದೆ. ಬುಡಕಟ್ಟು ಜಾತಿಗಳಲ್ಲಿ ಪಾರ್ವತಿ ದೇವಿಯ ಸಮೀಕರಣ ಮತ್ತು ನೆಲದ ನಂಟಿನ ಸಂಸ್ಕೃತಿ ಕಾಣಿಸುತ್ತದೆ. ಜೊತೆಗೆ, ಹಲವಾರು ಹೆಸರುಗಳುಳ್ಳ ಶಕ್ತಿದೇವತೆಗಳ (ದುರ್ಗೆ ಎಲ್ಲಮ್ಮ ಗಂಗಮ್ಮ) ಸಂಬಂಧಗಳನ್ನೂ ನೋಡಬಹುದು. ಕಂಚಿ ಕಾಮಾಕ್ಷಿಯ ಎಡ ಮತ್ತು ಬಲಗೈಗಳಲ್ಲಿ ಒಂಬತ್ತು ಮತ್ತು ಹದಿನೆಂಟು ಪಣಕಟ್ಟು ಸಮಾಜಗಳ ಇತಿಹಾಸ ಇರುವುದನ್ನು ನೋಡಬಹುದಾಗಿದೆ. ಸ್ಮಶಾನದಲ್ಲಿ ಹೆಣವನ್ನು ಹೂಳಲೊ ಇಲ್ಲ ಸುಡಲೊ ಬರುವ ವ್ಯಕ್ತಿಗಳು ಹೊಲೆಯರಿಂದ ಭೂಮಿಯನ್ನು ಪಡೆಯಲು ಕೊಡುವ ಹಣವೆ ನೆಲದೆರಿಗೆ (ಇದನ್ನು ಹರಿಶ್ಚಂದ್ರ ಸಾಂಗತ್ಯದಲ್ಲಿ ನೋಡಬಹುದು). ಈ ಶುಲ್ಕವನ್ನು ಕೊಡದೆ ಸ್ಮಶಾನದಲ್ಲಿ ಹೂಳುವ ಅಥವಾ ಸುಡುವ ಹಕ್ಕು ಯಾರಿಗೂ ಇರಲಿಲ್ಲ. ಬಹುಶಃ ಒಂದು ಕಾಲದಲ್ಲಿ ಹೊಲೆಯರು (ಹೊಲ ಅಥವಾ ನೆಲದ) ಭೂಮಿಯ ಒಡೆಯರಾಗಿದ್ದರು ಎನ್ನುವುದನ್ನು ಇದು ತೋರಿಸುತ್ತದೆ.

ಹಂದಿಜ್ಯೋಗಿ, ಹಳ್ಳೇರ್ ಕೃತಿಗಳಲ್ಲಿ ಬಹಳಷ್ಟು ಮಾಹಿತಿಗಳನ್ನು ಪೈ ಚಾರ್ಟ್, ಬಾರ್ ಚಾರ್ಟ್ ಮತ್ತು ಟೇಬಲ್‌ಗಳ ಮೂಲಕ ನೀಡಲಾಗಿದೆ. ಕೆಲವು ಕೃತಿಗಳಲ್ಲಿ ಆಯಾ ಜಾತಿಗಳು ಬಳಸುವ ಪದಗಳನ್ನು, ಕೆಲವು ಹಾಡುಗಳನ್ನು ಕಲೆ ಹಾಕಲಾಗಿದೆ. ಕೆಲವು ಕೃತಿಗಳಲ್ಲಿ ಮಾಹಿತಿಯನ್ನು ದಟ್ಟವಾಗಿ ಹೆಣೆದಿದ್ದರೆ, ಕೆಲವು ಕೃತಿಗಳನ್ನು ಇನ್ನಷ್ಟು ಚೆನ್ನಾಗಿ ಬರೆಯಬಹುದಾಗಿತ್ತು ಎನಿಸುತ್ತದೆ. ಮಾಂಗ್ ಗಾರುಡಿಯಲ್ಲಿ ಮಾಂಗ್ ಸಮುದಾಯ ಎದುರಿಸುತ್ತಿರುವ ಬಿಕ್ಕಟ್ಟುಗಳನ್ನು ಪರಿಹರಿಸುವಂತೆ ಒಂದು ಪಟ್ಟಿ ಮಾಡಿ ೧೯೬೦ರಲ್ಲಿ ಸರಕಾರಕ್ಕೆ ನೀಡಲಾಗಿತ್ತು. ಅದರಂತೆ ನೀರು, ಆಹಾರ, ಶೌಚಾಲಯ, ಜಾತಿ ಪ್ರಮಾಣ ಪತ್ರ, ವಸತಿ, ಸಮುದಾಯಭವನ, ಸ್ಮಶಾನಭೂಮಿ, ಶಿಕ್ಷಣ, ಆರೋಗ್ಯ, ಸಾಮಾಜಿಕ ಭದ್ರತೆ, ಉದ್ಯೋಗ – ಸಂವಿಧಾನದ ತಿದ್ದುಪಡಿ, ಒಳ ಮೀಸಲಾತಿ, ರಾಜಕೀಯ ಪ್ರಾತಿನಿಧ್ಯ, ಕೃಷಿಭೂಮಿ ಇತ್ಯಾದಿ ಅವರ ಬೇಡಿಕೆಗಳಾಗಿದ್ದವು. ಈಗ ದೇಶಕ್ಕೆ ಸ್ವಾತಂತ್ರ್ಯ ಬಂದು ೭೧ ವರ್ಷಗಳು ಕಳೆದುಹೋಗಿದ್ದರೂ ಮೇಲಿನ ಒತ್ತಾಯಗಳಲ್ಲಿ ಕಿಂಚಿತ್ತೂ ಮಾರ್ಪಾಡಾಗಿಲ್ಲ ಎನ್ನುವುದು ಖೇದಕರ ಸಂಗತಿ. ಇದನ್ನು ಈ ಎಲ್ಲಾ ಪರಿಶಿಷ್ಟ ಜಾತಿವರ್ಗದ ಅಲೆಮಾರಿ, ಅರೆ ಅಲೆಮಾರಿ, ಸಮುದಾಯಗಳ ಅಧ್ಯಯನದಲ್ಲಿ ನೋಡಬಹುದು. ಇವರೆಲ್ಲರಿಗೂ ಸಿಕ್ಕಿರುವ ಶಿಕ್ಷಣ, ಉದ್ಯೋಗ ಮತ್ತು ಮುಖ್ಯವಾಹಿನಿಯಲ್ಲಿನ ಅವರ ಪ್ರಾತಿನಿಧ್ಯ ಈಗಲೂ ತೀರ ಗೌಣವಾಗಿದೆ.

ಬಿ. ಆರ್. ಭಾಸ್ಕರ್ ಪ್ರಸಾದ್ ಅವರು 'ಆಸಾದಿ' ಪುರಾಣ – ಐತಿಹಾಸಿಕ ಅಧ್ಯಾಯಗಳ ಕೆಳಗೆ ಕುಲದ ಮೂಲ, ಮಾತಂ – ಮಾದಿಗರು, ಕಂಚಿಪುರಾಣ ಕಥೆಗಳನ್ನು ಚೆನ್ನಾಗಿ ಕಟ್ಟಿಕೊಟ್ಟಿದ್ದಾರೆ. ಇವುಗಳಲ್ಲಿ ವಿವಿಧ ಕಥಾರೂಪಗಳು ಸೇರಿದ್ದು, ಕೆಲವು ಇತ್ತೀಚಿನ ಕಥೆಗಳಂತೆ ಕಾಣಿಸುತ್ತವೆ. ಸದಾನಂದ ಗಂಗಬೀಡು ಅವರ 'ಮಾಸ್ತೀಕರು ಮತ್ತು ಪಾರ್ವತೀಶ ಬಿಳಿದಾಳೆ ಅವರ 'ಮಾಲ ಸನ್ಯಾಸಿ' ಕೃತಿಗಳಲ್ಲೂ ಮೇಲೆ ಹೇಳಿದ ಪೌರಾಣಿಕ ಕಥೆಗಳು ಮರುಕಳಿಸಿವೆ. ಆದರೆ ಆ ಕಥೆಗಳು ಈ ಅಧ್ಯಯನಗಳಲ್ಲಿ ಬರಲೇಬೇಕಾದ ಅನಿವಾರ್ಯವೂ ಇದೆ. 'ಹಳ್ಳೇರ್' ಮತ್ತು 'ಪಂಬದ' ಕೃತಿಗಳಲ್ಲಿ ಬೇರೆ ರೀತಿಯ ಪೌರಾಣಿಕ ಮತ್ತು ಐತಿಹ್ಯ ಕಥೆಗಳನ್ನು ನೋಡಬಹುದು. ಎಲ್ಲಾ ಸಾಮಾಜಿಕ ಅಧ್ಯಯನಗಳು ಸಾಕಷ್ಟು ಚೆನ್ನಾಗಿ ಮತ್ತು ಕ್ರಮಬದ್ಧವಾಗಿ ರಚಿತಗೊಂಡಿವೆ. 'ಹಳ್ಳೇರ್' ಮತ್ತು 'ಪಂಬದ' ಬುಡಕಟ್ಟುಗಳ ಪದ್ಧತಿಗಳು ಮೇಲಿನ ಬುಡಕಟ್ಟುಗಳಿಗೆ ಹೋಲಿಸಿದಾಗ ಸ್ವಲ್ಪ ಭಿನ್ನವಾಗಿ ಕಾಣಿಸುತ್ತವೆ. ಬಹುಶಃ ಇದಕ್ಕೆ ಕಾರಣ ಇವರು ವಾಸಿಸುವ ಪ್ರದೇಶ (ಕರಾವಳಿ/ತುಳುನಾಡು) ಇರಬೇಕು.

> **ಹರಣ**
>
> ಒಂದು
> ಪ್ರಾಣವನ್ನು
> ಒಮ್ಮೆಗೇ
> ತೆಗೆಯುತ್ತದೆ ಗಾಳ
> ಹಲವರ
> ಮಾನವನ್ನು
> ಒಟ್ಟಾಗಿ
> ತೆಗೆಯುತ್ತದೆ ದಾಳ
>
> **ಶಿವಮೊಗ್ಗ ಗೀತಾಶಾಸ್ತ್ರಿ**
> ಬೆಂಗಳೂರು – ೨೮

ಸಾವಿರಾರು ವರ್ಷಗಳ ಹಿಂದೆಯೆ ಭಾರತದೇಶ ಇಡೀ ಜಗತ್ತಿನಲ್ಲಿಯೇ ಕೆಲವು ವಿಭಾಗಗಳಲ್ಲಿ ಹೆಚ್ಚು ಅಭಿವೃದ್ಧಿ ಹೊಂದಿತೆಂದು ಕಂಡುಬರುತ್ತದೆ. ಉದಾಹರಣೆ : ಗಣಿಗಾರಿಕೆ, ಹರಪ್ಪ–ಮೊಹೆಂಜೊದಾರೊ, ನಾಗರಿಕ ತೊಟ್ಟಿಲುಗಳು, ರಾಮಾಯಣ, ಮಹಾಭಾರತ ಮತ್ತು ವೇದ – ಉಪನಿಷತ್ತುಗಳಲ್ಲಿ ದಾಖಲಾಗಿರುವ ವಿಷಯಗಳು. ಆಕಾಶಕ್ಕೆ ರಾಕೆಟ್ ಬಿಡುವ ಈ ಹೊತ್ತಿನಲ್ಲೂ ಅಲೆಮಾರಿ ಬುಡಕಟ್ಟು ಜನಾಂಗಗಳು ಮುಖ್ಯವಾಹಿನಿಯ ಜನರಿಂದ ದೂರವಾಗಿಯೇ ಉಳಿದುಕೊಂಡಿವೆ. ಆದರೆ ರಾಮಾಯಣ ರಚಿಸಿದ ವಾಲ್ಮೀಕಿ ಮತ್ತು ಮಹಾಭಾರತ ರಚಿಸಿದ ವ್ಯಾಸಮುನಿ ಬುಡಕಟ್ಟು ಸಮಾಜಗಳಿಗೆ ಸೇರಿದವರು. ಮತ್ತೆ ಇದೇ ಬುಡಕಟ್ಟು ಸಮಾಜಗಳು ವಿದ್ಯೆಯಿಂದ ಏಕೆ ದೂರವಾದವು ಎನ್ನುವುದು ಸ್ವಲ್ಪ ಗೊಂದಲದ ವಿಷಯವಾಗಿದೆ. ಇದೆಲ್ಲದಕ್ಕೂ ನಮಗೆ ನಿಖರವಾದ ಉತ್ತರಗಳು ದೊರಕುವುದಿಲ್ಲ. ಮಧ್ಯಏಷ್ಯಾದಿಂದ ಬಂದ ಆರ್ಯರು ನಿಧಾನವಾಗಿ ಇಲ್ಲಿನ ನೆಲಮೂಲ ಸಂಸ್ಕೃತಿಗಳನ್ನು ಪಲ್ಲಟಗೊಳಿಸಿ ಪಿತೃಪ್ರಧಾನ ಸಂಸ್ಕೃತಿಯನ್ನು ನೆಲೆಗೊಳಿಸಿದ್ದೇ ಅಲ್ಲದೆ ದ್ರಾವಿಡ ದೇವತೆಗಳನ್ನು ಆರ್ಯದೇವತೆಗಳ ಜೊತೆಗೆ ಸಮೀಕರಣ ಮಾಡಿ ತಮ್ಮ ತೆಕ್ಕೆಗೆ ತೆಗೆದುಕೊಂಡುಬಿಟ್ಟರು ಎನ್ನುವುದು ಒಂದು ವಾದ. ಜೊತೆಗೆ ಬುದ್ಧನನ್ನು ಹನ್ನೊಂದನೇ ಅವತಾರ ಎಂದು ಹೇಳಲಾಯಿತು.

ಇಡೀ ದೇಶದಲ್ಲಿ ೨೦೧೧ರ ಜನಗಣತಿಯ ಪ್ರಕಾರ ೪೦ ಲಕ್ಷ ಜನರು ಮಲ ಹೊರುವ ಕೆಲಸದಲ್ಲಿ ತೊಡಗಿಕೊಂಡಿದ್ದು ಅದರಲ್ಲಿ ೭ ಲಕ್ಷ ಜನರು ಪೌರಸಭೆ ಮತ್ತಿತರ ಸರಕಾರಿ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವುದಾಗಿ ದಾಖಲೆಗಳು ದೊರಕುತ್ತವೆ. ನೂರಕ್ಕೆ ಶೇಕಡಾ ತೊಂಬತ್ತು ಮಹಿಳೆಯರೇ ಈ ಕೆಲಸಗಳಲ್ಲಿ ತೊಡಗಿಕೊಂಡಿದ್ದಾರೆ. ಪ್ರಸ್ತುತ ಹೆಣ್ಣುಮಕ್ಕಳ ಸ್ವಾತಂತ್ರ್ಯದ ಬಗ್ಗೆ ಎಲ್ಲಾ ರೀತಿಯಲ್ಲೂ ಹೋರಾಟಗಳು ಕಾಣಿಸಿಕೊಳ್ಳುತ್ತಿವೆ. ಸರ್ಕಾರ ಮತ್ತು ನ್ಯಾಯಾಲಯಗಳು ಕೂಡ ಮಹಿಳೆಯರ ಪರವಾಗಿ ಸಾಕಷ್ಟು ಕಾಳಜಿಯನ್ನು ತೋರಿಸುತ್ತಿವೆ. ಆದರೆ ದಲಿತ ಮಹಿಳೆ ಇಂದಿಗೂ ದೇಶದ ಉದ್ದಗಲಕ್ಕೂ ಇಂತಹ ಹೇಯ ಕೆಲಸದಲ್ಲಿ ತೊಡಗಿಕೊಂಡಿದ್ದರೂ ಯಾವ ನ್ಯಾಯಾಲಯವೂ ಈ ನ್ಯಾಯವನ್ನು ತನ್ನ ಕೈಗೆ ತೆಗೆದುಕೊಳ್ಳದೆ ಇರುವುದು ದುರಂತವಾಗಿದೆ. ಇದಕ್ಕಿಂತ ದುರಂತವೆಂದರೆ ಸಂಸತ್ತುಭವನ, ವಿಧಾನ ಸೌಧಗಳಲ್ಲಿರುವ ಪರಿಶಿಷ್ಟ ಜಾತಿ/ವರ್ಗಗಳ ಸದಸ್ಯರು, ನಾಯಕರು, ಸಚಿವರು, ಉನ್ನತ ಅಧಿಕಾರಿಗಳು ಇದರ ಬಗ್ಗೆ ಪ್ರತಿಭಟನೆ ಮಾಡುವುದಿರಲಿ, ಅದರ ಬಗ್ಗೆ ಮಾತನಾಡುವುದೇ ಇಲ್ಲ. ಇವರೆಲ್ಲ ಸ್ಪೃಶ್ಯರ ಜಾತಿಗೆ ಸೇರಿಕೊಂಡಿದ್ದು, ದೇವಾನುದೇವತೆಗಳನ್ನೆಲ್ಲ ತಮ್ಮ ಮನೆಗಳಿಗೆ ಬರಮಾಡಿಕೊಂಡು ಪೂಜೆಗಳಲ್ಲಿ ತೊಡಗಿಕೊಂಡಿದ್ದಾರೆ. ಇವರಿಗೆ ಲಕ್ಷ್ಮಿ ಎಂದರೆ ಬಹಳ ಇಷ್ಟ.

✶ ✶ ✶

ಮೇಲಿನ ವಿಷಯಗಳನ್ನು ಬರೆದ ಮೇಲೆ ಇನ್ನೂ ಒಂದಷ್ಟು ವಿಷಯಗಳು ನನ್ನನ್ನು ಕಾಡುತ್ತಿವೆ. ಈ ಅಲೆಮಾರಿ ಬುಡಕಟ್ಟು ಸಮಾಜಗಳೆಲ್ಲ ಮೊದಲಿನಿಂದಲೂ ಹೀಗೆಯೇ ಇದ್ದವೆ? ಅಥವಾ ಕಾಲದ ಪಲ್ಲಟಗಳಲ್ಲಿ ಸಿಕ್ಕಿಕೊಂಡು ನಾಗರಿಕತೆಯ ಮಜಲಿನಿಂದ ಹಿಂದಕ್ಕೆ ಹೋಗಿ ನಿಂತುಕೊಂಡುಬಿಟ್ಟವೆ ಎನ್ನುವುದು. ಒಟ್ಟಿನಲ್ಲಿ ಮೇಲಿನ ಸಮಾಜಗಳು ಇಂದಿನ ನಾಗರಿಕತೆಯ ಜಗತ್ತಿನೊಂದಿಗೆ ಹೆಜ್ಜೆ ಹಾಕಲಾರದೆ ಮುಖ್ಯವಾಹಿನಿಯ ಬೇಲಿಯಾಚೆ ನಿಂತುಕೊಂಡು ಅಂಗಲಾಚುತ್ತಿವೆ. ಹಾಗೆ ನೋಡಿದರೆ ೧೯ನೇ ಶತಮಾನದಲ್ಲಿ ಬ್ರಿಟಿಷ್ ಭಾರತದಲ್ಲಿ ಮಹಾನ್ ಚೇತನಗಳಾದ ಜ್ಯೋತಿಬಾ

ಫುಲೆ ಮತ್ತು ಸಾವಿತ್ರಿ ಫುಲೆ ಅವರು ಮೊದಲಿಗೆ ಭಾರತದಲ್ಲಿ ದಲಿತ–ಹಿಂದುಳಿದ ಜಾತಿಗಳ ಮಕ್ಕಳಿಗೆ ಶಾಲೆಗಳನ್ನು ಪ್ರಾರಂಭಿಸಿದ ಮೇಲೆ ಆಧುನಿಕ ಭಾರತದಲ್ಲಿ ಶಿಕ್ಷಣ ಪ್ರಾರಂಭವಾಯಿತು. ಜ್ಯೋತಿಬಾ ಫುಲೆ ಅವರ ಶಿಕ್ಷಣದ ಬೆಳಕಿನಿಂದ ಅಂಬೇಡ್ಕರ್ ಎಂಬ ಮಹಾಚೇತನ ಹುಟ್ಟಿಕೊಂಡು ದೇಶಕ್ಕೆ ಸ್ವಾತಂತ್ರ್ಯ ಬರುವ ಹೊತ್ತಿಗೆ ಅತ್ಯುನ್ನತ ಸಂವಿಧಾನವನ್ನು ರಚನೆ ಮಾಡಿ ಮೂಕ ಜನರಿಗೆ ಬಾಯಿ ಕೊಟ್ಟರು. ಇದರಿಂದ ಇಡೀ ದೇಶ ಶಿಕ್ಷಣದ ಕಡೆಗೆ ದಾಪುಗಾಲು ಹಾಕಿ ನಡೆಯಿತು. ಸ್ವಾತಂತ್ರ್ಯಪೂರ್ವದಿಂದ ಇಂದಿನವರೆಗೂ ಬಡವಬಲ್ಲಿದರೆನ್ನದೆ ಎಲ್ಲರೂ ಸರ್ಕಾರಿ ಶಾಲಾಕಾಲೇಜುಗಳಲ್ಲಿ ಶಿಕ್ಷಣ ಪಡೆದು ದೇಶದ ಮುಖ್ಯವಾಹಿನಿಗೆ ಸೇರಿಕೊಳ್ಳುತ್ತಿದ್ದರು.

ಆದರೆ ಈಗ ಜಾಗತೀಕರಣ ಎಂಬ ಹೆಸರಿನಲ್ಲಿ ಸರ್ಕಾರಿ ಶಾಲಾಕಾಲೇಜುಗಳನ್ನು ಕೆಡವಿ ವಸಾಹತುಶಾಹಿ ಕಾಲದಲ್ಲಿ ಯುರೋಪ್– ಇಂಗ್ಲೆಂಡ್ ದೇಶಗಳು ನಮ್ಮ ಮೇಲೆ ನಡೆಸಿದ ದಬ್ಬಾಳಿಕೆಯನ್ನು ಈಗ ನಮ್ಮವರೇ ನಮ್ಮ ಮೇಲೆ ನಡೆಸುತ್ತಿದ್ದಾರೆ. ಅಂದರೆ ಬಡವರು ಇನ್ನಷ್ಟು ಬಡವರಾದರೆ ಹಣವಂತರು ಇನ್ನಷ್ಟು ಹಣವಂತರಾಗಿ ಮಾರ್ಪಡುತ್ತಿದ್ದಾರೆ. ಬ್ರಿಟಿಷರು, ಮೊಘಲರು ಬರುವುದಕ್ಕೆ ಮುಂಚೆ ರಾಜ ಮಹಾರಾಜರು ಜನರನ್ನು ಹಿಂಸಿಸುತ್ತಿದ್ದರು. ಈಗ ಕೇವಲ ಕೆಲವು ಬನಿಯಾ ಕಂಪನಿಗಳು ಇಡೀ ದೇಶದ ಸಂಪತ್ತನ್ನು ಗುಡ್ಡೆಹಾಕಿಕೊಂಡು ದರಬಾರು ನಡೆಸುತ್ತಿವೆ. ಬ್ಯಾಂಕುಗಳಲ್ಲಿ ಬಡವರು ಮತ್ತು ಮಧ್ಯಮ ವರ್ಗದವರು ಕೂಡಿಟ್ಟ ಕೋಟಿಕೋಟಿ ಹಣವನ್ನು ಸಿರಿವಂತರು ದೋಚಿಕೊಂಡು ದೇಶವನ್ನೇ ಬಿಟ್ಟು ಹಾರಿಹೋಗುತ್ತಿದ್ದಾರೆ. ಆದರೆ ದೇಶದ ಬೆನ್ನೆಲುಬಾದ ರೈತರು ಜುಜುಬಿ ಎರಡು ಮೂರು ಲಕ್ಷ ಸಾಲ ತೆಗೆದುಕೊಂಡು ಅದನ್ನೂ ಕಟ್ಟಲಾಗದೆ ಪ್ರಾಣ ಕಳೆದುಕೊಳ್ಳುತ್ತಿದ್ದಾರೆ. ಇದನ್ನೆಲ್ಲ ತುಂಬಲು ಸರ್ಕಾರ ಬಡವರು ಮತ್ತು ಮಧ್ಯಮ ವರ್ಗದ ಜನರ ದಿನನಿತ್ಯ ದುಡಿತದ ಮೇಲೆ ತೆರಿಗೆ ಹಾಕುತ್ತಿದೆ.

ಈಗ ಅಂಬೇಡ್ಕರ್ ರಚಿಸಿದ ಸಂವಿಧಾನ ಕಡತಗಳಲ್ಲೇ ಉಳಿದುಕೊಳ್ಳುವ ಪರಿಸ್ಥಿತಿ ಉಂಟಾಗಿದೆ. ಇಂತಹ ಕಾಲಘಟ್ಟದಲ್ಲಿ ಅಲೆಮಾರಿ ಬುಡಕಟ್ಟುಗಳು ಶಿಕ್ಷಣದಿಂದ ವಂಚಿತರಾಗಿ ಇನ್ನಷ್ಟು ಅಧೋಗತಿಗೆ ಹೋಗುತ್ತಿವೆ. ಮಧ್ಯಮ ತರಗತಿ ಎನ್ನುವ ಜನರೂ ಕೂಡ ಕಡುಬಡವರ ತಕ್ಕಡಿಗೆ ಬೀಳುತ್ತಿದ್ದಾರೆ. ಕಾಲಕಾಲಕ್ಕೆ ಜಗತ್ತಿನಲ್ಲಿರುವ ಕೇವಲ ಕೆಲವು ಬುದ್ಧಿವಂತ ಜನರು ಮಾತ್ರ ಇಡೀ ಜಗತ್ತಿನ ಜನರನ್ನೆಲ್ಲ ಮೋಸಗೊಳಿಸುತ್ತ ಬರುತ್ತಿದ್ದಾರೆ. ಈಗ ಇವರ ಕೈಗಳಿಗೆ ಹೊಸಹೊಸ ತಂತ್ರಜ್ಞಾನ ಮತ್ತು ಅದನ್ನು ಪ್ರಚಾರ ಮಾಡುವ ಮಾಧ್ಯಮಗಳು ಸಿಕ್ಕಿವೆ. ಅವುಗಳ ಮೂಲಕ ಜನಸಮೂಹವನ್ನು ರಾತ್ರೋರಾತ್ರಿ ಮರುಳುಗೊಳಿಸುತ್ತಿದ್ದಾರೆ.

ಪ್ರಸ್ತುತ ದೇಶದ ಎಲ್ಲಾ ಸರಕಾರಿ ವಿಶ್ವವಿದ್ಯಾಲಯಗಳಲ್ಲೂ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರುಗಳ ಕೊರತೆ ಇದ್ದು ಉಳಿದುಕೊಂಡಿರುವವರು ಜಾತಿ ರಾಜಕಾರಣದಲ್ಲಿ ತೊಡಗಿಕೊಂಡಿದ್ದಾರೆ. ಸರ್ಕಾರ ಇರುವ ವಿಶ್ವವಿದ್ಯಾಲಯಗಳನ್ನು ಸ್ಟ್ರೀಮ್ಲೈನ್ ಮಾಡದೆ ಹೊಸಹೊಸ ವಿಶ್ವವಿದ್ಯಾಲಯಗಳನ್ನು ಸ್ಥಾಪನೆ ಮಾಡುತ್ತಲೇ ಹೋಗುತ್ತಿದೆ. ಇಂತಹ ಸಮಯದಲ್ಲಿ ಪ್ರೊ॥ ಆರ್. ಅನುರಾಧ ಪಟೇಲ್ ಮತ್ತು ಡಾ॥ ಸಿ. ಎಸ್. ದ್ವಾರಕಾನಾಥ್ ಅವರು ಸಮಾಜ ಕಲ್ಯಾಣ ಇಲಾಖೆಯ ಮೂಲಕ ನೆಲದ ನಂಟಿನ ಇಂತಹ ಅಮೂಲ್ಯ ಕೃತಿಗಳನ್ನು ಹೊರತಂದಿರುವುದು ಶ್ಲಾಘನೀಯ ಕೆಲಸವಾಗಿದೆ. ಲೇಖಕರಿಗೆ ಅಭಿನಂದನೆಗಳು ಸಲ್ಲಬೇಕಾಗಿದೆ. ನಿಜವಾಗಿಯೂ ಕನ್ನಡದಲ್ಲಿ ಇದೊಂದು ಕುಲಶಾಸ್ತ್ರೀಯ ಸಾಮಾಜಿಕ ಅಧ್ಯಯನದ ಒಂದು ಸಾಂಸ್ಕೃತಿಕ ಕಟ್ಟಾಗಿದೆ.

**ಡಾ॥ ಎಂ. ವೆಂಕಟಸ್ವಾಮಿ**
# ೪ಡಿ, ಕಾಸ್ಮಾಸ್ ಟವರ್, ಕ್ಲಾಸಿಕ್ ಲ್ಯಾಂಡ್‌ಮಾರ್ಕ್ ಅಪಾರ್ಟ್‌ಮೆಂಟ್, ಕಸವನಹಳ್ಳಿ
ಮುಖ್ಯರಸ್ತೆ, ಅಮೃತ ಎಂಜಿನಿಯರಿಂಗ್ ಕಾಲೇಜ್ ಹತ್ತಿರ
ಬೆಂಗಳೂರು – ೫೬೦ ೦೩೫

## ಸಾದರ ಸ್ವೀಕಾರ

**ಕೊಂಘಕ್ ಕೊಮಾರ್ ನಾಲ್ಕು ಪಾದದ ಡಾಕ್ಟರ್**
(ಪೌರ್ವಾತ್ಯ ಮತ್ತು ಪಾಶ್ಚಾತ್ಯ ದೇಶಗಳ ಜನಪದ ಕಥೆಗಳು)
*ಬೇದ್ರೆ ಮಂಜುನಾಥ*
**ಪುಟ : ೧೨೦ ಬೆಲೆ : ರೂ. ೬೦**

**ಯುವಜನರ ಸಮಸ್ಯಾತ್ಮಕ ಮಾತು–ವರ್ತನೆಗಳಿಗೆ ಪರಿಹಾರವೇನು?** *ಡಾ॥ ಸಿ. ಆರ್. ಚಂದ್ರಶೇಖರ್*
**ಪುಟ : ೧೦೪ ಬೆಲೆ : ರೂ. ೭೫**

**ವ್ಯಕ್ತಿತ್ವ ದೋಷಗಳಿಗೆ ಪರಿಹಾರ ಹಾಗೂ ಉತ್ತಮ ವ್ಯಕ್ತಿತ್ವದ ಲಕ್ಷಣಗಳು** *ಡಾ॥ ಸಿ. ಆರ್. ಚಂದ್ರಶೇಖರ್*
**ಪುಟ : ೮೦ ಬೆಲೆ : ರೂ. ೬೦**

**ಭಾರತ ಸಂವಿಧಾನ** (ಅರ್ಥ–ಅರಿವು–ಜಾಗೃತಿ)
*ಎಂ. ಅಬ್ದುಲ್ ರೆಹಮಾನ್ ಪಾಷ*
**ಪುಟ : ೬೪ ಬೆಲೆ : ರೂ. ೫೦**

**ಲೂಯಿ ಬೋನಪಾರ್ಟೆಯ ಹದಿನೆಂಟನೇ ಬ್ರೂಮೇರ್ ಮತ್ತು ಕೂಲಿಗೆಲಸ ಹಾಗೂ ಬಂಡವಾಳ**
*ಕಾರ್ಲ್ ಮಾರ್ಕ್ಸ್*
*ಕನ್ನಡಕ್ಕೆ : ಕೆ. ಫಣಿರಾಜ್, ಡಾ॥ ಜಿ. ರಾಮಕೃಷ್ಣ*
**ಪುಟ : ೮೮ ಬೆಲೆ : ರೂ. ೧೦೦**

**ಮತಧರ್ಮದ ಕುರಿತು** *ಕಾರ್ಲ್ ಮಾರ್ಕ್ಸ್*
*ಕನ್ನಡಕ್ಕೆ : ಕೆ. ಎಲ್. ಗೋಪಾಲಕೃಷ್ಣ ರಾವ್*
**ಪುಟ : ೧೧೬ ಬೆಲೆ : ರೂ. ೧೨೫**

ಮೇಲಿನ ಆರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ಕೋಶಿ'ಸ್** (ಕವಿತೆಗಳು) *ಕೆ. ನಲ್ಲತಂಬಿ*
**ಪುಟ : ೪೦ ಬೆಲೆ : ರೂ. ೪೦**

**ಕಡೇ ನಾಲ್ಕು ಸಾಲು** *ಉಮಾ ಮುಕುಂದ*
**ಪುಟ : ೮೦ ಬೆಲೆ : ರೂ. ೮೦**

**ಅಕ್ಕರ ಮನೆ** – ೭೨ ಕೋಣೆಗಳು *ಡಾ॥ ಬಿ. ಎ. ವಿವೇಕ ರೈ*
**ಪುಟ : ೨೦೦ ಬೆಲೆ : ರೂ. ೨೦೦**

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಬಹುರೂಪಿ,** ೧, 'ನಾಕುತಂತಿ', ಬಸಪ್ಪ ಬಡಾವಣೆ, ಆರ್.ಎಂ.ವಿ. ೨ನೇ ಘಟ್ಟ, ಸಂಜಯನಗರ, ಬೆಂಗಳೂರು – ೫೬೦ ೦೯೪

**ಎಳಮಿಂಚು** (ಸ್ವರಚಿತ ಚುಟುಕು–ಕವನ–ವಚನ ಸಂಕಲನ)
*ಶಿ. ಕುಮಾರಸ್ವಾಮಿ*
**ಪುಟ : *iv*+೧೨೦ = ೧೨೪ ಬೆಲೆ : ರೂ. ೪೦**
**ಅಕ್ಷಯ ಪ್ರಕಾಶನ,** ಅಕ್ಷಯ ಕುಟುಂಬ, ನಂ. ೧೯೫೭, ಎಸ್. ಬಿ. ರಸ್ತೆ, ಕೃಷ್ಣರಾಜ ಪೇಟೆ, ಮಂಡ್ಯ ಜಿಲ್ಲೆ.

**ಆಯ್ದ ಹನಿಗಳು** *ಸಿ.ಪಿ.ಕೆ*
**ಪುಟ : ೯೬+*iv*=೧೦೦ ಬೆಲೆ : ರೂ. ೭೦**
**ಪ್ರೇಮ ಪ್ರಕಾಶನ,** 'ಬೆಳಕು', ನಂ. ೯೦, ವಿವೇಕಾನಂದ ಬ್ಲಾಕ್, ಶಿಕ್ಷಕರ ಬಡಾವಣೆ, ಮೈಸೂರು – ೨೯

**ಆಹಾರ ರಾಜಕೀಯ** *ಕೆ. ಸಿ. ರಘು*
**ಪುಟ : ೧೬೦ ಬೆಲೆ : ರೂ. ೧೩೦**
**ಅಭಿರುಚಿ ಪ್ರಕಾಶನ,** ನಂ. ೩೮೬, ೩ನೇ ಕ್ರಾಸ್, ೧೪ನೇ ಮುಖ್ಯರಸ್ತೆ, ಸರಸ್ವತಿಪುರ, ಮೈಸೂರು – ೯.

**ಸೂರ್ಯ ಕಂದೀಲು ಹಿಡಿದು ಬರಲಿ** (ಕವನ ಸಂಕಲನ)
*ಡಾ॥ ಸಿ. ಬಿ. ಚಿಲ್ಕರಾಗಿ*
**ಪುಟ : *xx*+ ೬೮ ಬೆಲೆ : ರೂ. ೮೦**
**ಅಲ್ಲಮ ಪ್ರಕಾಶನ,** ಕಾರಟಗಿ, ಕೊಪ್ಪಳ ಜಿಲ್ಲೆ

**ಗುಹೆ** (ಕಾದಂಬರಿ) *ಸಿದ್ಧಾರೂಢ ಗು. ಕಟ್ಟಿಮನಿ*
(ಶಕುಂತಲಾತನಯಸಿದ್ಧ)
**ಪುಟ : ೧೧೨ ಬೆಲೆ : ರೂ. ೮೦**

**ಮದ್ಯಕೂಟ** (ಕಾದಂಬರಿ) *ಸಿದ್ಧಾರೂಢ ಗು. ಕಟ್ಟಿಮನಿ*
**ಪುಟ : *viii*+೧೬೦=೧೬೮ ಬೆಲೆ : ರೂ. ೧೧೦**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಪ್ರಸಾದ್ ಏಜೆನ್ಸೀಸ್,** #೯೦೭/೫, ೪ನೇ ಮುಖ್ಯರಸ್ತೆ, ೧ನೇ ಕ್ರಾಸ್, ವಿದ್ಯಾರಣ್ಯಪುರಂ, ಮೈಸೂರು.

**"ಪುಟ್ಟ ದೇಶ ಸಿಂಗಾಪುರ" ಮತ್ತು "ಅಮೇರಿಕದಲ್ಲಿ ಕಳೆದ ದಿನಗಳು"** (ಪ್ರವಾಸ ಕಥನ)
*ಎಂ. ವಿ. ಭಟ್ ( ಶ್ರೀಮಿತ್ತೂರು)*
**ಪುಟ : *xxiv*+೬೦ ಬೆಲೆ : ರೂ. ೧೦೦**
**ಯುಗಪುರುಷ ಪ್ರಕಟಣಾಲಯ,**
ಶಿನ್ನಿಗೋಳಿ–೫೭೪ ೧೫೦ ದಕ್ಷಿಣ ಕನ್ನಡ

**ಗ್ರಾಮಾಭಿವೃದ್ಧಿಯ ಹರಿಕಾರ ಕೋಡಿಹಳ್ಳಿಯ ಚಂದ್ರಶೇಖರ ಪಾಟೀಲ** *ಹಾಲನಗೌಡ ಜಿ. ಪಾಟೀಲ*
**ಪುಟ: *xix*+೮೫+*xii* ಬೆಲೆ:ರೂ.೧೫೦**
**ಶ್ರೀ ಗುರು ದೊಡ್ಡಬಸವೇಶ್ವರ ಫೌಂಡೇಶನ್,** ಪುಣ್ಯಕ್ಷೇತ್ರ ನಂದಿಪುರ, ಬ್ಯಾಸಿಗಿದೇರಿ (ಅಂಚೆ) – ೫೮೩೨೧೨, ಹಗರಿಬೊಮ್ಮನಹಳ್ಳಿ (ತಾ) ಬಳ್ಳಾರಿ (ಜಿ)

**ಶರಣು ಶರಣಾರ್ಥಿ** (ಆತ್ಮಕತೆ)
*ಪ್ರೊ॥ ಹೇಮಂತ ಭೂತನಾಳ*
**ಪುಟ : *xxxviii*+೨೭೨+೨೦ ಬೆಲೆ : ರೂ. ೨೦೦**
**ಶ್ರೀಮತಿ ಸಾಯಿರಾಬಾನು ಎ. ಮಕಾನದಾರ**
**ನಿರಂತರ ಪ್ರಕಾಶನ,** ಗಾಂಧಿನಗರ, ೫ನೇ ಅಡ್ಡರಸ್ತೆ, ಲೊಯೊಲಾ ಕಾನ್ವೆಂಟ್ ಹಿಂಭಾಗ, ಬೆಟಗೇರಿ ಗದಗ – ೫೮೨೧೦೨

ನಮ್ಮದು ಸಾಮಾಜಿಕವಾಗಿ ಛಿದ್ರಗೊಂಡಿರುವ ಬಹುಸಾಮುದಾಯಿಕ ಸಮಾಜ. ಜಾತಿ, ಅಸ್ಪೃಶ್ಯತೆ, ಮತ, ಧರ್ಮ, ಭಾಷೆಯ ಕಾರಣಕ್ಕಾಗಿ ಪ್ರತ್ಯೇಕಗೊಂಡಿರುವ ಭಾರತೀಯರನ್ನು ಸಂವಿಧಾನಬದ್ಧ ರಾಜಕೀಯ ನೆಲೆಯಲ್ಲಿ ಬೆಸೆದಿರುವ ಅಪರೂಪದ ರಾಷ್ಟ್ರೀಯ ಒಕ್ಕೂಟ ವ್ಯವಸ್ಥೆ. ಮನುವಾದವು ತನ್ನ ಅಸ್ಪೃಶ್ಯತೆಯ ನೀತಿಯಿಂದಾಗಿ ಶತಮಾನಗಳಿಂದ ಮನುಷ್ಯ ಸಮಾಜವನ್ನು ಛಿದ್ರಗೊಳಿಸುತ್ತ ಬರುತ್ತಿದೆ. ಇದಕ್ಕೆ ಪ್ರತಿರೋಧವೆಂಬಂತೆ ಹಲವು ಪ್ರಗತಿಪರ ವ್ಯಕ್ತಿತ್ವ ಹಾಗೂ ವೈಚಾರಿಕ ಚಳವಳಿಗಳು ತಮ್ಮ ತಿಳುವಳಿಕೆಯ ಮೂಲಕ ಭಿನ್ನ ಸಮುದಾಯಗಳನ್ನು ಬೆಸೆಯುತ್ತಾ ಬರುತ್ತಿವೆ. ಪ್ರಸ್ತುತ ಭಾರತೀಯ ಸಮುದಾಯಗಳು ಜಾತಿ, ಧರ್ಮ, ರಾಜಕಾರಣದಿಂದಾಗಿ ಛಿದ್ರಗೊಳ್ಳುತ್ತ ಕೆಲವು ಜಾತಿವಾದಿ, ಮೂಲಭೂತವಾದಿಗಳಿಂದಾಗಿ ಸಹಿಷ್ಣುತೆ ಎಂಬುದು ಇಲ್ಲವಾಗಿ ಅಸಹಿಷ್ಣುತೆಯ ಹಿಂಸಾತ್ಮಕ ಪ್ರವೃತ್ತಿಗಳು ವಿಜೃಂಭಿಸತೊಡಗಿವೆ. ಪ್ರಶ್ನಿಸುವವರನ್ನು, ತಾತ್ವಿಕ ಭಿನ್ನಾಭಿಪ್ರಾಯ ಮಂಡಿಸುವವರನ್ನು ಹಿಂಸೆಯ ಮೂಲಕ ಬಲಿ ತೆಗೆದುಕೊಳ್ಳಲಾಗುತ್ತಿದೆ. ಆದಕಾರಣ ಅಭಿವ್ಯಕ್ತಿ ಸ್ವಾತಂತ್ರ್ಯವು ಆತಂಕಗೊಂಡು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿದೆ. ವೈಚಾರಿಕವಾಗಿ, ವಿಮರ್ಶಾತ್ಮಕವಾಗಿ, ಬಂಡಾಯದ ಧೋರಣೆಯಲ್ಲಿ ಮಾತನಾಡುವುದು, ಬರೆಯುವುದು ಅಪರಾಧ ಎಂಬಂತಹ ಭಯದ ವಿಷಕಾರಿ ವಾತಾವರಣ ಇಡೀ ಸಮಾಜವನ್ನು ಆವರಿಸುತ್ತಿದೆ. ಪ್ರಜಾಸತ್ತಾತ್ಮಕತೆಯನ್ನು ಪ್ರತಿಪಾದಿಸುವ ಭಾರತ ಸಂವಿಧಾನ ಹಾಗೂ ಸಾಮಾಜಿಕ ನ್ಯಾಯದ ಪ್ರಜಾಪ್ರಭುತ್ವ ವ್ಯವಸ್ಥೆ ಇಂದು ಗಂಡಾಂತರದಲ್ಲಿದೆ. ಏಕ ಭಾಷೆ, ಏಕ ಧರ್ಮ, ಏಕ ಸಂಸ್ಕೃತಿ, ಏಕ ನಾಗರಿಕ ಸಂಹಿತೆ, ಏಕ ಆಹಾರ ನೀತಿ ಎಂಬಂತಹ ಏಕಸ್ವಾಮ್ಯದ ಸರ್ವಾಧಿಕಾರಿ ಧೋರಣೆಗಳನ್ನು ಮೂಲಭೂತವಾದಿ ಪ್ರಭುತ್ವವು ಒತ್ತಾಯಪೂರ್ವಕವಾಗಿ ಹೇರುವ ಮೂಲಕ ಭಾರತದ ಸ್ವಾಭಾವಿಕ ಗುಣವಾದ ಬಹುತ್ವವನ್ನು ಹತ್ತಿಕ್ಕಲು ಪ್ರಯತ್ನಿಸುತ್ತಿದೆ. ಹಾಗಾದರೆ ಈ ಎಲ್ಲಾ ಸಾಮಾಜಿಕ ಕಂಟಕಗಳಿಂದ ಭಾರತವನ್ನು ರಕ್ಷಿಸುವ ಬಗೆ ಹೇಗೆ? ಮಾರ್ಗೋಪಾಯಗಳು ಯಾವುವು? ಎಂಬುವುದು ನಮ್ಮ ಮುಂದಿರುವ ಬಹುಮುಖ್ಯ ಸಾಂಸ್ಕೃತಿಕ ಪ್ರಶ್ನೆಗಳಾಗಿವೆ. ಇದಕ್ಕೆ ಪರಿಹಾರಮಾರ್ಗದ ಸಾಧ್ಯತೆಯ ಸೂಚನೆಗಳು ನಮ್ಮ ಪರಂಪರೆ ಮತ್ತು ಚರಿತ್ರೆಯಲ್ಲಿಯೇ ಇವೆ. ಜಾತಿ, ಮತ, ಧರ್ಮಗಳನ್ನು ಮೀರಿದ ವೈಚಾರಿಕ ಮನಸ್ಸುಗಳು ಸೈದ್ಧಾಂತಿಕ ಅರಿವಿನ ಮೂಲಕ ಸಾಮಾಜಿಕ ಹಾಗೂ ರಾಜಕೀಯ ಸಂಘಟನೆಯನ್ನು ರಚನಾತ್ಮಕವಾಗಿ ಸಾಧಿಸುವ ಮೂಲಕ ಬಹುಸಂಖ್ಯಾತ ಸಮುದಾಯಗಳಲ್ಲಿ ಜಾಗೃತಿಯನ್ನು ಉಂಟುಮಾಡುವ ಹಾಗೂ ಮನುವಾದ, ಮೂಲಭೂತವಾದಗಳಿಗೆ ಮಹಿಳೆ, ಶೋಷಿತ, ಹಿಂದುಳಿದ, ಆದಿವಾಸಿ, ಬುಡಕಟ್ಟು, ಅಲೆಮಾರಿ, ಪೌರಕಾರ್ಮಿಕ ಸಮುದಾಯಗಳು ಬಲಿಯಾಗದಂತೆ ಎಚ್ಚರ ವಹಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಜನಪರ ಚಳವಳಿಗಳ ಹೊಣೆಗಾರಿಕೆ ಮಹತ್ತರವಾದದ್ದಾಗಿದೆ.

ಸಮಾಜದ ಒಳಗಿರುವ ಎಲ್ಲ ಜಾತಿ, ಉಪಜಾತಿ, ಸಮುದಾಯಗಳು ನೆರೆಯ

# ಬಹುತ್ವ ಭಾರತದ ಉಳಿವಿಗಾಗಿ ಜನಪರ ಚಳವಳಿಗಳ ಮರುಧ್ರುವೀಕರಣ

ಸಮಾಜದ ಒಳಗಿರುವ ಎಲ್ಲ ಜಾತಿ, ಉಪಜಾತಿ, ಸಮುದಾಯಗಳು ನೆರೆಯ ಸಮುದಾಯಗಳೊಂದಿಗಿನ ಆಂತರಿಕ ಭಾವನಾತ್ಮಕ ಸಂಬಂಧವನ್ನು ಕಡಿದುಕೊಂಡು ಆತಂಕಕಾರಿಯಾಗಿ ಆಯಾ ಜಾತಿ, ಧರ್ಮಗಳಿಗೆ ಸೀಮಿತವಾಗುತ್ತ ದ್ವೀಪಗಳಾಗುತ್ತಿವೆ. ಪ್ರತಿಯೊಂದು ಜಾತಿ, ಧರ್ಮದ ಸಮುದಾಯಗಳು ತಮ್ಮ ಅಸ್ತಿತ್ವ, ಅಧಿಕಾರದ ಸಲುವಾಗಿ ಮಾತ್ರ ಆಲೋಚಿಸುವ ಸ್ವಾರ್ಥ ಮನೋಭಾವ ಇಡೀ ಸಮಾಜವನ್ನು ಅಪ್ರಜ್ಞಾವಸ್ಥೆಗೆ ದೂಡಿದೆ. ತನ್ನ ಉಳಿವಿಗಾಗಿ ಇನ್ನೊಂದು ಸಮುದಾಯದ ಹಿತವನ್ನು ಬಲಿತೆಗೆದುಕೊಳ್ಳುವ ನಿಟ್ಟಿನಲ್ಲಿ ಸಜ್ಜುಗೊಳ್ಳುವ ಮೂಲಕ ಅಮಾನವೀಯವಾಗಿ ವರ್ತಿಸುತ್ತಿವೆ. ಮಾನವೀಯ ವಿಚಾರಗಳಿಗಿಂತ ಜಾತಿ, ಧರ್ಮಗಳು ಮುಖ್ಯವಾಗುತ್ತಿವೆ. ಈ ಕಾರಣದಿಂದಾಗಿ ಜಾತಿ ಜಾತಿಗಳ ನಡುವೆ, ಧರ್ಮ ಧರ್ಮಗಳ ನಡುವೆ ಅಸಹನೆಗಳು ಹೆಚ್ಚಾಗುತ್ತ ಹಿಂಸಾತ್ಮಕ ಕ್ರೌರ್ಯಗಳು ತಾಂಡವವಾಡುತ್ತಿವೆ. ಇಂತಹ ಸಂದಿಗ್ಧತೆಯ ಸಂದರ್ಭದಲ್ಲಿ ಬಹುತೇಕ ಹೋರಾಟಗಳು ಆಯಾ ಜಾತಿ, ಧರ್ಮಗಳ ಹಿತಾಸಕ್ತಿಗೆ ತಕ್ಕ ಹಾಗೆ ಯೋಚಿಸುತ್ತಿವೆ. ಇಂತಹ ಅಮಾನವೀಯ ಸಂದರ್ಭದಲ್ಲಿ ಜನಪರವಾದ ಚಳವಳಿಯನ್ನು ಕಟ್ಟುವ ಬಗೆ ಹೇಗೆ? ತಾತ್ವಿಕ ಭಿನ್ನಾಭಿಪ್ರಾಯದ ಕಾರಣದಿಂದಾಗಿ ಚದುರಿ ಹೋಗಿರುವ ಕೆಲವು ಪ್ರಾಮಾಣಿಕವಾದ ದಲಿತ, ಹಿಂದುಳಿದ, ಮಹಿಳಾ, ರೈತ, ಕಾರ್ಮಿಕ ಜನಪರವಾದ ಚಳವಳಿಗಳನ್ನು ಮರುಧ್ರುವೀಕರಣಕ್ಕೆ ಒಳಪಡಿಸಬೇಕಾದ ಅಗತ್ಯವಿದೆ.



ಸಮುದಾಯಗಳೊಂದಿಗಿನ ಆಂತರಿಕ ಭಾವನಾತ್ಮಕ ಸಂಬಂಧವನ್ನು ಕಡಿದುಕೊಂಡು ಆತಂಕಕಾರಿಯಾಗಿ ಆಯಾ ಜಾತಿ, ಧರ್ಮಗಳಿಗೆ ಸೀಮಿತವಾಗುತ್ತ ದ್ವೀಪಗಳಾಗುತ್ತಿವೆ. ಪ್ರತಿಯೊಂದು ಜಾತಿ, ಧರ್ಮದ ಸಮುದಾಯಗಳು ತಮ್ಮ ಅಸ್ತಿತ್ವ, ಅಧಿಕಾರದ ಸಲುವಾಗಿ ಮಾತ್ರ ಆಲೋಚಿಸುವ ಸ್ವಾರ್ಥ ಮನೋಭಾವ ಇಡೀ ಸಮಾಜವನ್ನು ಅಪ್ರಜ್ಞಾವಸ್ಥೆಗೆ ದೂಡಿದೆ. ತನ್ನ ಉಳಿವಿಗಾಗಿ ಇನ್ನೊಂದು ಸಮುದಾಯದ ಹಿತವನ್ನು ಬಲಿ ತೆಗೆದುಕೊಳ್ಳುವ ನಿಟ್ಟಿನಲ್ಲಿ ಸಜ್ಜುಗೊಳ್ಳುವ ಮೂಲಕ ಅಮಾನವೀಯವಾಗಿ ವರ್ತಿಸುತ್ತಿವೆ. ಮಾನವೀಯ ವಿಚಾರಗಳಿಗಿಂತ ಜಾತಿ, ಧರ್ಮಗಳು ಮುಖ್ಯವಾಗುತ್ತಿವೆ. ಈ ಕಾರಣದಿಂದಾಗಿ ಜಾತಿ – ಜಾತಿಗಳ ನಡುವೆ, ಧರ್ಮ – ಧರ್ಮಗಳ ನಡುವೆ ಅಸಹನೆ ಹೆಚ್ಚಾಗುತ್ತ ಹಿಂಸಾತ್ಮಕ ಕ್ರೌರ್ಯಗಳು ತಾಂಡವವಾಡುತ್ತಿವೆ. ಇಂತಹ ಸಂದಿಗ್ಧತೆಯ ಸಂದರ್ಭದಲ್ಲಿ ಬಹುತೇಕ ಹೋರಾಟಗಳು ಆಯಾ ಜಾತಿ, ಧರ್ಮಗಳ ಹಿತಾಸಕ್ತಿಗೆ ತಕ್ಕ ಹಾಗೆ ಯೋಚಿಸುತ್ತಿವೆ. ಇಂತಹ ಅಮಾನವೀಯ ಸಂದರ್ಭದಲ್ಲಿ ಜನಪರ ಚಳವಳಿಯನ್ನು ಕಟ್ಟುವ ಬಗೆ ಹೇಗೆ? ತಾತ್ವಿಕ ಭಿನ್ನಾಭಿಪ್ರಾಯದ ಕಾರಣದಿಂದಾಗಿ ಚದುರಿಹೋಗಿರುವ ಕೆಲವು ಪ್ರಾಮಾಣಿಕವಾದ ದಲಿತ, ಹಿಂದುಳಿದ, ಮಹಿಳಾ, ರೈತ, ಕಾರ್ಮಿಕ ಜನಪರವಾದ ಚಳವಳಿಗಳನ್ನು ಮರುಧ್ರುವೀಕರಣಕ್ಕೆ ಒಳಪಡಿಸಬೇಕಾದ ಅಗತ್ಯವಿದೆ. ಎಲ್ಲ ಜನಪರ ಚಳವಳಿಗಳು ತಮ್ಮ ವೈಯಕ್ತಿಕ ಬಿಗುಮಾನಗಳನ್ನು ಬದಿಗಿಟ್ಟು ಸೈದ್ಧಾಂತಿಕ ತಳಹದಿಯ ಮೇಲೆ ಒಗ್ಗೂಡುವ ಮೂಲಕ ಸಾಮುದಾಯಿಕ ಹೋರಾಟವನ್ನು ಹುಟ್ಟುಹಾಕುವುದು ಈ ಕಾಲದ ಬಹುಮುಖ್ಯ ಹೊಣೆಗಾರಿಕೆಯಾಗಿದೆ. "ಜನಪರ ಚಳವಳಿಗಳ ಮರುಧ್ರುವೀಕರಣ" ಎಂಬುದು ಇಂದು ಎಲ್ಲಾ ಸಮಾಜಪರ ಚಳವಳಿಗಳ ಮುಂದಿರುವ ಮತ್ತು ಅನಿವಾರ್ಯವಾಗಿ ಬಗೆಹರಿಸಿಕೊಳ್ಳಲೇಬೇಕಾದ ಸವಾಲಾಗಿದೆ. ಜನಪರ ಚಳವಳಿಗಳು ವೈಚಾರಿಕವಾಗಿ, ಪ್ರಾಮಾಣಿಕವಾಗಿ; ತಮ್ಮೆಲ್ಲ ಸ್ವಪ್ರತಿಷ್ಠೆ–ಸ್ವಾರ್ಥಗಳನ್ನು ಮೀರಿ, ವ್ಯಕ್ತಿವಾದ, ಜಾತಿ–ಧರ್ಮವಾದಿ ಪಕ್ಷಪಾತದ ಧೋರಣೆಗಳನ್ನು ದಾಟಿ ಮರುಧ್ರುವೀಕರಣಕ್ಕೆ ಒಳಗಾಗದ ಹೊರತು ಮೂಲಭೂತವಾದವನ್ನು ಮಟ್ಟಹಾಕಲಿಕ್ಕೆ ಮತ್ತು ಭಾರತ ಸಂವಿಧಾನ, ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಉಳಿಸಿಕೊಳ್ಳಲಿಕ್ಕೆ ಸಾಧ್ಯವಿಲ್ಲ.

ಜನಪರ ಚಳವಳಿಗಳ ಮರುಧ್ರುವೀಕರಣವೆಂದರೆ, ಬಹುಸಮುದಾಯಗಳ ಸಾಮಾಜಿಕ ಧ್ರುವೀಕರಣವೆಂದೇ ಅರ್ಥ. ಕಿ. ರಂ. ನಾಗರಾಜ ಅವರು ಎಂ. ಡಿ. ನಂಜುಂಡಸ್ವಾಮಿ ಅವರನ್ನು ಕುರಿತು ಬರೆದಿರುವ : "...ಚಳವಳಿಗಳು ನಾಯಕ ಕೇಂದ್ರಿತ ಚಳವಳಿಗಳಾಗಿರುವುದರಿಂದ ಅವು ವಿಫಲವಾಗುತ್ತವೆ. ಅವು ನಿಜವಾದ ಶಿಕ್ಷಣ ಕೇಂದ್ರಿತ ಚಳವಳಿಗಳಲ್ಲ. ಚಳವಳಿಗಳು ಶಿಕ್ಷಣ ಕೇಂದ್ರಿತವಾಗಬೇಕು. ...ಯಾವುದೇ ಚಳವಳಿ ಅಂದಂದೇ ಹುಟ್ಟಿ ಕೊನೆಗೊಳ್ಳುವುದಿಲ್ಲ; ಅದು ನಿರಂತರವಾದದ್ದು, ಜಾಗೃತವಾದದ್ದು. ಅದರಿಂದ ಉಂಟಾಗುವ ಕಾವನ್ನು ಹೇಗೆ ಜೀವಂತವಾಗಿಸಿಕೊಳ್ಳಬೇಕು... ಚಳವಳಿ ಎನ್ನುವ ಚೈತನ್ಯ ನಿರ್ಭೀತಿಯಿಂದ ಹುಟ್ಟುತ್ತದೆ ಹಾಗೂ ನಿರ್ಭೀತಿಯಿಂದ ಮಾತ್ರ ಚಳವಳಿ ಸಾಧ್ಯ. ಚಳವಳಿ ಅನ್ನುವುದು ನಿರಂತರವಾದಾಗ ಮಾತ್ರ ನಮ್ಮ ದೇಶದಲ್ಲಿ ಶಕ್ತಿ ರಾಜಕಾರಣದ ನಿಜವಾದ ಕ್ರೌರ್ಯವನ್ನು ಎದುರಿಸಲು ಸಾಧ್ಯವಿದೆ..." (ತೆರೆದ ಪಠ್ಯ : ಸಂ. ನಟರಾಜ ಹುಳಿಯಾರ್) ಈ ಮಾತುಗಳಲ್ಲಿ ಜನಪರ ಚಳವಳಿಗಳನ್ನು ಮರುಧ್ರುವೀಕರಣಗೊಳಿಸಲು ಬೇಕಾಗಿರುವ ಮಾರ್ಗಸೂಚಿ ಸೂತ್ರಗಳಿವೆ. ಜನಪರ ಚಳವಳಿಗಳ ಮುಂಚೂಣಿಯಲ್ಲಿರುವ ಸಂಗಾತಿಗಳು ಕಿ. ರಂ. ನಾಗರಾಜರ ಈ ಮಾತುಗಳನ್ನು ಆತ್ಮಾವಲೋಕನದ ಸಂಕೇತವಾಗಿ, ತಾವು ಮುಂದೆ ಚಲಿಸಬೇಕಾಗಿರುವ ಮಾರ್ಗದ ಕೈದೀವಿಗೆಯಾಗಿ ಪರಿವರ್ತಿಸಿಕೊಳ್ಳಬೇಕಿದೆ.

ಜಾತಿವಾದ, ಕೋಮುವಾದ, ಮೂಲಭೂತವಾದ, ಉಗ್ರವಾದ, ಧರ್ಮಾಂಧತೆಗಳು ಗಟ್ಟಿಗೊಳ್ಳುತ್ತ, ಹುಸಿ ಸಂಸ್ಕೃತಿ – ರಾಷ್ಟ್ರೀಯತೆ – ಧರ್ಮದ ಹೆಸರಲ್ಲಿ ಸಾಮಾಜಿಕ ಮನಸ್ಸು ಹಾಗೂ ಬೌದ್ಧಿಕತೆಯನ್ನು ಭ್ರಷ್ಟಗೊಳಿಸುತ್ತಿರುವ ಶಕ್ತಿಗಳನ್ನು ಬಗ್ಗುಬಡಿಯಲು ಜನಪರ ಚಳವಳಿಗಳ ಮರುಧ್ರುವೀಕರಣ ಬಹಳ ಮುಖ್ಯ. ಇದು ಸಾಧ್ಯವಾಗ ಬೇಕಾದರೆ, ಮಾನವೀಯತೆಯ ನೆಲೆಗಟ್ಟಿನ ಮೇಲೆ ನಮ್ಮ ಮನಸ್ಸು ಮತ್ತು ಸಮುದಾಯಗಳು ಧ್ರುವೀಕರಣಗೊಳ್ಳಬೇಕಿದೆ. ತನ್ನ ಜಾತಿ, ಧರ್ಮದ ಕಟ್ಟುಪಾಡಿನ ಎಲ್ಲೆಗಳನ್ನು ಮೀರಲಿಕ್ಕೆ ಸಾಧ್ಯವಾಗದ ಯಾವೊಬ್ಬ ವ್ಯಕ್ತಿಯೂ, ಚಳವಳಿಯೂ, ಸಂಘಟನೆಯೂ 'ಜನಪರ'ವಾಗಿರಲಿಕ್ಕೆ ಸಾಧ್ಯವಿಲ್ಲ. ಇವತ್ತಿಗೂ ಸಹ ಯಾವುದೇ ಜಾತಿ, ಧರ್ಮ, ಸಮುದಾಯದಲ್ಲಿ ಕೊಲೆ, ಸುಲಿಗೆ, ಹಲ್ಲೆ, ಜೀವಂತ ದಹನ, ಹೆಣ್ಣುಮಕ್ಕಳ ಮೇಲೆ ಅತ್ಯಾಚಾರವಾದರೆ ಆಯಾ ಜಾತಿ, ಧರ್ಮ, ಸಮುದಾಯದವರೇ ಪ್ರತಿಭಟಿಸಬೇಕು ಎಂಬ ವಾತಾವರಣವಿದೆ. ಬೇರೆ ಜಾತಿ, ಧರ್ಮ, ಸಮುದಾಯದವರಿಗೂ ಆ ಘಟನೆಗಳಿಗೂ ಸಂಬಂಧವಿಲ್ಲ ಎನ್ನುವ ಭಾವನೆ ನಮ್ಮ ಸಮಾಜದಲ್ಲಿದೆ. ಈ ಬಗೆಯ ನಡೆ ಸಮಾಜದ ಅಂತಃಕರಣದ ಆತ್ಮಹತ್ಯೆಯನ್ನು ಹೇಳುತ್ತದೆ. ಹಾಗಾಗಿ ಬದನವಾಳು, ಕಂಬಾಲಪಲ್ಲಿ, ಖೈರ್ಲಾಂಜಿಗಳಲ್ಲಿ ದಲಿತರ ಕೊಲೆ, ಅತ್ಯಾಚಾರಗಳಾದಾಗ ಬಹುತೇಕ ದಲಿತರೇ ಪ್ರಶ್ನಿಸಿ ಪ್ರತಿಭಟಿಸಬೇಕಾಯಿತು ಏಕೆ? ಈ ಘಟನೆಗಳು ಬೇರೆ ಜಾತಿ, ಧರ್ಮದವನ್ನು ಕಾಡುವುದಿಲ್ಲ ಏಕೆ? ದೆಹಲಿಯ ಜಂತರ್‌ಮಂತರ್‌ನಲ್ಲಿ ಭಾರತ ಸಂವಿಧಾನವನ್ನು ಸುಟ್ಟು ಪ್ರಜಾಪ್ರಭುತ್ವ ವಿರೋಧಿ ಘೋಷಣೆ ಕೂಗಿದಾಗಲೂ, 'ನಾವು ಬಂದಿರುವುದೇ ಸಂವಿಧಾನ ಬದಲಾಯಿಸಲಿಕ್ಕೆ' ಎಂದು ಜನಪ್ರತಿನಿಧಿಯೊಬ್ಬರು ಬಹಿರಂಗವಾಗಿ ಹೇಳಿ ಅಪಚಾರ ಮಾಡಿದಾಗಲೂ ಸಹ ದಲಿತರಷ್ಟೇ ಪ್ರತಿಭಟಿಸಬೇಕು, ಏಕೆ? ಹಾಗಾದರೆ ದಲಿತೇತರರಿಗೂ ಭಾರತ ಸಂವಿಧಾನಕ್ಕೂ ಸಂಬಂಧವಿಲ್ಲವೆ? ದಲಿತೇತರ ಸಮುದಾಯದವರು ಸಂವಿಧಾನದಿಂದ ಏನನ್ನೂ ಪಡೆದುಕೊಂಡಿಲ್ಲವೆ? ಸಂವಿಧಾನ ವಿರೋಧಿಗಳು ಇರುವ ಹಾಗೆಯೇ ಎಲ್ಲಾ ಜಾತಿ, ಧರ್ಮ, ಸಮುದಾಯಗಳಲ್ಲಿ ಸಂವಿಧಾನ ಪರವಾಗಿ, ಪ್ರಜಾಸತ್ತಾತ್ಮಕವಾಗಿ, ಮಾನವೀಯವಾಗಿ ಯೋಚಿಸುವ ಪ್ರಗತಿಪರ, ಜಾತ್ಯತೀತ, ಧರ್ಮಾತೀತ ವ್ಯಕ್ತಿತ್ವಗಳು ಇರುವುದನ್ನು ಮರೆಯುವ ಹಾಗಿಲ್ಲ.

ಜಾತಿವಾದಿ ಸಮಾಜ ಅಂಬೇಡ್ಕರ್ ಅವರನ್ನು ಹೆಜ್ಜೆಹೆಜ್ಜೆಗೂ ಅವಮಾನಿಸಿದೆ. ತಮಗಾದ ಅವಮಾನದ ವಿರುದ್ಧ ತಮ್ಮೊಳಗಿದ್ದ ಅಗಾಧ ಸಿಟ್ಟನ್ನು ಅಂಬೇಡ್ಕರ್ ಅವರು ಎಂದಿಗೂ ಪ್ರತೀಕಾರವಾಗಿ, ದ್ವೇಷವಾಗಿ ಪರಿವರ್ತಿಸಲೇ ಇಲ್ಲ. ಚೌದಾರ್ ಕೆರೆ, ಕಾಳರಾಮ ದೇವಾಲಯ ಪ್ರವೇಶದಂತಹ ಘಟನೆಗಳ ಸಂದರ್ಭದಲ್ಲಿ ತಮ್ಮ ಮೇಲೆ ಹಲ್ಲೆಯಾದಾಗಲೂ ಅಂಬೇಡ್ಕರ್ ಸಹನೆಯನ್ನು ಪಾಲಿಸಿದರು. ಆಗುವ ರಕ್ತಪಾತವನ್ನು ತಡೆದರು. ದೇಶದ ಹಿತದೃಷ್ಟಿಯಿಂದ ಶೋಷಿತರ ಬಿಡುಗಡೆಗಾಗಿ ಹೋರಾಟ ಮಾಡಿ ಪಡೆದುಕೊಂಡು ಬಂದಿದ್ದ ವಿಶೇಷ ಮತದಾನದ ಹಕ್ಕನ್ನು ಬಲಿ ಕೊಟ್ಟು ಪೂನಾ ಒಪ್ಪಂದಕ್ಕೆ ಸಹಿ ಮಾಡಿ ಗಾಂಧೀಜಿಯ ಪ್ರಾಣ ಉಳಿಸಿದರು. ತಮಗಾದ ವಂಚನೆ, ಅವಮಾನವನ್ನು ಮರೆತು ಅಖಂಡ ಭಾರತದ ಅಸ್ತಿತ್ವಕ್ಕಾಗಿ, ಯಾವುದೇ ಸಮುದಾಯಕ್ಕೂ ವಂಚನೆ ಬಗೆಯದೆ ಭಾರತ ಸಂವಿಧಾನವನ್ನು ಬರೆದುಕೊಟ್ಟರು. ಇಂದಿಗೂ ಭಾರತ ಒಕ್ಕೂಟ ದೇಶವಾಗಿ ಉಳಿದಿದೆ ಎಂದರೆ ಅದಕ್ಕೆ ಭಾರತ ಸಂವಿಧಾನವೇ ಕಾರಣ. ಆದರೆ, ಸಂವಿಧಾನ ವಿರೋಧಿ ಷಡ್ಯಂತ್ರಗಳು ನಡೆಯುತ್ತಿವೆ. ಈ ಹೊತ್ತಿನಲ್ಲಿ ನಮ್ಮೆಲ್ಲಾ ಸ್ವಾರ್ಥ, ಜಾತಿವಾದಿ ಧೋರಣೆಗಳನ್ನು ಮೀರಿ ಯೋಚಿಸಬೇಕಾದ ಅಗತ್ಯವಿದೆ. ತ್ಯಾಗ ಮಾಡದೆ ಭರವಸೆಯ ನಾಡನ್ನು ಕಟ್ಟಲಿಕ್ಕೆ ಸಾಧ್ಯವಿಲ್ಲ. ವ್ಯಷ್ಟಿಗಿಂತ ಸಮಷ್ಟಿ ಪ್ರಜ್ಞೆ ಮುಖ್ಯವಾಗಬೇಕು. ಹೋರಾಟಗಾರರಲ್ಲಿ ವೈಚಾರಿಕ ಅರಿವು ಮೂಡಿಸುವ ಸಲುವಾಗಿ ದಲಿತ ಸಂಘರ್ಷ ಸಮಿತಿ ಮಾಡುತ್ತಿದ್ದ ಅಧ್ಯಯನ ಶಿಬಿರಗಳು ಇಂದು ಮರುಹುಟ್ಟು ಪಡೆಯಬೇಕಿದೆ. 'ಹೋರಾಟದ ಸಾಗರಕ್ಕೆ ಸಾವಿರಾರು ನದಿಗಳು' ಎಂಬ ಸಿದ್ಧಲಿಂಗಯ್ಯನವರ ಕವಿತೆಯ ಸಾಲುಗಳು ಜನಪರ ಚಳವಳಿಗಳ ಮರುಧ್ರುವೀಕರಣಕ್ಕೆ ಪ್ರಮೇಯವಾಗಬೇಕಿದೆ. ಈ ಅರ್ಥದಲ್ಲಿಯೇ ಕಾರ್ಲ್ ಮಾರ್ಕ್ಸ್ ಹೇಳಿದ್ದು ಜಗತ್ತಿನ ಶ್ರಮಿಕರೆಲ್ಲ ಒಗ್ಗಟ್ಟಾಗಿ ಎಂದು.

ಯಾವುದೇ ವ್ಯಕ್ತಿ, ಸಮುದಾಯಗಳನ್ನು ಹೊರಗಿಟ್ಟು 'ಧ್ರುವೀಕರಣ'ದ ಬಗೆಗೆ ಮಾತನಾಡಲಿಕ್ಕೆ ಸಾಧ್ಯವಿಲ್ಲ. ಧ್ರುವೀಕರಣ ಎಂಬುದೇ ಒಳಗೊಳ್ಳುವಿಕೆಯನ್ನು ಹೇಳುತ್ತದೆ. ಕವಿರಾಜಮಾರ್ಗಕಾರ ಕೂಡ ಒಳಗೊಳ್ಳುವಿಕೆಯನ್ನು ಕುರಿತು "ಕಸವರಮೆಂಬುದು ನೆರೆಸೈರಿಸಲಾರ್ಪಡೆ ಪರಧರ್ಮಮಂ, ಪರ ವಿಚಾರಮುಮಂ" ಎಂದು ಹೇಳುತ್ತಾನೆ. ಸಹಮಾನವರ ಧರ್ಮ, ವಿಚಾರವನ್ನು ಸಹಿಸಿಕೊಳ್ಳುವುದೇ, ಒಳಗೊಳ್ಳುವುದೇ ಸಾಮರಸ್ಯದ ಬದುಕಾಗಿದೆ. ಬುದ್ಧ "ಬಹುಜನ ಹಿತಾಯ ಬಹುಜನ ಸುಖಾಯ ಲೋಕಾನುಕಂಪಾಯ" ಎಂದು ಹೇಳುತ್ತ, ತನ್ನ ಭಿಕ್ಕು ಸಂಘದಲ್ಲಿ ಭಿನ್ನ ಸಮುದಾಯದವರನ್ನು, ಹೆಣ್ಣುಮಕ್ಕಳನ್ನು ಒಳಗೊಳ್ಳುವುದರ ಜೊತೆಗೆ ಎಲ್ಲರಿಗೂ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದನು. ಜೇಡರದಾಸಿಮಯ್ಯನಾದಿಯಾಗಿ ವಚನಕಾರರು ಜಾತಿ ಬಿಟ್ಟವರೆಲ್ಲ ಶರಣರು ಎನ್ನುವ ಪರಿಕಲ್ಪನೆಯನ್ನು ತಂದು ಅನುಭವ ಮಂಟಪ ಕಟ್ಟಿ, ಅಂತರಜಾತಿ ವಿವಾಹ, ಸಹಪಂಕ್ತಿ ಭೋಜನವನ್ನು ಪ್ರತಿಪಾದಿಸುತ್ತ ಸಾಮಾಜಿಕ ಪರಿವರ್ತನ ಚಳವಳಿಯನ್ನು ಕಟ್ಟಿದರು. "ಇವನಾರವ ಎನ್ನದಿರಯ್ಯ ಇವನಮ್ಮವ ಎಂದೆನಿಸಿರಯ್ಯ" ಎಂಬ ಬಸವಣ್ಣನವರ ಮಾತು ಒಳಗೊಳ್ಳುವಿಕೆಯ ಮಹತ್ವವನ್ನು ಪ್ರತಿಪಾದಿಸುತ್ತದೆ. ಸೂಫಿ, ತತ್ವಪದಕಾರರು, ಮಂಟೇಸ್ವಾಮಿ,

ಮಹದೇಶ್ವರ, ಜುಂಜಪ್ಪ, ಮೈಲಾರಲಿಂಗ, ತಿಪ್ಪೇಸ್ವಾಮಿ, ಕೊಡೆಕಲ್ ಬಸವಣ್ಣ ಸಾಮಾಜಿಕ ಧ್ರುವೀಕರಣವನ್ನು ಸಾಧ್ಯವಾಗಿಸಿದ ಸಾಂಸ್ಕೃತಿಕ ಪರಂಪರೆಗಳಾಗಿವೆ.

೧೯೭೩ರಲ್ಲಿ ಮೈಸೂರಿನಲ್ಲಿ ಹುಟ್ಟಿಕೊಂಡ 'ಜಾತಿವಿನಾಶ ವೇದಿಕೆ'; ಕುವೆಂಪು ಉದ್ಘಾಟಿಸಿದ 'ಬರಹಗಾರರು ಮತ್ತು ಕಲಾವಿದರ ಒಕ್ಕೂಟ'; ಪ್ರಸನ್ನ ಅವರು ಕಟ್ಟಿದ 'ಸಮುದಾಯ ಸಂಘಟನೆ'; ಪಿ. ಲಂಕೇಶ್, ಪೂರ್ಣಚಂದ್ರ ತೇಜಸ್ವಿ, ಕೆ. ರಾಮದಾಸ್ ಮುಂತಾದವರು ಕಟ್ಟಿದ 'ಪ್ರಗತಿ ರಂಗ'; ದೇವನೂರ ಮಹಾದೇವ, ಜಿ. ಎಚ್. ನಾಯಕ, ಕೆ. ರಾಮದಾಸ್, ರಾಜಶೇಖರಕೋಟಿ, ಬಿ. ಕೃಷ್ಣಪ್ಪ ಮುಂತಾದವರು ಮೈಸೂರಿನಲ್ಲಿ ಕಟ್ಟಿದ ಅಂತರ್‌ಜಾತಿ-ಧರ್ಮೀಯ ವಿವಾಹಗಳಿಗೆ ವೇದಿಕೆಯಾದ 'ಮಾನವ ಮಂಟಪ'; ಪ್ರೊ॥ ಎಂ. ಡಿ. ನಂಜುಂಡಸ್ವಾಮಿ ಅವರು ಗೆಳೆಯರೊಟ್ಟಿಗೆ ಸೇರಿ ಕಟ್ಟಿದ 'ಸಮಾಜವಾದಿ ಚಳವಳಿ'; ಡಾ॥ ಸಿದ್ಧಲಿಂಗಯ್ಯ, ಅಗ್ರಹಾರ ಕೃಷ್ಣಮೂರ್ತಿ, ಡಿ. ಆರ್. ನಾಗರಾಜ್ ಮುಂತಾದವರು ಸೇರಿ ಬೆಂಗಳೂರಿನಲ್ಲಿ ಕಟ್ಟಿದ 'ವಿಚಾರವಾದಿ ಪರಿಷತ್' ಹಾಗೂ ಕಿ. ರಂ. ನಾಗರಾಜ್, ಜಿ. ಎಸ್. ಶಿವರುದ್ರಪ್ಪ, ಬಸವರಾಜ ಕಲ್ಗುಡಿ, ಡಿ. ಆರ್. ನಾಗರಾಜ, ಸಿ. ಬಸವಲಿಂಗಯ್ಯ, ಎಚ್. ಜನಾರ್ಧನ(ಜನ್ನಿ) ಮುಂತಾದವರನ್ನು ಒಳಗೊಂಡು ಡಾ॥ ಸಿದ್ಧಲಿಂಗಯ್ಯನವರು ಬೆಂಗಳೂರಿನ ಕೊಳಗೇರಿಗಳಲ್ಲಿ ಆರಂಭಿಸಿದ ರಾತ್ರಿ ಶಾಲೆಗಳು; ಎಲ್ಲ ಜಾತಿಯ ಪ್ರಜ್ಞಾವಂತರು ಸೇರಿ ಹುಟ್ಟುಹಾಕಿದ 'ದಲಿತ ಸಂಘರ್ಷ ಸಮಿತಿ' ಹಾಗೂ

# ಹಸಿವು



ತುಳಿದು ಏಳಬೇಡ
ಎದ್ದು ತುಳಿಯಬೇಡ

ಹೊಟ್ಟೆಯ ಚಲನೆ ಇದು
ಒಂದು ತುಣುಕು ರೊಟ್ಟಿಗಾಗಿ
ಕಳ್ಳತನ ಮಾಡಿದೆ ಕಳ್ಳನಾದೆ
ಬೊಕ್ಕಸಕ್ಕೇ ಬಾಯಿ ಹಾಕಿದರು
ಮುಗಿಲಿಗೇ ಕೈ ಹಾಕಿ ಚುಕ್ಕೆಗಳ ದೋಚಿದರು
ಬೆಳಕು ಕನಸುಗಳ ಹೊತ್ತರು
ಬಾಬುಗಳಾದರು

ಹಂದಿಗಳು ಹಾದಿಬೀದಿಗಳ ಹಸನುಮಾಡುತ್ತ
ಗಟಾರುಗಳಿಗೂ ಗಂಟುಬಿದ್ದಿವೆ
ಕೊಬ್ಬಿ ಗುಟುರುಹೊಡೆಯುತ್ತಿವೆ
ಕಡಿದರೆ ಊರಿಗೇ ಹಬ್ಬವಾಗಬಹುದು
ಇದು ಹೊಟ್ಟೆಯ ಶಾಸ್ತ್ರ




ಬಹಳ ವರ್ಷಗಳಿಂದ ನಾವು
ಹೊಟ್ಟೆ ತುಂಬ ಉಣ್ಣಲಿಲ್ಲ
ಒಂದ್ಹೊತ್ತು ಎರಡ್ಹೊತ್ತು
ರಾತ್ರಿ ಒಂದು ತಂಬಿಗೆ ನೀರೇ ಗತಿ

ನಾವು ಯಾರಿಗೆ ಬೇಡಿಕೊಳ್ಳುವುದು
ಆ ಕಲ್ಲಿನ ದೇವರಿಗೆ?
ಕೊಬ್ಬಿ ನಿಂತ ಕೋಣಗಳಿಗೆ?

ಕಲ್ಲು ದೇವರಿಗೆ ಹೊಟ್ಟೆಯೂ ಇಲ್ಲ, ಹಸಿವೂ ಇಲ್ಲ
ಕಲ್ಲಾಗಿ ಕುಂತ ದೇವರಿಗೆ ನಮ್ಮ ದನಿ ಕೇಳುವುದೂ ಇಲ್ಲ
ಇನ್ನು, ಕಿವಿ ಇರುವ ಕೋಣಗಳಿಗೆ
ಅನ್ನ ಸಾಕಷ್ಟಿದೆಯಲ್ಲ
ಅವರ ತಿಜೋರಿ, ಕಪಾಟು, ಸಂದೂಕು, ಬಂದೂಕು
ಕಿಚನ್ನು ಬೆಡ್ರೂಮು ಬೆಡ್‌ಗಳಲ್ಲೂ
ಹ್ಹಾ!

ಅವರ ಪಾಯಿಖಾನೆಗಳಲ್ಲಿ ಸಾಕಷ್ಟಿದೆ ತಿನ್ನಲು
ಕೊಳ್ಳೆಹೊಡೆಯಲೇ ದೋಚಲೇ ಬಾಚಲೇ
ತಿನ್ನಲು
ಹಸಿವೆಯಿಂದಲೇ ಕಳ್ಳನಾದೆ

ನಮ್ಮ ರಟ್ಟೆಗಳಿಂದ ಕಟ್ಟಿದ ಮನೆಯಲ್ಲಿ
ನೀವು ಹಾಯಾಗಿದ್ದೀರಿ ಹೊಟ್ಟೆತುಂಬ ತಿಂದು
ಬನ್ನಿ ನಮ್ಮ ಜೋಪಡಿಗಳಿಗೆ

ಕಾವಲಿಲ್ಲದ ಕನಸುಗಳಿಗೆ
ತೆವಳುತ್ತಿವೆ ನಮ್ಮ ಹೊಟ್ಟೆ
ಖಾಲಿ ತಾಟುಗಳಲಿ

ಆಗೊಮ್ಮೆ ಈಗೊಮ್ಮೆ
ತಂಗಳು ಅನ್ನ ನೀಡುವ
ನಿಮ್ಮ ಕೋಮಲ ಕೈಗಳಿಗೆ
ನಮ್ಮ ನೂರೊಂದು ಸಲಾಮುಗಳು

**ಬಸವರಾಜ ರಾಯಪ್ಪ ರೇವಣ್ಣವರ**
ಶಿಕ್ಷಕರು, ಮೊರಾರ್ಜಿ ದೇಸಾಯಿ ವಸತಿ ಶಾಲೆ, ಕಟಕೋಳ, ರಾಮದುರ್ಗ ತಾಲ್ಲೂಕು, ಬೆಳಗಾವಿ

'ಬಂಡಾಯ ಸಾಹಿತ್ಯ ಸಂಘಟನೆ'; ದೇವನೂರ ಮಹಾದೇವ, ಕೆ. ಎಸ್. ಪುಟ್ಟಣ್ಣಯ್ಯ, ಇಂದೂಧರ ಹೊನ್ನಾಪುರ ಮುಂತಾದವರು ಸೇರಿ ರೈತ ಸಂಘಟನೆ ಹಾಗೂ ದಲಿತ ಸಂಘಟನೆಗಳನ್ನು ಒಗ್ಗೂಡಿಸಿ ಕಟ್ಟಿದ 'ಕರ್ನಾಟಕ ಸರ್ವೋದಯ ಪಕ್ಷ' – ಈ ಎಲ್ಲವೂ ಕೂಡ ನಮ್ಮ ಪರಂಪರೆಯಲ್ಲಿ ಘಟಿಸಿರಬಹುದಾದ 'ಜನಪರ ಮನಸ್ಸುಗಳ ಧ್ರುವೀಕರಣ'ದ ಪ್ರಾಮಾಣಿಕ ಪ್ರಯತ್ನಗಳಾಗಿವೆ. ಎಪ್ಪತ್ತರ ದಶಕದಲ್ಲಿ ಹುಟ್ಟಿಕೊಂಡ ದಲಿತ ಚಳವಳಿಯು ಸಾಮಾಜಿಕ ಧ್ರುವೀಕರಣದ ಬಹುದೊಡ್ಡ ಪ್ರಯೋಗ. ಬ್ರಾಹ್ಮಣ, ಲಿಂಗಾಯತ, ಒಕ್ಕಲಿಗ, ಮುಸ್ಲಿಂ, ಕುಂಬಾರ, ಕುರುಬ, ಈಡಿಗ, ದೀವರ, ಬೆಸ್ತ, ನಾಯಿಂದ, ಗೊಲ್ಲ, ವಾಲ್ಮೀಕಿ ಮುಂತಾದ ಸಮುದಾಯಗಳು ಡಿ.ಎಸ್.ಎಸ್.ನಲ್ಲಿ ಧ್ರುವೀಕರಣಗೊಂಡು ಚಳವಳಿಯನ್ನು ರೂಪಿಸಿದವು. ಗುಲ್ಬರ್ಗಾದಲ್ಲಿ ಡಿ.ಎಸ್.ಎಸ್. ಸಂಘಟನೆಯನ್ನು ಬ್ರಾಹ್ಮಣ ಮಂಗ್ಳೂರು ವಿಜಯ ಆರಂಭಿಸಿದರು. ಬ್ರಾಹ್ಮಣ ನಾಗಭೂಷಣ ಅವರು ಡಿ.ಎಸ್.ಎಸ್.ನ ಜಿಲ್ಲಾ ಸಂಚಾಲಕರಾಗಿದ್ದರು. ಈಡಿಗ ಸಮುದಾಯದ ಶಿವಾನಂದ ಕುಗ್ವೆ, ಸಾಗರ ತಾಲ್ಲೂಕಿನ ವಾಲ್ಮೀಕಿ ಸಮುದಾಯದ ಸಿದ್ಧರಾಮಣ್ಣ, ಚನ್ನಗಿರಿ ತಾಲ್ಲೂಕಿನ ಮುಸ್ಲಿಂ ಸಮುದಾಯದ ಸಮದ್, ಬೇಲೂರು ತಾಲ್ಲೂಕಿನ ಡಿ.ಎಸ್.ಎಸ್. ಸಂಘಟನೆಯ ಸಂಚಾಲಕರಾಗಿದ್ದರು. ಕುಂಬಾರ ಸಮುದಾಯದ ಶೇಷಗಿರಿಯಪ್ಪನ ಕೊಲೆಯಾಗಿ, ಆತನ ಮಗಳು ಅನಸೂಯಮ್ಮಳ ಮೇಲೆ ಅತ್ಯಾಚಾರವಾದಾಗ ಡಿ.ಎಸ್.ಎಸ್. ಬೀದಿಗಿಳಿದು ಹೋರಾಟ, ಜಾಥಗಳನ್ನು ಸಂಘಟಿಸಿತು. ಚಂದ್ರಪ್ರಸಾದ್ ತ್ಯಾಗಿ ಅವರು ಡಿ.ಎಸ್.ಎಸ್. ಮತ್ತು ರೈತ ಸಂಘಟನೆಯನ್ನು ಬೆಸೆಯುವ ಮೂಲಕ ಹಾಸನದ ಅರಸೀಕೆರೆ ಹತ್ತಿರದ ಅಮೃತಮಹಲ್ ಕಾವಲ್ ಭೂ ಹೋರಾಟವನ್ನು ಮಾಡಿ ಬ್ರಾಹ್ಮಣರನ್ನೂ ಒಳಗೊಂಡಂತೆ ಎಲ್ಲ ಜಾತಿಯ ಭೂಹೀನರಿಗೆ ಭೂಮಿಯನ್ನು ಹಂಚಿ 'ಸಮತಾ ನಗರ'ವನ್ನು ಕಟ್ಟಿದರು. ಇದೇ ಡಿ.ಎಸ್.ಎಸ್. ಕ್ಯಾಸಿನಕೆರೆ, ಸಿದ್ಲಿಪುರ ಭೂ ಹೋರಾಟಗಳನ್ನು ಮಾಡಿ ಭೂಹೀನ ಲಿಂಗಾಯತ, ದಲಿತೇತರ ಸಮುದಾಯಗಳಿಗೆ ಭೂಮಿ ಕಲ್ಪಿಸಿಕೊಟ್ಟಿದೆ.

ಎಲ್ಲಾ ಜಾತಿ, ಧರ್ಮ ಸಮುದಾಯಗಳಲ್ಲಿರುವ ಪ್ರಾಮಾಣಿಕ ಜಾತ್ಯತೀತ, ಧರ್ಮಾತೀತ ಪ್ರಗತಿಪರರನ್ನು ಒಳಗೊಳ್ಳುವುದರ ಜೊತೆಗೆ : ಹೊಲೆಯ–ಮಾದಿಗರು ತಮ್ಮೊಳಗಿನ ಎಡ–ಬಲ ಅಸಮಾಧಾನವನ್ನು ಮರೆತು ದಲಿತ ಸಮುದಾಯದಲ್ಲಿರುವ ಉಳಿದ ಉಪಜಾತಿಗಳ ಸಂಕಟಗಳ ಬಗೆಗೆ, ಆದಿವಾಸಿ, ಬುಡಕಟ್ಟು, ಅಲೆಮಾರಿ, ಪೌರಕಾರ್ಮಿಕ ಸಮುದಾಯಗಳ ಅಸ್ತಿತ್ವದ ಬಗೆಗೆ ಯೋಚಿಸುವ ಮತ್ತು ಟಚಬಲ್–ಎಸ್.ಸಿ.ಗಳು ಅನ್‌ಟಚಬಲ್–ಎಸ್.ಸಿ.ಗಳ ಬಗೆಗೆ ವಿಶ್ವಾಸದಿಂದ ನಡೆದುಕೊಳ್ಳುವಂತಾಗಬೇಕು. ಒಕ್ಕಲಿಗರು, ಜಾತಿ ಜಮೀನ್ದಾರಿಕೆಯ ಕ್ರೌರ್ಯವನ್ನು ಖಂಡಿಸುವ; ಲಿಂಗಾಯತರು, ಮಠಮಾನ್ಯಗಳಲ್ಲಿ ಸಾಂಸ್ಥೀಕರಣಗೊಂಡಿರುವ ಜಾತಿವ್ಯವಸ್ಥೆಯನ್ನು ಪ್ರಶ್ನಿಸುವ; ಮುಸಲ್ಮಾನರು ಭಯೋತ್ಪಾದನೆಯ ವಿರುದ್ಧ ಬಂಡೆದ್ದು 'ನಾವು ಭಾರತೀಯರು' ಎಂದು ನಿರ್ಭಿಡೆಯಿಂದ ಮಾತನಾಡುವ ಹಾಗೂ ಎಲ್ಲಾ ಜಾತಿ–ಧರ್ಮಗಳಲ್ಲಿರುವ ಬಡವರು, ನಿರುದ್ಯೋಗಿಗಳು, ಶ್ರಮಿಕರು, ಮಹಿಳೆಯರ ಮೂಲಭೂತ ಹಕ್ಕುಬಾಧ್ಯತೆಗಳನ್ನು ಕುರಿತು ಚರ್ಚಿಸಿ ಹೋರಾಟ ರೂಪಿಸುವ ಸನ್ನಿವೇಶ ನಿರ್ಮಾಣಗೊಂಡಾಗ ಮಾತ್ರ 'ಸಾಮಾಜಿಕ, ಸಾಮುದಾಯಿಕ ಜನಪರ ಚಳವಳಿಗಳ ಧ್ರುವೀಕರಣ' ಸಾಧ್ಯ.

ಜನಪರ ಚಳವಳಿಗಳು ಪಾರ್ಶ್ವ ದೃಷ್ಟಿಕೋನದಿಂದ ಹೊರಗೆ ಬರಬೇಕಿದೆ. ದಲಿತರ ಕೊಲೆ, ಅತ್ಯಾಚಾರ, ಸಾಮಾಜಿಕ ಬಹಿಷ್ಕಾರ, ಮರ್ಯಾದಾ ಹತ್ಯೆ, ಮೀಸಲಾತಿ, ಭೂಮಿ ಸಮಸ್ಯೆ, ಗೋಮಾಂಸ ಆಹಾರದ ವಿಚಾರ ಬಂದಾಗ, ಅಂಬೇಡ್ಕರ್ ಮತ್ತು ಸಂವಿಧಾನಕ್ಕೆ ಅವಮಾನವಾದಾಗ – ದಲಿತ ಚಳವಳಿಯು; ರೈತರ ಆತ್ಮಹತ್ಯೆ, ಬೆಂಬಲ ಬೆಲೆ, ಸಾಲ ಮನ್ನಾ, ಕಾವೇರಿ, ಮಹದಾಯಿ ನೀರಿನ ಸಮಸ್ಯೆಗಳನ್ನು ಕುರಿತು – ರೈತ ಸಂಘಟನೆಯು; ಪೌರಕಾರ್ಮಿಕರ ಸಮಸ್ಯೆಗಳನ್ನು ಕುರಿತು – ಸಫಾಯಿ ಕರ್ಮಚಾರಿ ಸಂಘಟನೆಗಳು; ಕಾರ್ಮಿಕರ ಸಮಸ್ಯೆಗಳನ್ನು ಕುರಿತು–ಕಮ್ಯುನಿಸ್ಟ್, ಕಾರ್ಮಿಕ ಸಂಘಟನೆಗಳು; ಅಂಗನವಾಡಿ, ಗಾರ್ಮೆಂಟ್ಸ್ ಮಹಿಳೆಯರ ಸಮಸ್ಯೆಗಳನ್ನು ಕುರಿತು – ಮಹಿಳಾ ಸಂಘಟನೆಗಳು; ಮುಸ್ಲಿಂ, ಕ್ರೈಸ್ತರ ಸಮಸ್ಯೆಗಳನ್ನು ಕುರಿತು – ಅಲ್ಪಸಂಖ್ಯಾತ ಸಂಘಟನೆಗಳು; ಹಿಂದುಳಿದ ವರ್ಗಗಳ ಸಮಸ್ಯೆಗಳನ್ನು ಕುರಿತು – ಕೇವಲ ಹಿಂದುಳಿದ ವರ್ಗಗಳ ಸಂಘಟನೆಗಳು ಮಾತ್ರ ಹೋರಾಟ ಮಾಡಬೇಕು. ಒಂದು ಮತ್ತೊಂದಕ್ಕೆ ಸಂಬಂಧವಿಲ್ಲ, ಅದು ನಮ್ಮ ಜವಾಬ್ದಾರಿಯಲ್ಲ ಎಂಬ ಸಂಕುಚಿತ ಭಾವನೆಗಳನ್ನು ಮೀರದಿದ್ದರೆ ಜನಪರ ಚಳವಳಿಗಳ ಧ್ರುವೀಕರಣ ಅಸಾಧ್ಯ. ಯಾವುದೇ ಚಳವಳಿ ತಾನು ಪ್ರತಿನಿಧಿಸುವ ಸಮುದಾಯದ ಸಂಕಟದ ಜೊತೆಗೆ ಇತರೆ ಸಮುದಾಯಗಳ ಸಂಕಟಗಳನ್ನು ಗಮನಿಸದೆ ಹೋದರೆ ಆ ಚಳವಳಿ ಜನಪರವಾಗಿರಲಿಕ್ಕೆ ಸಾಧ್ಯವಿಲ್ಲ. ಉದಾಹರಣೆಗೆ, ರೈತರ ಸಮಸ್ಯೆಗಳ ಬಗೆಗೆ ಮಾತನಾಡುವ ರೈತ ಸಂಘಟನೆಯು; ಭೂಹೀನ ಕೃಷಿ ಕೂಲಿಕಾರ್ಮಿಕರ ಸಮಸ್ಯೆಗಳು, ಭೂಮಿಯ ಅಸಮಾನ ಹಂಚಿಕೆ, ರಾಷ್ಟ್ರೀಕರಣ ಬಗೆಗೆ ಪ್ರಾಮಾಣಿಕವಾಗಿ ಮಾತನಾಡಬೇಕಾಗುತ್ತದೆ. ಆಗ ಮಾತ್ರ ರೈತ ಚಳವಳಿ ಜನಪರವಾಗಿರಲಿಕ್ಕೆ ಸಾಧ್ಯ.

ಚಳವಳಿಗಳು ಯಾವುದೇ ರಾಜಕೀಯ ಪಕ್ಷಗಳ, ಸರ್ಕಾರಗಳ ವಕಾಲತ್ತು ವಹಿಸುವುದನ್ನು ಬಿಟ್ಟು ಪಾರದರ್ಶಕವಾಗಿ ವರ್ತಿಸಬೇಕು. ಸಂಘಟನೆಗಳ ನಾಯಕತ್ವ ಪ್ರಜಾಸತ್ತಾತ್ಮಕಗೊಳ್ಳದಿದ್ದರೆ ಮತ್ತು ಕನಿಷ್ಠ ಪ್ರಮಾಣದ ತ್ಯಾಗ, ಬದ್ಧತೆ, ಪ್ರಾಮಾಣಿಕತೆ, ಸಾಮಾಜಿಕ ಮುಜುಗರದಂತಹ ಸಾರ್ವಜನಿಕ ವ್ಯಕ್ತಿತ್ವವನ್ನು ಮೈಗೂಡಿಸಿಕೊಳ್ಳದಿದ್ದರೆ ಜನಪರ ಚಳವಳಿಗಳ ಧ್ರುವೀಕರಣ ಅಸಾಧ್ಯ. ನಾರಾಯಣಗುರು, ಫುಲೆ ದಂಪತಿ, ಶಾಹುಮಹಾರಾಜ, ಸಯ್ಯಾಜಿರಾವ್ ಗಾಯಕವಾಡ, ನಾಲ್ವಡಿ ಕೃಷ್ಣರಾಜ ಒಡೆಯರ್, ಗಾಂಧಿ, ಅಂಬೇಡ್ಕರ್, ಪೆರಿಯಾರ್, ಗಾಡಗೆ ಮಹಾರಾಜ, ಕುದ್ಮುಲ್ ರಂಗರಾವ್, ಕಾಕಾ ಕಾರಖಾನೀಸ, ಆರ್. ಗೋಪಾಲಸ್ವಾಮಿ ಅಯ್ಯರ್, ತಲಕಾಡು ರಂಗೇಗೌಡ ಮುಂತಾದವರು ಸಾಮಾಜಿಕ ಧ್ರುವೀಕರಣಕ್ಕಾಗಿ ನಿಷ್ಠೆಯಿಂದ ದುಡಿದವರು. ಇವತ್ತಿನ ಜನಪರ ಚಳವಳಿಗಳಿಗೆ ಈ ಎಲ್ಲಾ ಸಮಾಜ ಪರಿವರ್ತನಕಾರರ ಚಿಂತನೆಗಳು ಮಾದರಿಯಾಗಬೇಕಿದೆ. ಅಂಬೇಡ್ಕರ್ ಅವರ 'ಸಹಕಾರ ಕೃಷಿ ಪದ್ಧತಿ, ಜಾತಿ ವಿನಾಶ, ಪ್ರಭುತ್ವ ಮತ್ತು ಅಲ್ಪಸಂಖ್ಯಾತರು, ಭಾರತ ಸಂವಿಧಾನ, ಹಿಂದೂ ಕೋಡ್ ಬಿಲ್'ನಂತಹ ಚಿಂತನೆ, ಬರಹ ಮತ್ತು ಭಾಷಣಗಳು ಸಾಮಾಜಿಕ ಧ್ರುವೀಕರಣದ ತಾತ್ಪರ್ಯವನ್ನೇ ಮಂಡಿಸುತ್ತವೆ. ಅಂಬೇಡ್ಕರ್ ಅವರು ಭಾರತ ಸಂವಿಧಾನಕ್ಕೆ ಬರೆದಿರುವ ಪ್ರಸ್ತಾವನೆಯ ಆಶಯ ಹಾಗೂ ಅದು ಆರಂಭವಾಗುವ "ಭಾರತೀಯರಾದ ನಾವು (ವೀ ದ ಪೀಪಲ್ ಆಫ್ ಇಂಡಿಯಾ)" ಎಂಬ ಮಾತುಗಳು ಸಾಮಾಜಿಕ ಧ್ರುವೀಕರಣದ ಮಹತ್ವವನ್ನು ಮನವರಿಕೆ ಮಾಡುತ್ತವೆ. ನಮ್ಮ ಸಂವಿಧಾನಕ್ಕೆ ಇರುವ ಮೂಲಭೂತವಾದ ಧ್ರುವೀಕರಣದ ಗುಣದಿಂದಾಗಿಯೇ ಇವತ್ತಿಗೂ ಅಸಂಖ್ಯಾತ ಜಾತಿ, ಮತ, ಧರ್ಮ, ಸಮುದಾಯ, ಸಂಸ್ಕೃತಿ, ಆಚಾರ, ವಿಚಾರಗಳಿದ್ದಾಗಿಯೂ ಸಹ ಭಾರತ ಒಂದು ಒಕ್ಕೂಟ ರಾಷ್ಟ್ರವಾಗಿ ಉಳಿದುಕೊಳ್ಳಲಿಕ್ಕೆ ಸಾಧ್ಯವಾಗಿರುವುದು. ಮನುವಾದವು ಸಾಮಾಜಿಕ, ಸಾಮುದಾಯಿಕ ಛಿದ್ರೀಕರಣವನ್ನು ಪ್ರತಿಪಾದಿಸಿದರೆ; ಅಂಬೇಡ್ಕರ್‌ವಾದವು ಸಾಮಾಜಿಕ, ಸಾಮುದಾಯಿಕ ಧ್ರುವೀಕರಣವನ್ನು ದೃಢೀಕರಿಸುತ್ತದೆ. ಸಾಮಾಜಿಕ, ಸಾಮುದಾಯಿಕ ಧ್ರುವೀಕರಣದಿಂದ ಮಾತ್ರ ಬಹುಸಂಖ್ಯಾತ ಸಮುದಾಯಗಳ ರಾಜಕೀಯ ಧ್ರುವೀಕರಣ ಸಾಧ್ಯ. ಆಗ ಮಾತ್ರ ಬಹುಸಂಖ್ಯಾತ ಸಮುದಾಯಗಳು ರಾಜಕೀಯ ಹಕ್ಕು, ಅಧಿಕಾರಗಳನ್ನು ಪಡೆದುಕೊಳ್ಳಲು ಸಾಧ್ಯ.

ಸಾಮುದಾಯಿಕ ಧ್ರುವೀಕರಣವನ್ನು ಲೋಹಿಯಾ ಪ್ರಬಲವಾಗಿ ಅನುಮೋದಿಸಿದ್ದಾರೆ. "ಬ್ರಾಹ್ಮಣ, ಶೂದ್ರ, ದಲಿತರೆಲ್ಲಾ 'ಸಮಾನ ಪ್ರಸವಃ ಜಾತಿಃ' ಅಂದರೆ, ಸಮಾನ ಪ್ರಸವವುಳ್ಳವರೆಲ್ಲ ಒಂದು ಜಾತಿ. ಜರಾಯು (ಗರ್ಭಕೋಶ)ವಿನಿಂದ ಜನಿಸುವ (ಜಾತರಾದ) ಮನುಷ್ಯರೆಲ್ಲ ಒಂದು ಜಾತಿ. ...ಇಡೀ ಮನುಷ್ಯ ಕುಲವೇ ಒಂದು ಜಾತಿ ಎಂದು ತಿಳಿಯಬಲ್ಲ ಸರಳತೆಯನ್ನು ನಾವಿಂದು ಬೆಳೆಸಬೇಕಾಗಿದೆ." (ಕಣ್ಣೆದುರಿನ ಪ್ರಶ್ನೆಗಳು – ಲೋಹಿಯಾ ಬರಹಗಳು) ಪ್ರಸ್ತುತ ಜನಪರ ಚಳವಳಿಗಳು ಸಾಮುದಾಯಿಕವಾಗಿ, ಸೈದ್ಧಾಂತಿಕವಾಗಿ ಧ್ರುವೀಕರಣಗೊಳ್ಳಬೇಕಿದೆ. ಯಾಕೆಂದರೆ, ಅಂಬೇಡ್ಕರ್ ಅವರು ಹೇಳುವ ಹಾಗೆ : "ಭಾರತ ಸ್ವತಂತ್ರವಾದರಷ್ಟೇ ಸಾಲದು ಈ ದೇಶದಲ್ಲಿ ಹುಟ್ಟಿರುವ ಪ್ರತಿಯೊಬ್ಬ ಪ್ರಜೆಯೂ ಕೂಡ ಸಾಮಾಜಿಕ, ಆರ್ಥಿಕ, ರಾಜಕೀಯವಾಗಿ ಸಮಾನ ಹಕ್ಕುಳ್ಳವರಾಗಬೇಕು" ಎನ್ನುವ ಕಾಳಜಿಯನ್ನು ಸಾಕಾರಗೊಳಿಸಲಿಕ್ಕೆ.

**ಡಾ॥ ಅಪ್ಪಗೆರೆ ಸೋಮಶೇಖರ್**
ಸಹಾಯಕ ಪ್ರಾಧ್ಯಾಪಕ, ಕನ್ನಡ ವಿಭಾಗ, ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ
ಕಡಗಂಚಿ, ಆಳಂದ ರಸ್ತೆ, ಗುಲ್ಬರ್ಗಾ – ೫೮೫ ೩೬೭



# ದಲಿತರ ನಾಯಕ

ಕಡುಬಡತನದಲ್ಲಿ ಹುಟ್ಟಿ, ಎಲ್ಲಾ ತರಹದ
ಅವಮಾನಗಳನ್ನು ಸಹಿಸಿಕೊಂಡು
ಹಿಂದುಳಿದವರಿಗೋಸ್ಕರ
ಜೀವನದುದ್ದಕ್ಕೂ ಹೋರಾಟದ
ಹಾದಿಯಲ್ಲಿಯೇ ಸಾಗಿ ಉನ್ನತ
ಶಿಖರದಂತೆ ಪ್ರಜ್ವಲಿಸಿದ ನಾಯಕ.

ತನ್ನ ಜೀವನದುದ್ದಕ್ಕೂ ಕತ್ತಲಿನಲ್ಲಿದ್ದವರನ್ನು
ಬೆಳಕಿನೆಡೆಗೆ ತರುವಲ್ಲಿ ಪ್ರಮುಖ ಪಾತ್ರವಹಿಸಿದ
ದಲಿತರ ಪರ ಹೋರಾಡಲು ಅವರೊಳಗೊಬ್ಬರಂತೆ ದುಡಿದು
ಕೆಳವರ್ಗದ ಜನರ ಹಕ್ಕುಗಳಿಗೆ ಜೀವನಪರ್ಯಂತ ವಿಶ್ರಾಂತಿಯಿಲ್ಲದೆ
ಕೊನೆಯುಸಿರಿರುವವರೆಗೂ ಹಿಂದುಳಿದ ಜನಗಳ, ಜನಗಳಿಗೋಸ್ಕರ
ಜನಗಳೊಂದಿಗೆ ಬೆರೆತು ಸರ್ವತೋಮುಖ ಅಭಿವೃದ್ಧಿಗೆ ದುಡಿದ
ರಾಷ್ಟ್ರದ ಶ್ರೇಷ್ಠ ಹಾಗೂ ಏಕೈಕ ನಾಯಕ ಅಂಬೇಡ್ಕರ್.



ಚಿತ್ರಗಳ ಹಕ್ಕು : ಕಲಾವಿದರದು







Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

